ಯೊಳಕಟ್ಟಧರ್ಮಜನಹಯಮೇಧಕೆ ॥ ವಿಘ್ನಮಾದುದೆಶಿವಶಿವೆನುತಚಿಂತಿ
ಸಿದನಿದ । ಕಗ್ನಿಯಂಭಜಿಸಿನೋಡುವೆನೆಂದುನಿಜಕರವಿ । ಲಗ್ನಚಾಪವ
ನಿಳುಹಿಶುಚಿಯಾಗಿಪಾವಕನನರ್ಜುನಂಪ್ರಾರ್ಥಿಸಿದನು ॥ ೪೧ ॥
ಬಳಿಕನಲಸೂಕ್ತಂಗಳಿಂದನುತಿಗೈದುಭೂ । ತಳಕೊಂದಿಸಾಷ್ಟಾಂಗದಿಂ
ದೆರಗಿನಿಂದುನೀಂ । ಮುಳಿಯಲೇಕೀಮಖಂನಿನಗೈಸೆಮೇಣ್ನಿನ್ನಸಖಿಯಿಂದಬಿ
ಳಸುರರ್ಗೆ ॥ ತಳೆವುದುಹವಿರ್ಭಾಗವಿಹಚರಾಚರದಪೊರ । ಗೊಳಗೆಲ್ಲಮಂ
ನೀನೆನಿನ್ನಿಂದಮೂಲೋಕ । ದಳಿವುಳಿವುಸಾಕದಂತಿರಲೆನಗೆಮಾರ್ಗಮಂ
ಕೊಟ್ಟುಳುಹಬೇಕೆಂದನು ॥೪೨॥ ದೇವನೀನೆಂದುಗಾಂಡೀವಮಂತನಗಿತ್ತೆ ।
ಭಾವಿಸಲ್ಪಾಂಚಾಲೆನಿನ್ನೊಳುದುಭವಿಸಿದ । ಳಾವನ್ಯರೇನಿನಗೆಪೇಳೆಂದು
ನುತಿಸಿಕುಂತೀಸುತಂಬೇಡಿಕೊಳಲು ॥ ಪಾವಕಂಮೆಚ್ಚಿನುಡಿದಂಪಾರ್ಥ
ಕೇಳಾದೊ । ಡಾವುಮುಳಿಯೆವುನಿನಗೆಹರಿಸಮೀಪದೊಳಿರ್ದು । ಮೀವಾ
ಜಿಮೇಧಮೇಕಮೃತಮಿರಲಳಿಗೆಳದಿದಂತಾದುದೆನಲೆಂದನು ॥೪೩॥ ಆಹು
ದುನೀವೆಂಬುದಂವಿಚಾರಬಪ್ಪುದೆಹರಿಯು । ಸಹವಾಸಮೇಸಾಲ್ಗುಜಗದೋ
ಳ್ಪುಧರ್ಮಮಂ । ವಹಿಸುವವರಾರುಮಾಧವನಾಜ್ಞೆಯಾದಪುದುಮೇಣಂ
ತುಮಲ್ಲದೆಮಗೆ ॥ ವಿಹಗೇಂದ್ರವಾಹನಂಮಾಡಮೇಳ್ಕೆಂದನು । ಗ್ರಹಿಸಿದಂ
ಮಖಮನಿದಕೆಂತೆಂದುನರನೆನ । ಲ್ದಹಿಪುದಂಮಾಣ್ದೆನೆಂದಭಯಮಿತ್ತಗ್ನಿ
ನೀಲಧ್ವಜಂಗಿಂತೆಂದನು ॥೪೪॥ ಸಂಗರಂಬೇಡನರನೊಡನೆಸಾಕಾತನತು ।
ರಂಗಮವಬಿಡುನರನಗರಕೆಂದುವೈಶ್ವಾನ । ರಂಗುಣದೊಳರಸನಂತಿರುಗಿ
ಸಿದನತ್ತಲರ್ಜುನನುರಿಯಡಾವರಿಯನು ॥ ಭಂಗಿಸಿದನೆಚ್ಚುನಾರಾಯಣಾ
ಸ್ತ್ರದೊಳಂನೆ । ಗಂಗಗನಮಣಿಪಶ್ಚಿಮಾಂಗನೆಯುಬ್ಬೈತರಯ । ರಂಗುಪಮಾ
ಣಿಕದಂತೆಕಣ್ಗೆಕಾಣಿಸುತಿರ್ದುದಸ್ತಗಿರಿಮಸ್ತಕದೊಳು ॥೪೫॥ ರಂಜಿಸು
ವಪಶ್ಚಿಮಾಚಲಕಿರಾತಂತೊಟ್ಟ । ಗುಂಜಾಭರಣಮೊಮೇಣ್ಗಗನಾಂಬುಧಿ
ಯತಟಿಯ । ಮಂಜುವಿದ್ರುಮಲತೆಯೊಬಗೆಗಪರದಿಗ್ವಧುವಿನಂಗಕುಂಕು
ಮಲೇಪಮೋ ॥ ಅಂಜನೇಭದಸಿಂಧುರವೊಶಿವನಕೇಶಗಳ । ಕೆಂಜಡೆಯೊ
ವಿಷ್ಣುಪದಪಂಕರುಹದರುಣತೆಯೊ । ಸಂಜೆವೆಣ್ಣುಟ್ಟರಕ್ತಾಂಬರವೊ
ಪೇಳನಲ್ಕಾಬೈಗುಕೆಂಪೆಸೆದುದು ॥೪೬॥ ಬಿಚ್ಚಿಪೆಣೆವಕ್ಕಿಗಳಹೃದಯಮಂ
ಬೇಯಿಸುವ । ಪೊಚ್ಚಪೊಸಕೆಂಡಂಗಳೆನೆಲೋಕಮಂನುಂಗ । ಲಿಚ್ಛೈಸಿಬ
ಪ್ಪಕತ್ತಲೆಯೆಂಬಕಾಳಳರಕ್ಕಸಿಕೋಪದಿಂದುದುಗುಳ್ದ ॥ ಕಿಚ್ಚಿನಕಡಗಿ
ಡಿಗಳೆನತಂನಬಾಳುವಗೆ । ನಚ್ಚಿನವಳೀರಾತ್ರಿವಧುವೆಂದುಹಿಮಕರಂ । ಮೆ
ಚ್ಚಿ ಮುಂಗಳುಪಿದೆಳೆಮಾಣಿಕದಮಣಿಗಳೆನೆಸಂಜೆದಾರೆಗಳೆಸೆದುವು ॥೪೭॥

ಓಡಿದವುಪಕ್ಷಿಗಳ್ಗೂಡಿಂಗೆದೆಸೆಗಳಂ । ನೋಡಿದುವುಘೂಕಂಗಳಳಿಗಳಂಸೆದು।(ಸೆರೆಯಿಟ್ಟು)ಹೂಡಿದುವುಬಾಗಿಲಂಕಮಲಂಗಳರಲ್ದವಿಂದೀವರಂಗಳ್ಳಭದೊಳು ॥ ಮೂಡಿದುವುತಾರೆಗಳ್ಚಕ್ರವಾಕಂಗಳಂ । ಕಾಡಿದುವುವಿರಹತಾಪಂಗಳಿಳೆಯುಲ್ಲಮಂ । ತೀಡಿದುವುಕತ್ತಲೆಗಳಲ್ಲಿಗಲ್ಲಿಗೆಮನೆಮನೆಯಸೊಡರ್ಕಣ್ಗೆಸೆದುದು ॥೪೮॥ ರವಿಪಕ್ಷಿಮಾದ್ರಿಯಂಮರೆಗೊಳೆತಮಸ್ತೋಮಮವನಿಯಂಮುಸುಕಿತೀತೆರದೊಳಸಿತಧ್ವಜಂಬ । ರವದೋಳ್ಮುರಿದುಭಂಗಿತನಾಗಿತಿರುಗಿದಂತನ್ನಪಟ್ಟಣಕಿತ್ತಲು ॥ ಪವನಸಖನಂಬೇಡಿಕೊಂಡುನಾರಾಯಣಾ । ಸ್ತ್ರವನೆಚ್ಚುಪಚ್ಚಿದುರಿಯಂಕೆಡಿಸಿನಿಜಸೈನಿ । (ನಿಲಿಸಿ) ಕವನಲ್ಲಿಬಿಡಿಸಿದಂದೇವಪುರಲಕ್ಷ್ಮೀಪತಿಯುಮೈದುನಂಮುದದೊಳು ॥೪೯॥

ಸಂಧಿ ೮ಕ್ಕೆ ಪದ್ಯ ೪೩೭ ಕ್ಕಂ ಮಂಗಳ ಮಸ್ತು

---

## ಒಂಭತ್ತನೆಯ ಸಂಧಿ.

ಸೂ. ಜ್ವಾಲೆನಿಜಕಾಂತನಂಘಲದಿಂದಬಿಟ್ಟುತ । ನ್ನಾಲಯದೊಳಿರದೆಪೊರಮಟ್ಟುಬಂದರ್ಜುನನ । ಮೇಲೆತಂತ್ರವನೆಸಗಿಶಾಪಮಂಕೊಡಿಸಿದಳ್ದೇವನದಿಯಂಕೆರಳ್ಚಿ ॥

ಇಂದುಕುಲತಿಲಕಜನಮೇಜಯನರೇಂದ್ರಕೇ। ಳಂದುನೀಲಧ್ವಜಂತಿರುಗಿತಂನರಮನೆಗೆ । ಬಂದುವೈಶ್ವಾನರನನುಜ್ಞೆಯಿಂಪಾರ್ಥನತುರಂಗಮಂಬಿಡುವೆನೆಂದು ॥ ನಿಂದುಮಂತ್ರಿಗಳಕರಸಲ್ಕದಂಕೇಳ್ದುನಡೆ । ತಂದುನುಡಿದೆಳ್ಜ್ವಾಲೆಯೆಂಬರಸಿಪತಿಗೆನೀ । ನಿಂದುಸಿತವಾಹನಂಗೀಯದಿರ್ಕುದುರೆಯಂಬೆದರದಿರೆನುತತಡೆದಳು ॥೧॥ ಅನ್ನೆಗಂಕೇಳ್ದಜನಮೇಜಯನರೇಶ್ವರಂ । ತನ್ನಮನದೋಳ್ಸಂದೆಗಂಬಟ್ಟುಬೆಸಗೊಂಡ । ನಿನ್ನೊಮ್ಮೆತಿಳಿಪೆಲೆಮುನೀಂದ್ರಪಾವಕನೇತಕಾಪಟ್ಟಣದೊಳಿರ್ದನು ॥ ಮಂನಣೆಯುಮನೆಯುಳಿಯನೆಂತಾದನಾನೃಪನ । ಕಂನಿಕೆಯದೇನಮಾಡಿದಳದರವುತ್ತಾಂತ । ಮಂನಿರೂಪಿಸಿಪೇಳ್ವುದೆನೆಮತ್ತೆಜೈಮಿನಿ ಧರಾಧಿಪಂಗಿಂತೆಂದನು ॥೨॥ ಆಲಿಸಿನ್ನಾದೊಡೆಲೆಭೂಪನೀಲಧ್ವಜಂ । ಜ್ವಾಲೆಯಂಬರಸಿಯೋಳ್ಪಡೆದನತಿರೂಪಗುಣ । ಶೀಲಂಗಳಿಂದಸೆವತನುಜೆಯಂಸ್ವಾಹಾಭಿಧಾನದೋಳ್ಬೆಳೆವುತಿರುವ ॥ ಆಲೋಲಲೋಚನೆಗೆಜವ್ವನಂಬರೆಪಿತಂ । ಮೂಲೋಕದೊಳಗುಳ್ಳಪುರುಷರ್ಕಳಂಪತದ । ಮೇಲೆರೂಪಿಸಿತೋರಿದನಿದರೊಳಗಾರ್ನಿನಗೆವಲ್ಲಭರ್ಪೇಳ್ವುದೆಂದು॥ ವಿಪುಲಗಂಧರ್ವಯಕ್ಷೋರಗಸುರಾಸುರರ । ನಪಹಾಸಮಂಮಾಡಿಸಕಲಭೂಮಂಡಲದ । ನೃಪವ

ಗರ್ಮಂಪಳಿದುಹರಿಹರವಿರಿಂಚಿಶಕ್ರಾದಿಗಳನಿಳಿಕೆಗೈದು ॥ ತಪನೇಂದು
ಮನ್ಮಥವಸಂತರ್ಕಳಂಜರಿದು । ನುಪಮದಿಕ್ಪಾಲಕರನಡುವಕುಳ್ಳಿರ್ದು
ರಾ । ಜಪವೀತಿಹೋತ್ರನಂಕಂಡಿವಳ್ತೋರಿಸಿದಳೆನಗಿವಂಕಾಂತನೆಂದು
ಆನೀಲಕೇತುನೃಪನವಳನುಡಿಗೇಳ್ದಣುಗೆ । ನೀನಘಟಿತದವರವನೂ
ಹಿಸಿದೆಪೇಳೊದ್ದಡಾ । ನೇನಪ್ಪುದೆಂದುಚಿಂತಿಸುತಿರ್ಪತಾತನಂಜರಿದು
ಬೀಳ್ಕೊಂಡುಬಳಿಕ ॥ ಮಾನಿನಿಪುರೋದ್ಯಾನದೊಳ್ಪ್ರವಾಹಿರನರ್ಮ ।
ದಾನದಿಗೆಬಂದುಮಿಂದಲ್ಲಿಸುವ್ರತೆಯಾಗಿ । ನಾನಾವಿಧಾನದಿಂದರ್ಚಿಸಿದಳ
ಗ್ನಿಯುಂಭಕ್ತಿಯಿಂದನುದಿನದೊಳು ॥೫॥ ಪಾವಕಂಮೆಚ್ಚಿದನವಳಭಕ್ತಿ
ನೋಂಪಿಗೆಮ । ಹೀವಿಬುಧವೇಷಮಂತಾಳ್ದುನೀಲಧ್ವಜನ । ಜಾವಡಿಗೆ
ಬರಲಾತನಿದಿರೆದ್ದು ಸತ್ಕರಿಸಿಕೈಮುಗಿದುವಿನಯದಿಂದ ॥ ನೀವುಬಿಜಯಂ
ಗೈದಕಾರ್ಯಮಂಬೆಸಸಿಯೆನ । ಲಾವುಕನ್ಯಾರ್ಥಿಗಳ್ಕೊಡುನಿಂನಸುತೆಯ
ನಿದ । ಕಾವಣಿಕೆಬೇಡಭೂಭುಜರಿಯ್ಯಬಹುದುವಿಪ್ರಂಗೆಂದೊಡಿಂತೆಂದ
ನು ॥೬॥ ಕನ್ಯಾರ್ಥಿಯಾಗಿನೀವ್ಬಂದುಬೇಡುವದಿಳೆಯೊ । ಳನ್ಯಾಯವಲ್ಲ
ವಿಪ್ರರ್ಗೆಕೊಡಬಹುದುರಾ । ಜನ್ಯರದಕೇನೊಂದುಫಲದಿಂದತಂನಕುವ
ರಿಗೆಮರುತಸಖನಲ್ಲದೆ ॥ ಅನ್ಯರಂಪತಿಯಾಗಿವರಿಸಬೇಕೆಂಬಚ್ಛೆ । ತನ್ಯ
ಮಿಲ್ಲೇನುಮಾಡುವನಿಂನುನಿನಗೀವ । ಧನ್ಯತೆಗೆಬಾಹಿರಂತಾನಾದೆನೆನಲಾ
ಕಪಟವಿಪ್ರನಿಂತೆಂದನು ॥೭॥ ಪ್ರಾಪ್ತಮಾದುದುನಿಂನಮಗಳೆಣಿಕೆಸುವ್ರ
ತಸ । ಮಾಪ್ತಿಯುಂಮಾಡಿಸಿಂನಾನಗ್ನಿಸಂಶಯು । ವ್ಯಾಪ್ತಿಯುಂಬಿಡುಕೊ
ಡುನಿಜಾತ್ಮಜೆಯನೆನೆನಂಬದಾನೃಪಂಬಳಿಕತಂನ ॥ ಆಪ್ತಮಂತ್ರಿಯೊ
ಳೀಗಳಿವನಂಪರೀಕ್ಷಿಸನೆ । ಗೋಪ್ತಾರಸಾಜ್ಞೆಯಿಂಬಂದವಂನೋಡೆಶಿಖಿ
ದೀಪ್ತಿಯಂತೋರಲೆಮೆಗಡ್ಡಮೀಸೆಗಳುರಿಯಲನಲನೆಂದರಿದನಂದು ॥೮॥ಸ
ಪ್ತರಸನಂತಪ್ಪದೆಂದಾನೃಪಂತಿಳಿದು। ಗುಪ್ತದಿಂತಂನಸತಿತನುಜರಂಕರೆಸಿ
ಲೋ । ಲುಪ್ತಿಯಿಂಬಂದನಿವಗೀಯಬೇಕಣುಗಿಯಂಶಿಖಿಯಹುದೆನೋಡೆ
ನಲ್ಕೆ ॥ ತೃಪ್ತಭಾವದೊಳಾಕೆನಡೆತಂದುನಿಟ್ಟಸ । ಲ್ತಪ್ತಮಾದುದುಮೇ
ಲುದಿನವಸನವಯುಗಳಾ । ಕ್ಷಿಪ್ತಮಂಮಾಡಿನಗುತಿರ್ದನಾಭೂವರಂಗಭೆ
ಯೊಳ್ವಿನೋದದಿಂದ ॥೯॥ ಭೂಕಾಂತಕೇಳ್ಬಳಿಕ ನೀಲಧ್ವಜಾವನಿಪ ।
ನಾಕಪಟವಿಪ್ರನಂಕರೆವಗ್ನಿನೀನಾದೊ । ಡೀಕುವರಿಯಂಕೊಡುವನಿಂ
ದುಮೊದಲಾಗಿಮಾಹಿಷ್ಮತಿಯಪಟ್ಟಣಕ್ಕೆ ॥ ಪ್ರಾಕಾರವಾಗಿತಂನರಮ
ನೆಯೊಳಿಂದುಮಿರ । ಬೇಕೆಂದುಬೇಡಿಕೊಳಲೊಪ್ಪಿಪವಮಾನಸಖ ।ನಾ
ಕಮಲವದನೆಯುಂಮದುವೆಯಾದಂವಿಧಿವಿಧಾನವಿಭವಂಗಳಿಂದ ॥೧೦॥ ಶ್ರೀ

ಹೈಮವತಿಯರಂದುಗಾಭ್ಧಿಹಿಮಗಿರಿಗ । ಳಾಹರಿಹರರ್ಗೆಕೊಟ್ಟಂಬಿ
ಟ್ಟುಕೊಂಡಿರ್ಪ್ಪ । ಲೀಹುತವಹಂಗಾತ್ಮಜೆಯನಿತ್ತುಲಿಸಿಕೊಂಡಂನೀಲ
ಕೇತುಬಳಿಕ ॥ ಸ್ವಾಹಾವನಿತೆಯುಸಂಮೇಳವದನೌಖ್ಯದಿಂ । ಮಾಹಿಷ್ಮ
ತಿಯುಪಟ್ಟಣದೊಳಿರ್ಪನನಲಂಮ । ನೋಹರದವಿವಿಧಭೋಗದೊಳಂ
ದು ಮೊದಲಾಗಿಸಂದುಸಂತೋಷದಿಂದ ॥೧೧॥ ಅಲ್ಲಿಪಾವಕನಿರ್ಪಕಾರಣ
ಮಿದೀಗಮುಂ । ದಿಲ್ಲಿಯುಕಥಾಂತರವನರಸಕೇಳಾರಾತ್ರಿ। ಯಲ್ಲಿನೀಲಧ್ವಜ
ಮನೆಯೊಳಾಜ್ವಾಲೆಯುನಿರೂಪಮಂತಲೆಯೊಳಾಂತು ॥ ಸಲ್ಲಲಿತವಾಜಿ
ಯಂಬಿಡೆನಮ್ಮೊಡನೆಕಾದ । ದಲ್ಲದೆಂದಾಕಿರೀಟಗೆಪೇಳಿಸಿದನಿತ್ತ । ಪಲ್ಲ
ವಿಸಿತಮಲಪೂರ್ವಾಶಾಲತಿಕೆಯೆನಲ್ಕೆಂಪಡರ್ದುದುಮೂಡಲು ॥೧೨॥
ತನ್ನಪಗೆಬಾದಕತ್ತಲೆಯುಸಾರೂಪ್ಯದಿಂ ದಿಂನಿದೋರ್ಡೆಮಗಿನೆಂಮುಳಿಯು
ದಿರನೆಂದಂಜಿ । ಕನ್ನೈದಿಲೆಯುಮೊಗಂಬಾಡಿದುದುಕೂಡೆನಗುತಿರ್ದು
ವರವಿಂದಗಳು ॥ ಗಂನದೋಳ್ನಿರೆವಜಾರೆಯುರಕುಂಟಣಿಯಂತೆ । ಸಂನೆ
ಗೈದವುತಾಮ್ರಚೂಡಂಗಳೊಂದಿದುವು । ಮುಂನಿನಂತಿರೆಜಕ್ಕವಕ್ಕಿಗಳ್ಪಾ
ಡಿದುವು ತುಂಬಿಗಳ್ಬಂಡನರಸಿ ॥೧೩॥ ರಾಹುಮುನ್ನೊಮ್ಮೆತಂನಂತುಡು
ಕಿಬಿಟ್ಟನೆಂ । ಬಾಹಗೆಯುಮರಸಲೊಳಪೊಕ್ಕಪಾತಾಳದಮ । ಹಾಹಿ
ಸಂಕುಲಮನಾಕ್ರಮಿಸಿಪೆಡೆವಣಿಗಳಂತೆಗೆದುಕೊಂಡಾಗಲವನು ॥ ಸಾಹ
ಸಮ್ಮಿಗೆಚೆಲ್ಲುತೈತಪ್ಪನೊಂದೆಸೆದೆಸೆ । ಗಾಹರಿಹಯಂಪೇಳನಲ್ಪಸುಳಿವಿ
ಸಿಲಪ್ರ । ವಾಹಂಗಳೆತ್ತಲುಂಪರಿವಿನಿಂದಿನಪನುದಯುಂಗೈದುಬರುತಿರ್ದ
ನು ॥ ಇತ್ತಲವನೀಶಕೇಳುದಯವಾಗಗಮುಂನ । ಮತ್ತೆಮಾಹಿಷ್ಮತಿಯ
ಪಟ್ಟಣದ ಕೋಟೆಯುಂ । ಮುತ್ತಿಕೊಂಡುದುಸರನಚತುರಂಗವಾಜಿ
ಯೊಳುನೀಲಧ್ವಜನ ವಾಹಿನಿ ॥ ಒತ್ತಿಕವಿದುದುವೀರರೊದಗಿದರ್ಪ್ಪ
ಯದ್ದಾಡ । ಲಿತ್ತಂಡಮೊಡೆವೆರಸಿಚೂಣಿಗಾಳಗದಭಟ । ರೊತ್ತಿಗರ್ಸಂಥ
ಪಾಡುಗಳನೆಸಿತಧ್ವಜಂನಡಿದನರ್ಜುನನಮೇಲೆ॥ ತರಣಿತೊಲಗಿದಬಳಿಕ
ಮಿಂಚುಬುಳುವಿಗೆತಮಂ। ತೆರಳಬಲ್ಲುದೆಕೃಶಾನುಜ್ವಾಲೆಗಳುಕದಾ। ನರನ
ಳಿದವೀರರಂಬಗೆವನೇಪಡೆವೆರಸಿನೂಕಿದಂಕಣೆಗರೆನ್ನುತ ॥ ಮುರಿದುದುರು
ವಣೆಗವನಸೇನೆಬಳಿಕಳಲಿಗ। ರ್ತರಹರಿಸುತಸಹೋದರಮಂತ್ರಿಬಾಂಧವ।
ರು ರದೊಳಾಂತಳಿದರರ್ಜುನನೊಳಾತಂಕಾದಿನೊಂದುಮೂರ್ಛಿತನಾದ
ನು॥ಬಳಿಕಸಾರಥಿಮನೆಗೆತಂದನಾಭೂಪನಂ। ಪೊಳಲಪೇರ್ಬಾಗಿಲಳ್ಕಿಕ್ಕಿದ
ವುಕೋಟೆಕೊ। ತ್ತಳದಕಾವಲ್ಗಳಂಬಲಿದರಲ್ಲಲ್ಲಿಗಜಬಜಿಸಿತಾನಗರದೊಳ
ಗೆ॥ತಿಳಿದುದಾತನಮೂರ್ಛೆಕಣ್ಣೆರದುನೋಡಿಕೊಳುಗುಳದಪರಿಭವಕೆಬೆಂ

ಡಾಗಿನಿಜತನಯರಳಿ। ದಳಲಿಂದಬೈದನಸಿತಧ್ವಜಂಜ್ವಾಲೆಯುಂಪ್ರತಿಕೂಲೆ
ಯುಂಖತಿಯೊಳು॥೧೭॥ ನಿನ್ನೆಪಾರ್ಥನವಯುವಸಾತಂಗೆಬಿಡಲೀಯು । ದೆ
ನ್ನಕಡಿಸಿದೆಯುಲಾಪಾತಕಿಯೆಸುತರಳಿದ।ರಿನ್ನೇನುಘಾತಕಿಯೆಮತ್ಕುಲಕ
ನಿಷ್ಟನೀನತಿಕಷ್ಟಪೋಗುದುಷ್ಟೆ ॥ ಎನ್ನರಮನೆಯೊಳಿರದಿರೆಂದಾಗಲಾ
ಜ್ವಾಲೆ।ಯುಂನೀಲಕೇತುಘಟ್ಟಿಸಿಬೈದುಬಳಿಕಶ್ವ।ಮಂನರನೆಡೆಗೆಕಳುಪಿತಾ
ನಾಕಿರೀಟಿಯುಂಕಾಣಲ್ಕೆಪೊರಮಟ್ಟನು ॥೧೮॥ ಕೊಂಡುಬರಿಸಿದನಖಿಳವ
ಸ್ತುಗಳನಮಲಮಣಿ।ಮಂಡನಾದಿಗಳಂವಿವಿಧದುಕೂಲಂಗಳಂ । ಹಿಂಡಾ
ಕಳಂಮಹಿಷಿಗಳನುತ್ತಮಸ್ತ್ರೀಯರಂಗಜಹಯಾದಿಗಳನು ॥ ಭಂಡಾರದ
ರ್ಥಮಂಗುಡತೈಲಧಾನ್ಯಗಳ । ಬಂಡಿಗಳಮೇಲೆತುಂಬಿಸಿಪಾರ್ಥನಂಬಂ
ದು।ಕಂಡನಸಿತಧ್ವಜಂಬಳಿಕವನನರ್ಜುನಂಪ್ರೀತಿಮಿಗೆಮನ್ನಿಸಿದನು॥೧೯
ವಾಜಿನಡೆದುದುಬಳಿಕತೆಂಕಮುಖಮಾಗಿಸೇ।ನಾಜಲಧಿಸಹಿತನೀಲಧ್ವಜಂ
ಪೊರಮಟ್ಟ।ನಾಜನಪನಂಕೂಡಿಕೊಂಡುಮುಂದಕೆಸವ್ಯಸಾಚಿತೆರಳಿದನಿ
ತ್ತಲು ॥ ತೇಜವಿಲ್ಲದಮನೆಯೊಳುಂಪೆಂಣೊಡಲ್ಬಳಸು।ವೀಜೀವಮೇತಕೆ
ನಗೆನುತನಿಜವಲ್ಲಭನ।ರಾಜಗೃಹಮಂಬಿಟ್ಟುಪೋದಳಾಜ್ವಾಲೆಯುನ್ಮುಖ
ನೆಂಬತಮ್ಮನೆಡೆಗೆ ॥೨೦॥ ಉನ್ಮುಖಂಕಂಡಿದಿರ್ಗೊಂಡಗ್ರಜಾತೆಯಂ ।ಸ
ನ್ಮಾನಿಸಿದನೇಕೆಬಂದೆಯೆನೆಫಲ್ಗುಣಂ । ಮನ್ಮನೋರಥಮಲ್ಲಮಂಕೆ
ಡಿಸಿಮಕ್ಕಳಂಕೊಂದುಪತಿಯುಂಗೆಲ್ದನು ॥ ತನ್ಮರಣಕೊಂದುಪಾಯವನೆ
ಸಗದಿರಲೆನ್ನ।ಜನ್ಮವೇತಕೆನಿನ್ನದೆಸೆಯಿಂದನರನವಿಲ। ಸನ್ಮೌಳಿಮಸ್ತಕ
ವನರಿಸದಿರೆನೆಂದೊಡಾಜ್ವಾಲೆಗವನಿಂತೆಂದನು ॥೨೧॥ ಪಾಯಕರ್ಜುನನ
ತಲೆಬಿಧ್ಧಪುದೆಕೃಷ್ಣನಸ।ಹಾಯುಮಿರಲೆಲೆಮರುಳೆಹರಿಯುಹಗೆಗೊಂಡುಕೆ
ಡು।ವಾಯುಸಂತನಗೇಕೆರಾಘವಂಮಾಡಿದುಪಹತಿಯಿಂದಶಾಸನಂಗೆ॥ ದಾ
ಯುಮಂಪೇಳ್ದವನವಂಶವಂಸವರಿಸಿದ। ಮಾಯಕಾತಿಯುವೊಲೆನ್ನಾಲಯಕೆ
ಬಂದೆನಗೆ। ಪಾಯುಮಂತಾರದಿಲ್ಲಿಂದಪೋಗೆಂದವಳನುನ್ಮುಖಂಕೋಪಿಸಿದ
ನು ॥೨೨॥ ಜ್ವಾಲೆಬಳಿಕನುಜನಂಬೈದುಕೋಪದೊಳಾತ ।ನಾಲಯದಿಂ
ಳಿರದೆಪೊರಮಟ್ಟುನಡೆತರೆಮುಂದೆ। ಲೀಲೆಮಿಗೆನಲಿದುಳಿದುಸುಳಿದಿಳಿದುಬಿ
ಳಿದಳಿದುತೆಳಿದೆಳದುಪೊಳೆದುಸೆಳದು ॥ ಮೇಲೆಮೇಲೊದಗುವಘನಪ್ರವಾ
ಹದಸುಕ।ಲ್ಲೋಲಮಾಲಾಕುಲದಬುದ್ಬುದದಜಲಜಂತು । ಜಾಲದಲಳಿ
ಯುಲುಳಿಯುಲಹರಿಗಳವಿಸ್ತರದವರಗಂಗೆಯುಂಕಂಡಳು ॥೨೩॥ ತೆಳುಲುಡಿ
ಯುಮಳಲಿಡಿಯುಲಿತ್ತಡಿಯುತಳಗಡಿಯು । ಪೊಳೆನೆರೆಯುಲುಕೆಪೊರೆಯುಲೆಾ
ಳ್ದೊರೆಯುಬೆಳ್ನೊರೆಯು । ತೊಳಪೆಳೆಯುವಿಪಾನ್ಸೊಳೆಯುಲಿರದಿಳೆಯುಲೆಡೆಸೆಳೆ

ಯತುಂತುರಿನೆತನಿಗೆದರಿನ ॥ ಸುಳಿಸುಳಿಯುಸವ್ವಳಿಯುಬೊಬ್ಬೆಳಿಯುಕಡು ಲಳಿಯು। (ನವ್ವಳಿಯು) ಜಳಚರದಥರಥರದಶೀಕರದಭೀಕರದ।ತುಳಗಂಗೆ ಸುತರಂಗೆನೋಳ್ಪಂಗೆಸಲೆಕಣ್ಗೆ ಸೆದಳಂದುದಿವಿಜಸಿಂಧು ॥೬೪॥ ಕೂರ್ಮ ಗಡಿಯಾಗಿರ್ಪಗುಂಪಿನಿಂತನ್ನೆಡೆಯೊ। ಳಾರ್ಮುಳುಗಲವರಿಂದ್ರರಹರೆಂಬ ಪೇರ್ಮೆಯಿಂ । ಘೂರ್ಮಿಸುವಗಂಗಾಪ್ರವಾಹಮಂಕಂಡಳಾಜ್ವಾಲೆಬಳಿಕ ಲ್ಲಿನಿಂದು ॥ ಧಾರ್ಮಿಕರದರೊಳುಂಟೆತನ್ನನೆಂತಾದೊಡಂ । ನೀರ್ಮುಟ್ಟ ದಂತೊಯ್ಯನಾತಡಿಗೆದಾಂಟಸುವ । ಕೂರ್ಮೆಯುಳ್ಳವರೆಂದೊಡಲ್ಲಿರ್ದನಾ ವಿಕರ್ಕೇಳ ವಳ್ಗಿಂತೆಂದರು ॥೬೫॥

ಬಿಂದುಮಾತ್ರಂಮೇಲೆಬೀಳಲ್ಕೆವಿಪ್ರನಂ। ಕೊಂದಪಾಪಂಪೋಪುದಿಲ್ಲಿ ಮಿಂದವನೆಗತಿ । ಯುಂದವಂಬಂಣಿಸುವಡಜನಪವಣಿಲ್ಲನೀನಿಲ್ಲಿಗೇನಂಪ್ರಾ ರ್ಥಿಸಿ ॥ ಬಂದೆಗಂಗಾಂಬುವಂಮುಟ್ಟದಿರಬಹುದೆಪೇ । ಳೆಂದೊಡಾ ಜ್ವಾಲೆ ನುಡಿದಳ್ಜಾಹ್ನವಿಗೆದೋಷ । ಮೊಂದಿಹುದುನಿಮಗೊರೆವುದಿಲ್ಲ ಮವಳಿನಗೆಮೈದೋರಲುಸುರುವೆನೆಂದಳು ॥೬೬॥ ನೈಜದಿಂದಜನಕರಪಾ ತ್ರದಗ್ರೋದಕಂ । ವೈಜಯಂತೀಧರನಪಾದಾಂಬುಶಿವನತಲೆ । ಗೈಜಡೆ ವೆಳಸಿಗೇರ್ದಜೀವನಂತಾನಂತುಮಲ್ಲದತಿಪಾಪಂಗಳ ॥ ಮೈಜೋಡನು ಗಿದುಬಿಸುಡುವಗಂಗೆಬಿದರಿದಳ್ತ್ರೈಜಗದೊಳಪವಾದಕಂಜದವರುಂಟೆ ಕೇಳ್ಕೈಜನಪಜಲಧಿಜಾಹ್ನವಿಕೇಳ್ದು ಪೊರಮಟ್ಟಳವಳಿಂದ್ವಡಿಗೆನಡು ಗಿ ॥೬೭॥ ಅಂಬುರುಹಲೋಲಂಬಮತ್ಸ್ಯಕಚ್ಛಪವಾರಿ। ಕಂಬುಶೀಕರ ಚಕ್ರವಾಕಶೈವಾಲಕಾ । ದಂಬಗಂಭೀರಸೈಕತಮೃಣಾಳಂಗಳಿನ್ವಿತನಗವ ಯವಂಗಳಾಗೆ॥ ಇಂಬಾದಸೌಂದರ್ಯಮಾನದಿಯನಡುವೆಪ್ರತಿ । ಬಿಂಬಿ ಸಿದೊಲಿರೆದಿವ್ಯರೂಪವಳವಡಿಸಿಜಗ । ದಂಬೆಜಾಹ್ನವಿಸಲಿಲಮಧ್ಯದಿಂದೆ ದ್ದುಬಂದಾಜ್ವಾಲೆಯುಂಕೇಳ್ದಳು ॥೬೮॥ ದೋಷಹರೆತಾನೆಂದು ವೇದಶಾ ಸ್ತ್ರಂಗಳುರೆ । ಘೋಷಿಸವುಮುಟ್ಟಲಾಗದುತಂನನೆಂದುನೀಂ । ದೂಷಿ ಸುವಕಾರಣಮದಾವುದೋಜ್ವಾಲೆಹೇಳಂದುಜಾಹ್ನವಿ ನುಡಿದಳು ॥ ದೂ ಷಣದಮಾತನಾಡುವಳಲ್ಲಲೋಕದಸು । ಭಾಷಿತವನುಸುರಬೇಹುದುಪು ತ್ರರಿಲ್ಲದಿಹ । ಯೋಷಿದಂಗಸ್ಪರ್ಶನಂಪಾಪಮಂಬರದಕಾಗಿಬೆದರಿದೆನೆಂದ ಳು ॥ ೬೯ ॥ ಎಂದೊಡೆಕೇರಳ್ದುಭಾಗೀರಥಿಸಮಸ್ತನೃಪ । ಬೃಂದದೋ ಳ್ತಂನಮಗನುದ್ದಾಮನಾಗಿರ್ಪ । ನೆಂದುಮುಳಿವವನಲ್ಲಮವನುಸ್ವೇಭಾ ಮರಣಿಭಾಗವತಮಸ್ತಕಮಣಿ ॥ ಬೃಂದಾರಕೋಪಮಂಸತ್ಯಸಂಧಂಭೀ ಷ್ಮ । ನೆಂದುಮೂಲೋಕದೋಳನುಖ್ಯಾತನಾಗಿಹಂ। ಮಂದಮತಿನೀ

ನೆನಗೆಸುತರಿಲ್ಲೆನಲ್ಬಹುದೆಪ್ಪೋಗೆಂದೊಡಿಂತೆಂದಳು ||೩೦|| ಉಂಟುಸೀನಾ
ಡಿದಿನಿತೆಲ್ಲಮುಂತಪ್ಪವಹು | ದೆಂಟಕೊಂದುಳಿದುದಂಬಲ್ಲೆನಾನದರಿಂದ |
ವೆಂಟಣಿಸಿತಿನ್ನೆಗಂನಿನ್ನೇಳ್ಗೆ ಮೂಜಗದೊಳೀಗದಾಯಾದರೊಳಗೆ || ಗಂ
ಟಕ್ಕಿದಾಹವದೊಳಜರ್ನಂತವಸೂನು| ವೆಂಟಕ್ಕಿನಿಂಕೊಂದನಲ್ಲದಿರೊಡ್ಡ
ಡೆಮುತ್ತೆ | ಕಂಟಕವಮನೆತ್ತಣದುಭೀಷ್ಮನಭ್ಯುದಯಕೆಂದಾಜ್ವಾಲೆಕಾಲ್ಗೆ
ಡೆದಳು ||೩೧|| ಪಚ್ಚೆಲೆಯಮತರುವನೊಣಗಿದಮರವಪ್ಪೊಲೆಯುಕಾ | ಡ್ಗಿ
ಚ್ಚುಗೊಂಡುರಿವೊಲಾಜ್ವಾಲೆಯುಮುಳಿಸಿನೊಡನೆ |ಪೆಚ್ಚಿತಮರಾಪಗೆಯು
ಕೋಪವಮೆತ್ತಿದಹಸ್ತಿಡಿಂಭೀಷ್ಮನಂಧುರದೊಳು || ಎಚ್ಚಕೊಂದರ್ಜುನ
ನತಲೆಯನಾತನಸುತಂ | ಕೊಚ್ಚಿಕೆಡಹಲಿತಿಂಗಳಾರಕಾಂಕವದೊಳಿಂ|ದು
ಚ್ಚರಿಸಿಶಾಪಮಂಕೊಟ್ಟಡಗಿದಳ್ಜಲದಮಧ್ಯದೊಳ್ವಿಜತಟನಿ ||೩೨|| ನಾ
ರಿಯರಥಲವೆಂತಪೋಕೇಳ್ಮಹೀಶಭಾ | ಗೀರಥಿಗೆಕೋಪಮಂಬರಿಸಿಕೊ
ಡಿಸಿದಳತಿಕ| ಠೋರತರಶಾಪಮಂಜ್ವಾಲೆಬಳಿಕದುಸಾಲದಾನರನತಲೆಯ
ನರಿವ || ಕೂರಲಗಿನಸ್ತ್ರವಾದಪೆನೆಂದುಸುರನದಿಯು | ತೀರದೊಳ್ವಹ್ನಿ
ಪ್ರವೇಶಮಂಮಾಡಿಜಂ | ಭಾರಿತನಯನಸೂನುಬಭ್ರುವಾಹನನಮೊಡಿ
ಗೆಯೊಳಂಬಾಗಿರ್ದಳು ||೩೩|| ಬಂದುದುನರಂಗೆವಾಯದೊಳೀಗಶಾಪ
ವಿಾ| ಮಂದಾಕಿನಿಯುಮಾತುತಾಗಿದಲ್ಲದೆಮಾಣ |ದಿಂದುಕುಲಮಳಿವುದೀತ
ನಕೊಟೆಧರ್ಮಜಾದಿಗಳಸುವಿಡಿಯಲರಿಯರು ||ಮುಂದೆಸುರಪುರದಲಕ್ಷ್ಮೀ
ಕಾಂತನಾವತೆರ| ದಿಂದಪರಿಹರಿಸುವನೊತನ್ನಶರಣಾಗತರ | ನೊಂದು
ಮಾಯದೊಳುಳುಹದಿರನೆಂದುಧೈರ್ಯಮಂತಾಳ್ದರಿಂದ್ರಾದಿಸುರರು ||೩೪||

ಸಂಧಿ ೯ಕ್ಕೆ ಪದ್ಯ ೮೭೧ಕ್ಕಂ ಮಂಗಳಂ.

—...*...—

## ಹತ್ತನೆಯ ಸಂಧಿ.

ಸೂ || ಹರಿಶಿಲೆಯಮೇಲೆನಡೆಗೆಡೆಸವ್ಯಸಾಚಿಸಾ| ಭುಯದೆಸೆಯಿಂ
ದಲುದ್ದಾಲಕನಕಥೆಗೇಳು | ತಿಲದೆಹಂಸಧ್ವಜನಪಟ್ಟಣಕೆಬರಲ
ವೆಂಕಾದಲ್ಕೆಪೊರಮಟ್ಟನು.

ಆಲಿಸೆಲೆಜನಮೇಜಯಕ್ಷಿತಿಪಮುಂದಣಕ | ಥಾಲಾಪಕೌತುಕವನುಚಿ
ತದಿಂಫಲುಗುಣಂ | ನೀಲಧ್ವಜನಕಂಡಬಳಿಕಾತನಂಕಳುಹಿಕೊಂಡಖಿಳಸೇ
ನೆಸಹಿತಂ || ಮೇಲೆನಡೆದಂತೆಂಕಮುಖಮಾಗಿಹಯದೊಡನೆ| ಕಾಲಿಡುವ
ಮಂದಿಗಿಂಬಿಲ್ಲನೆಲನಾಗಸಂ|ನಾಲದೇಳುವಧೂಳಿಗೇಣ್ದಸೆಕಠೋರವಾದ್ಯ
ಧ್ವನಿಗೆನೆರೆಯದೆನಲು ||೧|| ಸಹದೇವನಾಗಿಸಮುದಿತನಕುಲನಾಗಿಸಂ| ನ

ಹಿತಾರ್ಜುನನುಮಾಗಿವರವೃಕೋದರನಾಗಿ । ಮಹದಿಳಾಭೃದ್ರಾಜನಾಗಿ
ಶಶಿಕಾಂತಕುಲದಿಂದಪಾಂಡವರುಮಾಗಿ ॥ ಅಹಿತರುಗಳಿಂಧಾರ್ತರಾಷ್ಟ್ರ
ರಂಕೂಡಿಕೊಂ । ಡಿಹುದರಿಂದಚಲನಾರ್ಹನೆಂದುಹರಿಯೊಡನೆ । ಬಹ
ಪಾರ್ಥನಂಕರೆದುಮೂದಲಿಪತೆರದಿಂದವಿಂಧ್ಯಾದ್ರಿಮುಂದೆಸೆದುದು ॥೧॥
ಎಸೆದುದಾಗಿರಿಗಗನಮಂಡಲವನಂಡಲೆವ। ಲಸದುನ್ನತಶೃಂಗದುತ್ತರದಸ
ತ್ಕರದ । ಶಶಿಕಾಂತಮಯಮಾದರಮಣೀಯಕಮನೀಯಕಂದರದಸೌಂದ
ರದೊಳು ॥ ಮುಸುಕಿತಪ್ಪಲವೀವಮಂಜುಗಳನಂಜುಗಳ । ದಶನದು
ಗ್ರಾಹಿಗಳಪುತ್ತುಗಳಮುತ್ತುಗಳ। ಬೆಸಲಾವಪರ್ಬಿದಿರಕಾಡುಗಳಬೀಡು
ಗಳಶಬರಿಯರಸಂಕುಲದೊಳು ॥೨॥ ಪಕ್ಷಿಮೃಗಜಾತಿಗಳುಲೀಲೆಮಿಗೆರಮಿ
ಸುತಿಹ । ಯಕ್ಷಕಿನ್ನರಕಿಂಪುರುಷಗರುಡಗಂಧರ್ವ। ರಕ್ಷೋಗಣಂಗಳಿಂ
ದಲ್ಲಲ್ಲಿಗೆಸೆವಪುಣ್ಯಾಶ್ರಮದಮುನಿಗಳಿಂದ ॥ ಋಕ್ಷವಾನರಕುಲದವಿವಿಧ
ಚೇಷ್ಟೆಗಳಿಂದ। ವೃಕ್ಷಲತೆಗಳಕುಸುಮಫಲಸಮೃದ್ಧಿಗಳಿಂದ । ಮುಕ್ತಿಗಚ
ಲೇಂದ್ರಮೆಸೆದಿರ್ದುದುಪುಳಿಂದಿನೀತನುಗಂಧಬಂಧುರದೊಳು॥೩॥ಅಭಿಲಾ
ಷೆಯಂತಿರೆಸದಾನವಂಸಿರಿಯಂತೆ । ವಿಭವಾಸ್ಪದಂಕಲಾನಿಧಿಯಂತೆಮೃಗ
ಧರಂ । ನಭದಂತೆಕುಜಯುತಂದ್ವಿಜನಂತೆವಂಶಪರಿಶೋಭಿತಂಸ್ವರ್ಗ
ದಂತೆ ॥ ಶುಭಸುರಭಿಸಂಭೃತಂರಣದಂತೆಶರಧೃತಂ । ಸಭೆಯಂತೆಚಿತ್ರ
ಪತ್ರಾನ್ವಿತಂದಿನಕರ । ಪ್ರಭೆಯಂತೆಪುಂಡರೀಕೋಲ್ಲಾಸಕರಮಾಗಿತ
ಚ್ಛೈಲಮೆಸೆದಿರ್ದುದು ॥೪॥ ನಾಗಭೂಷಣನಾಗಿಶಿವನಲ್ಲಹರಿಗಿರ್ಕೆ ।
ಯಾಗಿಪಾಲ್ಗಡಲಲ್ಲಿ ಶಿಬಿನಿವಾಸಸ್ಥಾನ । ಮಾಗಿದಿಗ್ಭಾಗಮಲ್ಲಷ್ಟಾಪದೋ
ದ್ಭಾಸಮಾಗಿನೈಪಥ್ಯಮಲ್ಲ ॥ ಗೋಗಣಾನ್ವಿತಮಾಗಿವ್ರಜಮಲ್ಲಖಡ್ಗಧರ ।
ನಾಗಿಪಟುಭಟನಲ್ಲಮಹಿಷೀವಿಲಾಸಕರ। ಮಾಗಿನೃಪಗೇಹಮಲ್ಲೆನಿಸಿರ್ದು
ದಾಶ್ಚರ್ಯಸೌಂದ್ರಮಚಲೇಂದ್ರಮೆಸೆವ ॥೫॥ ಶೃಂಗಮಯಮುರುಶಿಲಾ
ಪಾಂಗಮಯಮುದಿತಮಾ । (ಶಿಲಾಸಂಗ) ತಂಗಮಯಮನುಪಮಭು
ಜಂಗಮಯಮುನ್ನತಪ್ಲ । ವಂಗಮಯವಿತತಸಾರಂಗಮಯಮುದ್ಭುತದ
ಸಿಂಗಮಯಶರಭಮಯವು ॥ ಭೃಂಗಮಯವಿರಳವಿಹಂಗಮಯಮೊಪ್ಪು
ವಕು । ರಂಗಮಯಮಮರಿಯರನಂಗಮಯಕೇಳಿಗಳ । ಸಂಗಮಯಮನಿ
ಪಗಿರಿಭಂಗಮಯವಿಲ್ಲದುತ್ತುಂಗಮಯಮಾಗಿರ್ದುದು ॥ ೬ ॥ ಬಹುಕಾ
ಲಮನನೀರ್ಮಳಿಗರೆದಪುರುಷಾರ್ಥ । ಕಹಹಮೃದ್ಬಿಂದುಗಳನೀಗಸುರಿ
ದಪೆನೆಂದು । ಮಹಿನಭಸ್ಥಳಕುದುನ್ಮುಖಮಾಗಿ ಸೂಸುವರಜದಸೋ
ನೆಮೆನೆಧಳಿಡೆ॥ ಬಹಳತರುಗುಲ್ಮಲತೆಮೃಗಪಕ್ಷಿಕ್ರಿಮಿಕೀಟ । ಗುಹೆ

ದೆಸೆಸೆವೊರತಿಪಳ್ಳಕೊಳ್ಳಜರಿಸರಿಜಬುಗು । ಗಹನಗಂಹರದಪಿಂಛ್ವಾದಿ
ಯಂಫಲುಗುಣನಸೇನೆತುಳಿದಸಿಯುರೆದುದು ॥೮॥ ಹರಿಯುಸೇವಕರಬರವಂ
ಕಾಣುತಾವಿಂಧ್ಯ ।ಗಿರಿಯದುರ್ಮಾರ್ಗಮುಂಸನ್ಮಾರ್ಗವಾಯ್ತುದು । ಧರ್
ರಹೃದಯವನಜಾಂಧಕಾರಮುಂಸುಪ್ರಕಾಶಿತಮಾಯ್ತುವಿಕೃತಿಯಡಗಿ ॥
ಉರುತರಪ್ರಭಾವದಿವಿಮುಕ್ತಭಾವಿತಮಾಯ್ತು । ನಿರುಪಮಾಶಾಪರಿಜ್ಞಾನ
ಮಾಯ್ತಿರದೆಗೋ । ಚರಮಾಯ್ತುವಿಷ್ಣುಪದವಂನೆನಡೆದುದಾಹಯಂಬಿಂ
ಬಿಡದೆಸೇನೆಸಹಿತ ॥೯॥ ಮುಂದಿಸಂದಣಿಸಿಬಿಂಗೊಂಡುನಡೆತರೆಕುದುರೆ ।
ಮುಂದೆಬರೆಬರೆಕಂಡುದೊಂದುಯೋಜನದಗಲ । ದಿಂದೆಸೆವಶಿಲೆಯನದ
ರೊಳ್ಪೊರಳ್ದಪೆನೆಂಬತವಕದಿಂದತಿಭರದೊಳು ॥ ಬಂದಡರ್ದಾಕಲ್ಲಮೇ
ಲೆಹರಿಕಾಲಿಟ್ಟು । ದಂದುಹರಿಮುಟ್ಟದರೆಪೆಂಣಾದುದಂತೆಮೇ । ಣಿಂದಾಗ
ದಿರ್ದಪುದೆಪೇಳೆಂಬಿನಿಂಮಹೀಪಾಲಕೇಳದ್ಭುತವನು ॥೧೦॥ ಕಾಲಿಡಲ್ಕಾಶಿ
ಲೆಯೊಳಾತುರಂಗದಖುರಂ ।ಕೀಲಿಸಿತುಭಂಗಿಸದಕೊಡೆಚ್ಚಿಂದದಿಂ।ಮೇ
ಲೆನಡೆಗೆಟ್ಟುನಿಂದುದುದರಿದ್ರಸಮನೋರಥದಂತೆನಿಜತನುವಿನ ॥ ಕೀಲೆಯ್ದ
ಡಗಿರ್ದುದಾಕೃತಿಯಭಂಜಕೆಯೆನ । ಉಜ್ಭಲೋಲಕೇಳೈಕ್ಯವಾಗಿರ್ದುದಾ
ಕಲ್ಲೊ । ಳಾಲಕ್ಷಿತನಾಜಪೂರ್ಣೇಂದುಮಂಡಲದೊಳೊಪ್ಪುವಮೃಗಾಂಕ
ದತೆರದೊಳು ॥೧೧॥ ಗಾಳಿಯಂಮಿಕ್ಕುನಡೆವಾಹಯಂಕಾಲ್ಗಳಂ । ಕೀಳ
ಲಾರದೆನಿಂದುಧರೆಯೊಳೇನಚ್ಚರಿಯೊ । ಪೇಳಬೇಕೆಂದುಚರರೈತಂದುಪಾ
ರ್ಥಂಗೆಬಿನ್ನೈಸಿಕೈಮುಗಿಯಲು ॥ ಕೇಳಿವಿಸ್ಮಿತನಾಗಿಬಂದುನೋಡಿದನ
ಲ್ಲಿ । ನಾಳನಟ್ಟದನಬ್ಬರಿಸಿನೆಳೆಗಳೆಂದಪ್ಪೇಳು । ದೇಳಿಸಿದೊಡದುವಜ್ರಲೇ
ಪವಾದುದುಸಿಲುಕಿತಾಕುದುರೆಕಲ್ಲೆಡೆಯೊಳು ॥೧೨॥ ಬಳಿಕಬೆಂಕಿಸಿದನ
ರ್ಜುನನಿದೇನಾದೊಡಂ ।ಮುಳಿದಮುನಿಪನಶಾಪಮಾಗಬೇಕೀವನ ।ಸ್ಥ
ಳದೊಳಾಶ್ರಮಮುಂಟೆನೋಳ್ಪದಗಲದೊಳೆಂದುಚಾರರಂಕಳುಪಲವರು॥
ತೊಳಲಿನಿಮಿಷದೊಳರಸಿಬಂದುಬಿನ್ನೈಸಲ್ಕೆ।ಫಲುಗುಣಪ್ರದ್ಯುಮ್ನವೃಷ
ಕೇತುವನುಸಾಲ್ವ । ಕಲಿಯೌವನಾಶ್ವನೀಲಧ್ವಜರ ನೈಪಡಂಕೂಡಿಕೊಂ
ಡೈತಂದನು ॥೧೩॥ಪಗ್ಗಿಸಲಿನಚಂದ್ರಪವನಿಬಿಪರ್ಜನ್ಯ । ರೊಗ್ಗಿಕರು
ವ್ಯೆರವಿಲ್ಲದನಿಖಿಳಮೃಗಪಕ್ಷಿ । ನೊಗ್ಗಲಕಾರ್ಯಪ್ಪಣ್ಡಿಗರ್ಗಳಂಬೀಯು
ವಂದೆಂದುಮೆಲ್ಲಾತರುಗಳು ॥ ಸಗ್ಗದವರಂತೆಬೇಡಿದನೀವುದಾವಗಂ । ಸು
ಗ್ಗಿಯಾಗಿಹವಾರುಋತುಗಳುಂಸಲೆಪೆಚ್ಚಿ । ತಗ್ಗುಶೀತೋಷ್ಣಸುಖದುಃ
ಖಂಗಳೊಗೆಯದಾಶ್ರಮವೊಂದುಮುಂದೆಸೆದುದು ।೧೪॥ ವೇದಶಾಸ್ತ್ರಾಗ
ಮಸ್ಮೃತಿಪುರಾಣಾವಳಿಯ।ನೋದಿಸುಪಕುಶಿಸಮಿತ್ಪುಷ್ಪಫಲಮೂಲಪ।

ರಣ್ಣಾದಿಗಳನೊದವಿಸುವಜಪತಪಸ್ನಾನಾಗ್ನಿಹೋತ್ರವಿಧಿವೇಳೆಗಳನು॥ ಸತಿ
ಥಿಸುವರವಿನಮಸ್ಕಾರಹರಿಹರಸಮಾ।ರಾಧನೆಗಳಮಾಡುವತಿಥಿಗಳನರ್ಥಿ
ಯಿಂ। ದಾಥರಿಪಯೋಗಮಾರ್ಗದೊಳೆಸೆವಮುನಿಗಳಾಶ್ರಮದೆಡೆಯೊಳಿರು
ತಿರ್ದರು॥೧೫॥ಸುಡದಿರ್ದಪಾವಕನೊಬಿಸಿಲ್ಗಾಣ್ದರವಿಯೊತಂ। ಪಿಡಿದಿರ
ದಚಂದ್ರಮನೊವಿಷಕಂಠನಾಗದಿಹ। ಮೃಡನೊರಜಮಂಪೊದ್ದದಂಬು
ಜಾಸನನೊಫಣಿತಲ್ಪನಲ್ಲದವಿಷ್ಣುವೋ॥ ಕಡುತೇಜದೊಬ್ಬುಳಿಯೊಶಾಂ
ತಿಯನಿಜಾಕಾರ।ದೊಡಲೊಪೇಳೆಂಬಸೌಭರಿಮುನಿಪನಾಶ್ರಮದ।ನಡುವೆ
ಕುಳ್ಳಿರ್ದುಸುಖಯೋಗದೊಳಿರಲ್ಕೆ ನಡೆತಂದನರ್ಜುನಂಕಂಡನು ।೧೬॥
ಬಂದುಸಾಷ್ಟಾಂಗದಿಂರದೆಗಿಸೌಭರಿಮುನಿಯ।ಮುಂದೆಕ್ಕೈಮುಗಿದುನಿಲಲಾ
ಪಾರ್ಥನಂಪ್ರೀತಿ।ಇಂದಸತ್ಕರಿಸಿಕುಶಲಂಗಳಂಕೇಳ್ದಿಲ್ಲಿಗೇಕೆಬರವಾಯಿತೆ
ನಲು॥ ಅಂದುಕುಲಗೋತ್ರಮಂಕೊಂದಪಾಪಂಪೋಗ। ಲೆಂದಶ್ವಮೇಧ
ಮಂತೊಡಗಿಯೆಂನಂಧರ್ಮ। ನಂದನಂಕಳುಪಿದಂಹಯರಕ್ಷೆಗದರೊಡನೆ
ಬರೆಸಿಲುಕಿತದುಶಿರೆಯೊಳು ॥೧೭॥ ಎಲೆಮುನೀಶ್ವರತವಾನುಗ್ರಹದೊಳ
ಲ್ಲದೀ। ಶಿಲೆಯೊಳೊಂದಿದಹಯಂಬಿಡುವದಂಕಾಣೆನೀ। ನುಳುಹಬೇಕೆಂದೆ
ರಗಲರ್ಜುನನಮೊಗನೋಡಿನಗುತಸೌಭರಿನುಡಿದನು॥ ತಿಳುಪಿದಂಪಿಂ
ತೆಭಾರತಯುದ್ಧಮಧ್ಯದೋ।ಳ್ನಳಿನನಾಭಂನಿನಗೆಮತ್ತೆಯುಮಹಂಕಾರ।
ಮಳಿದುದಿಲ್ಲಕಟಜಗದೋಳ್ಕೊಲ್ವರಾರ್ಕಾಯ್ವರಾರ್ಬಲ್ಲಡುಸುರೆಂದನು॥
ಶ್ರೀಕೃಷ್ಣನಿರೆಮುಂದೆವಂಶಮಂಕೊಂದೆನೆಂ। ಬೀಕೃತ್ಯದಿಂಪಾತಕಂಬಹು
ದೆನಿಂನೋಳ್ಸ। ಧಾಕೃಪಾನಿಧಿಯಸಾನ್ನಿಧ್ಯಮಿರುತಿರಲಾಗಿವಾಜಿಮೇಧಂ
ಬೇಹುದೆ॥ಅಕೃತಾಂತಕನರಿದುದಿಲ್ಲಲಾಲೋಕದೋ।ಳ್ಪ್ರಾಕೃತರತೆರದಿಂ
ದಹರಿಮನೆಯೊಳಿರೆಗರ್ಧ। ಬಾಕೃತಿಯಹರಿಯೊಡನೆಬಂದಸುರಭೂಜ
ಮಿರೆಶಾಲ್ಮಲಿಯನರಸುವಂತೆ ॥೧೮॥ ಕೊಟ್ಟಿಗೆಯಕಾಮಧೇನುವನೊಲ್ಲ
ದಾರ್ಥಿಯಿಂ। ಕಟ್ಟರಣ್ಯದಪುಲಿಯನರಸಿಕರುಲ್ಕೊಡೆಯ। ಕಟ್ಟವೆ
ಯಲಾತುರಗಮೇಧಮೇಗ್ಯನ್ಮದಾಹರಿಯಸಾನ್ನಿಧ್ಯಮಿರಲು॥ ಹುಟ್ಟತಿಲ್ಲ
ವನಿನಗರಿಪುಧರ್ಮಸೂನುಮತಿ।ಗೆಟ್ಟಹನೆಶಿವಶಿವವೃಥಾಪರಿಭ್ರಮಣನಿಮ।
ಗಟ್ಟಿತೆಂದಮರೇಂದ್ರಸೂನುವಂಜರಿದುಸೌಭರಿನುಡಿದೊಡಿಂತೆಂದನು ॥
ಹರಿಯನುಳಿದಾವುಬದುಕುವರಲ್ಲಚಿತ್ತದೋ। ಳ್ಚರಿತನಾಗಿಹನಾವಗಂಧರ್ಮ
ಸೂನುಮರೆ।ದಿರನಾಮುರಾರಿಯನಿರೂಪದಿಂತೊಡಗಿಮಾಡುವನೀಮಹಾ
ಕ್ರತುವನು॥ ತರಳತೆಯುಮರವೆಗಳಿವನುಪದೇಶಿಪಡೆನೀ। ನ್ಗುರುಗಳಲ್ಲವೆ
ನಾವುಧನ್ಯರಾದಪೆವಿನ್ನು। ಕರುಣದಿಂದೀಶಿಲೆಯೊಳೊಂದಿದತುರಂಗಮಂ

ಬಿಡಿಸಿಕೊಡಬೇಕೆಂದನು॥೧೨॥ ಇನ್ನುಚಿಂತಿಸದೆಕೃಷ್ಣಸ್ಮರಣೆಯಂಮಾಡಿ।
ನಿನ್ನಹಸ್ತಸ್ಪರ್ಶನಂಗೈದೊಡಾಕುದುರೆ । ಮುನ್ನಿನಂತವನಿಯೊಳ್ನಡೆದ
ಪುದುಪೋಗುನೀನೆಂದುಸೌಭರಿನುಡಿಯಲು॥ ತನ್ನೊಳಗೆತಾನೆವಿಸ್ಮಿತನಾ
ಗಿಪಾರ್ಥನದ। ರುನ್ನತಿಯುತುದಿವೊದಲನರುಪೆನಲ್ಜ್ಞಾನಸಂ।ಪನ್ನತಾ
ಪಸನರ್ಜುನಂಗೆವಿಸ್ತರಿಸಿದಂಮತ್ತೆಪೂರ್ವಾಪರವನು॥೧೩॥ಆಲಿಸರ್ಜುನ
ಮುನ್ನವಿಪ್ರನುಂಟೊರ್ವನು।ದ್ದಾಲಕಾಖ್ಯಂತಿಳಿದನಖಿಳಶಾಸ್ತ್ರಂಗಳಂ।
ಮೇಲೆವೈವಾಹದೊಳ್ವಧುವಾದಳಾತಂಗೆಚಂಡಿಯೆಂಬಾಕೆಬಳಿಕ॥ ಕಾಲ
ಕಾಲದಜಪಾನುಷ್ಠಾನಪೂಜೆಗಳಿ । ಗಾಲಸ್ಯಮಂಮಾಡದೆನ್ನಪರಿಚರ್ಯಕ
ನು । ಕೂಲೆಯಾಗಿರ್ದುಮನೆವಾರ್ತೆಯಂಸಾಗಿಪುದುನೀನೆಂದೊಡಿಂತೆಂದ
ಳು॥ಎಕ್ಕೈನಿತುನಿಂನಮಾತಂಕೇಳ್ವಳೆಂದೊಣಿಕೆ।ಗೊಳ್ಳದಿರ್ಪರಿಚರ್ಯಮನೆವಾ
ರ್ತೆಯೆಂದೆಂಬ।ತಳ್ಳಿಯುವಳಲ್ಲನೀನೆಂದುದಮ್ಮಾಡೆಸಂದಾಚಂಡಿಚಂಡಿಗೊಳ
ಲು ॥ ಮುಳ್ಳಿಡಿದಮರನೇರಿದಂತಾದುದಿಹಪರಕಿ । ದೊಳ್ಳಿತಾದಪುದೆಬಂ
ದುದುತಪೋಹಾನಿಯುಂ । ದಳ್ಳಿಯೊಳ್ಕೋಲ್ಗೊಂಡತೆರದಲುದ್ದಾಲಕಂ
ಚಿಂತಿಪಂಪ್ರತಿದಿನದೊಳು ॥೧೪॥ ಇಂತಿರುತಿರಲ್ಕೆಕೌಂಡಿನ್ಯನೆಂಬೊರ್ವ
ಮುನಿ।ಪಂತನ್ನಮನೆಗೆಬರಲಾತನಂಸತ್ಕರಿಸಿ । ಚಿಂತೆವೆತ್ತಿರಲವನಿದೇನೆಂ
ದುಬೆಸಗೊಂಡಡವಳಪ್ರತಿಕೂಲತೆಯನು ॥ ಅಂತರಿಸದೆಲ್ಲಮಂಪೇಳ್ದೊಡ
ವನಿದಕೆನೀಂ।ಮುಂತೆವಿಪರೀತಮುಂಮಾಡಲಾದಪುದೆಂದು । ಸಂತಾಪಮಂ
ಬಿಡಿಸಿಬೀಳ್ಕೊಂಡವಂತೀರ್ಥಯಾತ್ರೆಗೈದಿದನತ್ತಲು ॥೧೫॥ ಉದ್ದಾಲಕಂ
ಬಳಿಕತನ್ನಮಂದಿರದೊಳಿರು।ತಿದ್ದಸಮಯಕೆಪಿತೃಶ್ರಾದ್ಧದಿವಸಂಬಂದ ।
ಡೆದ್ದುಚಂಡಿಯೊಳೆಲಗೆನಾಳೆಪೈತೃಕಮದಂನಾತಿದಲ್ಲದಮಾಡೆನು ॥ ಕದ್ದು
ತಹೆನಧಮಧಾನ್ಯವ್ರೀಹಿಶಾಕಮುಂ। ಮೊದ್ದಲಿಯ್ಯಂಶುದ್ಧವಸ್ತುಗಳನುಂ
ದುಮುಂ । ತದ್ದಿನಕೆಮರುದಿವಸದೊಳ್ಪೇಳ್ದಬಹೆನಪಾತ್ರಂಗೆಂದೊಡಿಂ
ತೆಂದಳು ॥೧೬॥ ನಾಳೆಮಾಡಿಸುವೆನಾಂಪೈತೃಕವನುತ್ತಮದ। ಶಾಲಿಧಾನ್ಯ
ವ್ರೀಹಿಶಾಕಮಂಕೊಂಡುಬಹೆ। ನಾಲಯುವನತಿಶುದ್ಧವಾದವಸ್ತುಗಳನಲ್ಲ
ದೆಕೊಡೆನರ್ಥಿಯಿಂದ ॥ ಪೇಳಿಸುವನಂದಿನದಿನದಮೊದಲರಾತ್ರಿಯವಿ ।
ಶಾಲಗುಣಸಂಪಂನವೇದಪಾರಂಗತನು। ಶೀಲರಹಸತ್ಪಾತ್ರದವನಿಯಮರ
ರ್ಗನಲ್ಲಂಡಿಗವನಿಂತೆಂದನು ॥೧೭॥ ಆದೊಡೆಕುತುಪಕಾಲಮಂಬಿಡುವೆ
ನರ್ಚನಯೊ।ಳಾದರಿಸೆನಾಂಬಂದವಿಪ್ರರಂಪಾಕದನ। ವೋದನಸುಪಾಯ
ಸಗುಡಾಜ್ಯಮಧುತೈಲಮೃದುಭಕ್ಷ್ಯಭೋಜ್ಯಾದಿಗಳನು ॥ ಸ್ವಾದುಫಲ
ಶರ್ಕರೆವಿನುತಶಾಕನಿರ್ಮಲಪ। ಯೋದಧಿಗಳಂಸಕುತ್ಸಿತವಾಗದಂತೆಸಂ

ಮಾಡಿಸಿಪಿತೃಶ್ರಾದ್ಧಮುಮಮ್ಮಾಡಿವಸ್ತ್ರದಕ್ಷಿಣೆಗಳಂಕೊಡೆನೆಂದನು ॥೨೮॥
ಎಂದೊಡೆಕುತುಪಕಾಲಮುಂಮೀರದೀಯೆನಾಂ । ಬಂದವಿಪ್ರರನಾದರಿಸಿ
ಪೂಜೆಗೈಸದಿರೆ । ನಿಂದೊಲ್ಲೆನೆಂದುವಕ್ಕಣಿಸಿದಿನಿತೆಲ್ಲಮುಂಸಂಪಾದಿಸದೆ
ಮಾಣೆನು ॥ ತಂದಮಲವಸ್ತ್ರತಾಂಬೂಲವರದಕ್ಷಿಣೆಗೆ । ಳಿಂದಸತ್ಕರಿಸಿ
ಕಳುಹಿಸದೆಬಿಡೆನೆನುತನಲ । ವಿಂದೊದವಿಸಿದಳಖಿಲಸದ್ದ್ರವ್ಯಮುಂಬಳಿಕ
ಚಂಡಿಪಾಕಂಗೈದಳು ॥೨೯॥ ಕಂಡನೀತೆರನನುದ್ದಾಲಕಂಸಂತಸಂ ।
ಗೊಂಡುಮನದೊಳುಪೂರಗೆತಾನೊಪ್ಪದವನಾಗಿ। ಚಂಡಿಪೇಳಿದವೊಲಾ
ಶ್ರಾದ್ಧಮುಂಮಾಡಿಸಂಪ್ರೀತಿಯಿಂವಿಪರೀತದ ॥ ತೊಂಡುತೊಳಸಂಮರೆ
ದುಕರ್ಮಾಂಗಮಾಗಿರ್ದ ।ಪಿಂಡಮಂತೆಗೆದುಮಡುವಿನೊಳುಹಾಯ್ಕೆಂದೊ
ಡು । ದ್ದಂಡದಿಂದೆತ್ತಿಬೀದಿಗೆಬಿಸುಡಲಾದ್ವಿಜಂರೋಷಭೀಷಣನಾದನು ॥
ಎಲೆಗೆನಿಂನೊಡನೆನಾನೇಂಹರಿಯಹೋರುವೆಂ । ಛಲತನಕೆಳಸಿದನೀನರೆ
ಯಾಗಿಹೋಗೆಂದು । ಸಲೆಮುಳಿದುಶಾಪಮುಂಕೊಟ್ಟುಕಾರುಣ್ಯದಿಂದಾ
ದ್ವಿಜಂಕೂಡೆತಿಳಿದು ॥ ಕೆಲವುಕಾಲಕೆನಿನ್ನೊಳಧ್ವರಹಯಂಬಂದು । ನಿ
ಲಲರ್ಜುನಂಬಿಡಿಸಿದೊಡೆಮೋಕ್ಷಮಹುದೆಂದು । ತೊಲಗಿದಂಸನ್ಯಾಸಕ
ವನತ್ತಲವನಿಯೊಳ್ಕಲ್ಲಾದಳಿವಳಿತ್ತಲು ॥ಮೋಕ್ಷಮಹುದಾಗಿಚಂಡಿಗೆಶಾಪ
ವಿಗಲುಪ । ನಾತ್ರಿಗೈತಂದುನಿಂದುದುಹಯಂನೀಮುಟ್ಟ ।ಲೀಕ್ಷಣಾದೊ
ಳೆದ್ದುಪೋದಪುದುಪೋಗಿಂನುಮುಂದಣನೃಪರ್ಬಲವಂತರು ॥ ರಾಕ್ಷಸಾರಿ
ಯನೆಮರೆಯದಿರೆಂದುಸೌಭರಿನಿ । ರೀಕ್ಷಿಸಿಕೃಪಾವಲೋಕನದಿಂದಪರಸ
ಹ।ಸ್ರಾಕ್ಷನಕುಮಾರನಂಕಳುಹಲಾನತನಾಗಿವಿನಯದಿಂಬೀಳ್ಕೊಂಡನು॥
ತದನಂತರದೊಳರ್ಜುನಂಬಂದುಕುದುರೆಯುಂ।ಮುದದಿಂದಮುಟ್ಟಲದುಬಿ
ಟ್ಟುನಡೆದುದುಮುಂದೆ । ಕೊದರಿಕೊಳುತೆದ್ದುನರನಂಕಂಡುಚಂಡಿತಪ
ಕಾಗಿಕಳುಹಿಸಿಕೊಂಡಳು ॥ ಒದವಿದಸಮಸ್ತಜನಮಾಗವಿಸ್ಮಿತಮಾದು ।
ದುಮರಿತುಕುಸುಮವೃಷ್ಟಿಬಳಿಕದಕ್ಷಿಣಕೆನಡೆ। ದುದುವಾಜಿಚಂಪಕಾಪು
ರಕಂದುಹಿಂದೆಬಹಪಡೆಸಹಿತವಹಿಲದಿಂದ ॥ಘನಘೋಷದಿಂದವಾಹಿನಿಗ
ಳೈತರುತಿರಲ್ವನಧಿಮೇರೆಯನತಿಕ್ರಮಿಸಿಬಂದಪುದೆಂದು । ಮುನಿದುಭೂ
ಮಂಡಲಮಿರದನಭಸ್ಥಳಕೆಪೋಪಂತೆಧೂಳೇಳುತಿರಲು ॥ ಆನುಸಾಲ್ವಸಾ
ತ್ಯಕಿಪ್ರದ್ಯುಮ್ನಯೌವನಾ ।ಶ್ವನತನಯವೃಷಕೇತುನೀಲಧ್ವಜರಸೈನ್ಯ।
ಮನುಪಮಿತಮಾಗಿನಡೆದುದುಚಂಪಕಾನಗರ್ಗರ್ಜುನನಹಯದಕೂಡೆ॥ತ
ವೆಸರ್ವಮಂಗಳಾಸ್ಪದಮಾದೊಡಂಪರಾ । ಭವಯುಕ್ತಮಾಗಿರ್ಪುದೆಂದು
ಕೈಲಾಸಾಚ । ಲವನತುಳಲಕ್ಷ್ಮೀನಿಳಯಮಾದೊಡಂಭಂಗಸಹಿತಮಾಗಿ

Funding: Tattva Heritage Foundation,Kolkata. Digitization: eGangotri.



ರ್ಪ್ಪದೆಂಬ ॥ ಅವಿರಳಪಯೆಶೋನಿಧಿಯುನಟ್ಟಹಾಸನನುವಾ । ಡುವ್ರೊಲಿ
ರ್ದ್ದಾಪುರಪ್ರಾಸಾದಕೋಟೆಗಳ । ಧವಳಿಮಸುಧಾಕೀರ್ಣರುಚಿಗಳಿಂಪ್ರೊ
ರಗೆನೋಡುವಜನರ್ಗೆವೇಳ್ಪೆನು ॥೩೫॥ ಆ ದುಪುರಸ್ತ್ರೀಯಮಣಿಕಾಂ
ಚೀನವಯವಭೂಷ । ಸುದತಿಯರಕೊರಳಲಿರಾಜಿಪರತ್ನಮಾಲೆಕೆಯೋ
ತ್ರಿದಶಪತಿಗಿರಿಗಳಂಕಡಿವಂದುತೆಗೆದಿಡುವೆನೆಂದುತಿರುಪ್ಪುವಕುಲಿಶದ ॥ಪ್ರೊ
ದರುವೆಳಗಳಿಗಿಳಿದುವಪ್ರಮುಯವಾಗಿನಿಂ । ದುದೊವಿಮಲಕೀರ್ತಿಚಂ
ದ್ರಿಕೆಯುಪೆರಪುಶಿಖನಗ । ರದರಾಜಮಂಡಲದಪರಿವೇಷವೋಪ್ಸೇಳೆನ
ಲ್ಕೊಟೆಕಣ್ಗೆಸೆದುದು ॥ ೩೬ ॥ ಆನಗರದರಸುಹಂಸಧ್ವಜಂಕೇಳ್ದನೀ ।
ಸೇನೆಸಹಿತರ್ಜ್ಜನಂಪರವುಖತುರಂಗರ । ಷ್ಠಾನಿಮಿತ್ತಂಬಂದುಸೀಮೆಯಂ
ಪೊಕ್ಕುದಂದೂತಮುಖದಿಂದಬಳಿಕ ॥ ಧ್ಯಾನಿಸಿದನೊಂದರಡುಘಳಿಗೆತ
ನ್ನಾಪ್ತಸ್ತ್ರ।ಧಾನಿಗೆಲ್ಲರಂಕರೆಸಿಕೊಂಡವರೊಳ್ಗೆ।ದಾನಿಸಿನುಡಿದನಂದು
ಶ್ರದ್ಧಾಯುಸುಮತಿಯೆಂಬಮಂತ್ರಿಗಳ್ಗೆ ॥ ೩೭ ॥ ಈಧನಂಜಯನತುರಗ
ಮಸೀಗೆಕಟ್ಟದೊಡೆ। ಮಾದವಂತಾನೆಮ್ಮದೋರುವನೆಮಗೆಕೃಷ್ಣ । ನೀ
ಧರೆಯೊಳಿರುತಿರ್ದ್ದುಮಿನ್ನೆಗಂಕಂಡುದಿಲ್ಲಚ್ಯುತನೆಮೂರುತಿಯನು ॥ ಬಾ
ಧಿಸುವದೀದೇಹಮಂನೆರೆತೆರೆಗಳಿಂನು।ಸಾಧಿಸುವದೇನಸುರರಿಪುಬಂದುತಂ
ನೋಳ್ವ। ರೋಧಿಸಿದೊಡನಿತರಿಂದಳಿದೊಡೇನುಳಿದೊನೆಂದನಾನೃಪತಿನೆ
ಗುತ॥ಆನರಾಧಿಪತಿನಿಶ್ಚೈಸಿದಂಕದನಮಂ।ಭೂನಾಥಕೇಳವನಕಟ್ಟಳೆಯ
ನೆಲ್ಲವಂ ।ತಾನಾಳ್ವ ದೇಶದೊಳ್ತನ್ನನಗರದೊಳೇಕಪತ್ನೀವ್ರತದೊಳಿರ
ದೊಡೆ ॥ ದಾನವಾರಿಯಪೂಜೆಗೈಯದೊಡೆಸಂತತಂ । ದಾನಧರ್ಮಂಗಳಂ
ಮಾಡದೊಡೆಗತಿಗೆಟ್ಟು । ಹೀನಜಾತಿಗಳೊಡನೆಕೂಡಿದೊಡೆಸೈರಿಸಂಪರಿ
ವಾರದೊಳ್ಪ್ರಜೆಯೊಳು ॥ ೩೯ ॥ ಅಂತುಮದರಿಂದೆಲ್ಲರೇಕಪತ್ನೀವ್ರತೆ
ರ । ನೆಂತಪೂಜಾರರ್ತನಾಭಾಗ್ಯಸಂಯುತ । ರ್ಸಂತತಮಲಂಕಾರವಂ
ಡಿತರ್ನೀತಿಶಾಸ್ತ್ರಸ್ಮೃತಿವಿಚಾರಕ್ಕತರು ॥ ಕಂತುಶರನಿರ್ಜಿತರ್ಮ್ಮದಲೋ
ಭವರ್ಜಿತ । ರ್ಸಂತೋಷಭಾಷಿತರ್ಸದ್ಗುಣವಿಭೂಷಿತ । ರ್ಚಿಂತಿತಫಲಾಗ
ತರ್ಸಕಲಭೋಗಾನ್ವಿತರ್ಪರಿವಾರದೊಳ್ಪ್ರಜೆಯೊಳು ॥೪೦॥
ಏಕಪತ್ನೀವ್ರತಂಪ್ರಾಯತಂಕೋಮಲಂ।ಮಾಕಾಂತಕಿಂಕರನಲಂಕಾ
ರಪೂಜ್ಯಂಶು। ಭಾಕಾರವಾರೆೋಗ್ಯಪಟುಕರಣನಿರ್ಮ್ಮಲನಕೃತವೆಂಬಲಪಂ
ತನು ॥ ಭೀಕರಪರಾಕ್ರಮವಿಶಾರದಂಸಂಗರವಿ। ವೇಕಿಯೆಂಬಿನಿತುಗುಣ
ಮೋರ್ಪ್ಪನೊಳಿರಲ್ಕವನ । ನೇಕರೆದುಮನ್ನಿಸುವನೆಲ್ಲದರನುಳಿವನಂತೆಲ್ಲ
ರೀತೆರವನರರು ॥೪೧॥ ಉಣಲುತಲೊತ್ತಡಲೀಯುಲಿರಲ್ಕೆದಲುಂಟಾಗಿ। ದ

ಣಿದಿಹುದಲಂಕಾರಪೂಜ್ಯದಿಂವಸ್ತ್ರಭೂ। ಷಣಗಂಧಮಾಲ್ಯಾನುಲೇಪನಂ
ಗಳಪರಿಮಳಂಗಳಿಂಸೊಗಸಿರ್ಪುದು ॥ ಸೆಣಸುಗಳಬಿರಿದುಗಳಪೆಟ್ಟಿಗೆ ದರ್
ಮುಡುಹುಗಳ।ಹೊಣಕೆಗೆಳತಡಹುಗಳಕಲಿತನದಕಡುಹುಗಳ । ಕ್ರುದಿ
ನ್ನುರಣದವಕದಿಂಕುಣಿವುತಿಹುದುಹಂಸಧ್ವಜನಪರಿವಾರಮನುದಿನದೊಳು
॥೪೦॥ಮಣಿಮುಖುವರೂಥಮೆಪ್ಪತ್ತೊಂದುಸಾವಿರಂ । ಗಣನೆಗಿಪ್ಪತ್ತೊಂ
ದುಸಾವಿರಂಗಜತುರಗ ।ಮಣಿಸುವರೆಲಕ್ಕಂಪದಾತಿಸಾಸಿರಮುಳಿಯೆಲಕ್ಷ
ಮೋರ್ಪನಬಳಿಯೊಳು ॥ ಗಣಿತಕಿಹುದಿನಿತುಬಲಮಿನಿತುಬಲದಿಂದಮಂ ।
ರಣಿಸಿರ್ಪದಳಪತಿಗಳೆಪ್ಪತ್ತುಮಂದಿಸಂ।ದಣಿಸಿಬರುತಿಹುದುಹಂಸಧ್ವಜನೃ
ಪಾಲಕನುಪೊರಮಟ್ಟುನಡೆವೆಡೆಯೊಳು ॥೪೩॥ ಆತಂಗೆಧನಬಲಂಚಂದ್ರ
ಸೇನಂಚಂದ್ರ।ಕೇತುವರಚಂದ್ರದೇವಂವಿಥೂರಥನುವಿ।ಖ್ಯಾತನಹಧರ್ಮ
ವಾಹಂನ್ಯಾಯವರ್ತಿಯೆಂಬವರನುಜರೇಳುಮಂದಿ ॥ ಜಾತರ್ಸುದರ್ಶನ
ಸುಧನ್ವಸುಮನಸಸುರಥ!ರೀತೆರದಿನಾಲ್ವರಿವರೆಲ್ಲರ್ಸಮರ್ಥರ್ಮ।ಹಾತಿ
ಬಲರಮಲಧರ್ಮಜ್ಞರಪ್ರತಿಮರ್ಪರಾಕ್ರಮಯುತರ್ವೀರರು ॥೪೪॥ ವರ
ಶಂಖಲಿಖಿತರೆಂಬವರಣ್ಣತಮ್ಮಂದಿ। ರಿರಲವರೊಳಾಲಿಖಿತನಾಶ್ರಮಕೆಶಂಖ
ನೈ।ತರುತಪೇಳದೆಬಿದ್ದಪಣ್ಣನಾಸ್ವಾದಿಸಲ್ಕರದಿಮಂದೋಷಿಯೆಂದು ॥ಆ
ರಮನೆಗೆತಂದೊಪ್ಪಿಸಲ್ಕಾನೃಪಂಕರವ।ನರಿಯಲ್ಕೆಮತ್ತೆಲಿಖಿತಂತಪೋಬ
ಲದಿಂದ।ಮರಳಿಕೈಯಂಪಡೆದನಾಶಂಖನವರೀರ್ವರುಂಪುರೋಹಿತರವಂ
ಗೆ ॥೪೫॥ ಆಶಂಖಲಿಖಿತರೆಂದವೊಲಾತನಿರ್ದಪನಿ।ಳೇಶಕೇಳವನದಿಸ್ನೊಂ
ದುಕಟ್ಟಳೆಯುಂಹು । ತಾಶನಜ್ವಾಲೆಯಿಂಕಾಯ್ದುಕ್ಕವಣ್ಣಗೊಪ್ಪರಿಗೆ
ಯೋಳ್ತಾಂಸಮರಕೆ ॥ ಆಶುವಿಂಪೊರಮಡುವದುಂದುಭಿಯಸಂನೆಯುಮ।
ಹಾಶಬ್ದಮಂಕೇಳ್ದುಹಿಂದುಳಿದಭಟನಂಪ್ರ। ವೇಶಮಂಮಾಡಿಸುವನಲ್ಲ
ದೊಡೆತನ್ನಭಾಷೆಗೆಭಂಗಮಾಗಿರ್ಪುದು ॥೪೬॥ ಬಳಿಕನಿಬರೆಲ್ಲರಂಕರೆಸಿ
ಹಂಸಧ್ವಜಂ । ಸೆಲವಿತ್ತುಫಲುಗುಣನತುರಗಮಂಪಿಡಿತಂದು । ಪೊಳ
ಲೊಳಗೆಕಟ್ಟಬೇಕೆಂದುಸಾರಿಸಿಡಂಗುರಂಪೊಯಿಸಿಪೊರಮಡುತಿರೆ ॥ ಮೊ
ಳಗಿದುವುಮೇಲೆನಿಸ್ಸಾಳಂಗಳಾಹವಕೆ । ದಳದುಳಿಸಿತಾಗಸುಭಟಪ್ರತತಿ
ಜೋಡಿಸಿತ । ಖಿಳಕರಿರಥಾಶ್ವಕುಲಮೊದಗಿತುಪದಾತಿಸನ್ನಾಹದಿಂದಾಕ್ಷ
ಣದೊಳು ॥೪೭॥ ಸುರಪಸುತನೆಂಬವೈರಕೆಧನಂಜಯನಮೋ। ಲಿರದಮು
ಳಿದೆದ್ದುದೋಕುಲಾದ್ರಿಗಳಬಳಗಮೆನೆ । ಕರಿಘಟೆಗಳೈದಿದುವುತನ್ನಮಗ
ನಂಕೊಂದನೆಂದುನರನೋಳ್ಕನಲ್ದು ॥ ತರಣಿತಾಳ್ದನೊನಿಜಾಕಾರ
ಕೋಟಿಗಳನೆನೆ । ತೆರಳಿದವುಮಣಿಮುಖುವರೂಥಂಗಳೀದುದೋ । ಧರೆ

ಮುಂದಿಕುದರೆಗಳನೆನೆನಡೆದುದಾಹವಕೆಪರಿವಾರವಮಾನ್ಯಪತಿಯ ॥ ೪೮ ॥
ಕಂಸಾರಿಬಾರದೆನರಂಗೆಸೋಲುವನಲ್ಲ । ಹಂಸಧ್ವಜಂಧುರದೊಳಿನ್ನು
ಕೃಷ್ಣನದರ್ಶ। ನಂಸುಲಭಮಲ್ಲರ್ಗೆಸಂದೇಹವಿಲ್ಲದೇಹಮನಾಂತುಜನಿಸಿ
ತೋರ್ಪ॥ಸಂಸಾರಕಿದುಸಫಲಮಹುದೆಂದುಪರಿತೋಷ । ದಿಂಸಮರಕ್ಕೈ
ದುತಿರ್ದುದುಸಕಲಪಟುಭಟರ। ದಂಸತಿಯರೀಕ್ಷಿಸಿದರುಪ್ಪರಿಗೆಗಳಮೇಲೆ
ನೆಯರನಾದರಿಸಿಕಳುಹಿ ॥೪೯॥ ಅಳಿಲಾದನಿರಿಯಬಳಲಿದಮುಡಿಯಸೊ
ಪ್ಪಾದ। ತಿಲಕದಕೆದರ್ದಕಾಡಿಗೆಯಬೆಮರಿದಮೈಯ। ಪುಳಕದವಯವದ
ಕೆಂಬಾಸುಗೇರಿಗಳಪರೆದನುಲೇಪನದತೊಡಕಿದ॥ ಗಳದಹಾರದಕೆಂಪುಗ
ದಡಿದಧರದನುಡಿಯ। ಕಳಕಳದಕಡೆಗಂಣಕೆಂಬೊಗರಕದಪುಗಳ । ಕಳಿ
ಯಕೋಮಲೆಯರಿನೆಯರ್ಕಳಂಕಳುಪಿನೆಲೆವಾಡವನೆಡರ್ದರಂದು॥೫೦॥ ಇ
ನ್ನುಮರ್ಜುನಕೃಷ್ಣರೊಡನೆಸಂಗರಕೆಸಂ। ಪಂನಪಟುಭಟರೊದಗಿಘಾ
ಯವಡೆಯದವುನ್ನ । ನಿನ್ನಧರಕೆಂಪಾದುದಬಲೆಕೃಷ್ಣಕ್ಷತಂಪೇಳೆಂದಸಿ
ಯಳೋರ್ವಳು ॥ ಕನ್ನೆಮತ್ತೊರ್ವಳಂಕೇಳೊದ್ದವಳೆಂದಳೆಲೆ। ಪಂನಗ
ಸುವೇಣಿಕೃಷ್ಣಾಂಕಮಿಲ್ಲದವದನ। ಮುನಿಸಲ್ಲಿಲಕೆನೆರಿಯೆಂಬುದಂನೀನ
ರಿಯದಕಟಮರುಳಾದೆಯೆಂದು ॥೫೧॥ ಒದಗದಿನ್ನೊಮುರಾರಿಯಸಮರ
ಮರ್ಜುನನ । ಕದನಂಪ್ರವರ್ತಿಸದುಪ್ರದ್ಯುಮ್ನಸಾಹವಂ । ಮೊದಲಿತಲೆ
ದೋರಿತಂತೂರೊಳೆಂದೋರ್ವಳೀಪೊಸವಾರ್ತೆಯಂಪೇಳಲು ॥ ಚದುರೆಮ
ತ್ತೋರ್ವಳಿದುಜಗದೊಳಚ್ಚರಿಯೆಹರಿ। ಯುದರಕ್ಕೈಮಿಂಚುವೆದುವರಸಂಗ
ರಂಜಿತವಹು । ದುವರ್ತಮಾನದೋಳ್‌ಜನಜನಿತಮಿಲ್ಲಿನೂತನವಮಾತೆ
ಕೇಳೆಂದಳು॥೫೨॥ಇಂದುಮಂಡಲದಸಿರಿಯಂಸೂರೆಯಾಡಿದ । ರ್ಬಿಂದುವಿಷ
ಯದೊಳೂರುಗಳನಿರಿದರೊತ್ತಾಯ। ದಿಂದದುರ್ಗಂಗಳಂಕೈಕೊಂಡರೊ
ದಗಿದರ್ಸೆಳಿಸೂರೆಗಾತುರದೊಳು॥ ಮುಂದುವರಿದಂಕವೇರಿದರೀಗೆವರಸುಭ
ಟ ।ರೆಂದುಪೊಸವಾರ್ತೆಯಂಪ್ರೌಢೆಯೋರ್ವಳುಪೇಳ್ದ। ಡಂದುಬಾಲೆಯರಾ
ಕೆಯುಂಜರಿದರರಸನಿಲ್ಲವೆಗೆಲ್ವಡೆಂದುನಗುತೆ॥೫೩॥ ವಿಮಲದಧಿಲಾಜೆದೂ
ರ್ವಾಕ್ಷತೆಗಳಂತಳಿದು ।ಕ್ರಮದೊಳಾರತಿಗಳಂತಂದೆತ್ತಿಯಕ್ಷಕ।ರ್ದಮವಿ
ಲೇಪನಕುಸುಮತಾಂಬೂಲಮಂಕೊಟ್ಟುಪರಸಿಸೇಸೆಗಳನಿಟ್ಟು ॥ ರಮಣಿ
ರಂತೆಗೆದುಬಿಗಿಯುಪ್ಪಿಶುಭವಾಕ್ಯದಿಂ।ಸಮರಭೂಮಿಗೆಕಳುಹಿಸತಿಯರ್ಸು
ರತ್ನಕು । ಟ್ಟಿಮದಹರ್ಮ್ಯಂಗಳನಡರ್ದರ್ದಿವಿಜಪುರದಲಕ್ಷ್ಮೀಪತಿಯ
ನೋಡಲು॥ ... ... ... ॥೫೪॥

ಸಂಧಿ ೧೦ ಕ್ಕೆ ಪದ್ಯ ೫೪ಕ್ಕಂ ಮಂಗಳಮಸ್ತು.

## ಹನ್ನೊಂದನೆಯ ಸಂಧಿ.

ಸೂ॥ ಹಿಂದುಳಿದನಾಹವಕ್ಕೆಂದುಹಂಸಧ್ವಜಂ । ನಂದನನ
ನೆಂಣೆಗಾದಿರ್ದಕೊಪ್ಪರಿಗೆಯೋ ।ಳ್ತಂದುಕೆಡಹಿಸಲಚ್ಯುತ
ನಧ್ಯಾನದಿಂತಂಪುವಡೆದನವನಚ್ಚರಿಯುನೆ॥

ಭೂಹಿಂತಚರಿತ್ರ ಕೇಳುಳಿಯದೆಸಮಸ್ತಭಟ । ರಾಹವಕೆಪೊರಮಟ್ಟಬಳಿ
ಕಹಂಸಧ್ವಜನ । ಮೋಹದಕುಮಾರಂಸುಧನ್ವನಾಯುತಮಾಗಿಬಂದುನಿ
ಜಮಾತೆಯಡಿಗೆ॥ ಬಾಹುಯುಗಮಂನೀಡಿಸಾಷ್ಟಾಂಗಮೆರಗಿಸಿತ। ವಾಹನ
ನಹರಿಯಂಪಿಡಿದುಕಟ್ಟಿಕದನದೋ । ಳ್ಸಾಹಸಂಮಾಳ್ಪೆನೆನ್ನಂಪರಸಿಕಳು
ಹೆಂದುಕೈಮುಗಿದೊಡಿಂತೆಂದಳು ॥೧॥ ಕಂದಕೇಳ್ಫಲ್ಗುಣಂಪಾಲಿಪಂನಾ
ಲ್ಕಡಿಯ ।ದೊಂದುಹರಿಯಂನಿನಗದರಚಿಂತೆಬೇಡನಾ । ನಂದದಿಂಪಾರ್ಥ
ನಂರಕ್ಷಿಸುವಹರಿಯನೇಹಿಡಿಯುವಬುದ್ಧಿಯನೆಮಾಡು॥ ಹಿಂದೆನಾರದಮು
ನಿಯಮುಖದಿಂದಕೇಳ್ದೆಂವು।ಕುಂದನವಿಶಾಲಲೀಲಾಮಾಲೆಯಂಕೃಷ್ಣ।ನಿಂ
ದುಮೈದೋರಿದೊಡೆಕಂಣಾರೆಕಾಣಬಹುದೆಂದೊಡವನಿಂತೆಂದನು ॥೨॥
ತಾಯೆಚಿತ್ತೈಸಾದೊಡೀಭಾಷೆಯಂಕೃಷ್ಣ । ರಾಯನೆಂತನ್ನೆಡೆಗೆಬರಿ
ಸಿಕೊಂಬುದಕೊಂದು । ಪಾಯಮಂಬಲ್ಲೆನಾಂಕಯ್ಯಂಪಿಡಿದೊಡೆಮ್ಮೈ
ತಾನೆಬಹುದಿಂದ್ರಜನನು ॥ ನೋಯಿಸಿದೊಡಗಧರಂಬಾರದಿರನಾನತರ।
(ಅಘಹರಂ)ಪಾಯುಮಂಸ್ತೈರಿಸಂಬಳಿಕತೋರುವೆನೆಂಬು। ಜಾಯತಾಕ್ಷನ
ಮುಂದೆತನ್ನಪೌರುಷವನೆನಲಾಕೆಮುಗುಳಿಂತೆಂದಳು ॥೩॥ ಕರುವನೆಳೆಗಂ
ದಿತಾನರಸಿಕೊಂಡೈತಪ್ಪ । ತೆರದಿಂದಬಂದಪಂಮುರಹರಂಪಾರ್ಥನೆಡೆ।
ಗರಿವೆನಿದುನಿಶ್ಚಯಂಮಗನೆನೀನಾಹರಿಗೆವಿಮುಖನಾದೊಡೆತನ್ನನು ॥ಜರಿ
ವರಿಕ್ಕೆಲದಬಂಧುಗಳಿಂನುಸಮರದೋ ।ಳ್ನಿರೆಕೃಷ್ಣನಂಗೆಲ್ವರುಂಟೆನಾಕೆ
ನ್ನೊಡಲ । ಮರುಕವಂಬಿಟ್ಟೆನವನಂಕಂಡಬಳಿಕಹಿಮ್ಮೆಟ್ಟದಿರ್ಪೋ
ಗೆಂದಳು ॥೪॥ ಎಂದೊಡೆಲೆತಾಯೆಕೇಳ್ಕೃಷ್ಣಗೆವಿಮುಖನಾಗಿ । ಬಂದೆನಾ
ದೊಡೆನಿಂನಗರ್ಭದಿಂದುದಯಿಸಿದ । ನಂದನನೆಹಂಸಧ್ವಜನಕುಮಾರನೆ
ಮೇಣುಹರಿಕಿಂಕರನೆವೀರನೆ ॥ಕೊಂದಪೆಂಪಾರ್ಥನಪತಾಕಿನಿಯನವನಧ
ಟ। ನಂದಗೆಡಿಸುವೆನೆಂನವಿಕ್ರಮವನಚ್ಯುತನ । ಮುಂದತೋರಿಸುವೆನನಿ
ತರಮೇಲೆಸೋಲುಗೆಲವುದುಪುಣ್ಯಾವಶೆಮೆಂದನು॥ಅನಿತರೊಳ್ಕುವಲೆಯೆಂ
ಬವಳೋರ್ವಳಾಸುಧ ।ನ್ವನಸಹೋದರಿತಂದಳಾರತಿಯನನುಜಕೇ।ಳನು
ವರದೊಳಿಂದುಶೌರಿಗೆವಿಮುಖನಾಗಿನೀಬಂದೆಯಾದೊಡೆಪಾವನ ॥ ಮನೆ

ಯೊಳಕಾಂತೆಬೆಯೆತ್ತಿನಡೆಯೆನಾನದರಿಂದ । ವನಜಾಕ್ಷನಂಮೆಚ್ಚಿ ಸಾಹಸ
ದೊಳೆಂದುಬೆಂ । ದನದನೂಂಪಿಟ್ಟುಕರ್ಪೂರದವೀಳೆಯಂಗೊಟ್ಟುಕಳುಹಿ
ದಳ್ನೀಸೆದಳಿದು॥೬॥ಅರಸಕೇಳಾಸುಧನ್ವಂಬಳಿಕಜನನಿಸೋ। ದರಿಯುರಂಬೀ
ಳ್ಕೊಂಡುಪೊರಮಟ್ಟುತನ್ನವಮಂ । ದಿರದಪೊರೆಗೈತರಲ್ಕಿದಿರಾಗಿಪೊಂದಟ್ಟೆ
ಯೊಳ್ಸಂಪಗೆಯಪೂವನು॥ಸರಸಪರಿಮಳಗಂಧಕರ್ಪೂರವೀಳೆಯವ ।ನಿರಿ
ಸಿಕೊಂಡೊಲವಿಂದಬಂದಳಂಗಜನಜಯ । ಸಿರಿತಾನೆನಲ್ಪ್ರಭಾವತಿಯೆನಿ
ಪವನರಾಣಿಸುಶ್ರೋಣಿಸರ್ಪವೇಣಿ ॥೭॥ಚಂದ್ರಮಂಡಲಸದೃಶವದನದೆಳೆನ
ಗೆಯನವ ।ಚಂದ್ರಿಕೆಯನೆಲ್ಮೆಲುದಿನದುಕೂಲಂಮೆರಯೆ। ಚಂದ್ರತಿಲಕದ
ರಾಗವಂಚಿತ್ತದನುರಾಗಮಂಸೂಚಿಪಂತೆಸೊಗಸೆ॥ ಇಂದ್ರನೀಲದಮಣಿ
ಯಮಿರುಗುವಲಲಿತಕಾಂತಿ।ಸೌಂದ್ರಮಾದಪೊಲೆಸೆವಳಕಪಾಶದಿಂದನೆಯ।
ನೇಂದ್ರಿಯವನುರೆಕಟ್ಟಿಕೆಡಪದಿರಳೆಂಬಿನಿಂರಂಜೆಸಿದಳಾಮೃಗಾಕ್ಷಿ ॥೮॥ಸ್ಫು
ರಿಸುವೊಳ್ಳಡೆಯಬೆಡಗಿನನಡೆಯನಿರಿಯಸಿಂ । ಗರದುಡಿಯತೇಳ್ವಾದಸಿಯ
ಪೊಡೆಯಚೆಲ್ವದಳೆ। ದುರದೆಡೆಯನಿಂಬುಗೊಂಡಿಟ್ಟೆಡೆಯಚಲ್ಮೊಲೆಯಪೊ
ಳೆವಕಂಣಲರಕಡೆಯ॥ತ್ಸರಿಪಭುಜವಲ್ಲರಿಯತೊಡವುಗಳವ್ಯೆಸಿರಿಯ ।ಬಿ
ರಿಮುಗುಳಕಬರಿಯಕಲೆಗಳಿಡಿದಸೌಂದರಿಯ । ದರಸಿನಿಜಪತಿಯುಮಂ
ದಚ್ಚರಿಯಬಗೆಗೊಂಡಳಂದುಬೇರೊಂದುಪರಿಯ॥೯॥ ಮುರ್ಯಯಪೊಸಮ
ಲ್ಲಿಗೆಯಸೂಸುವೆಳನಗೆಯಸವಿ । ನುಡಿಯಬಾಯ್ದೆರೆಯಹೊಳಹೊಳ
ವಡಶನದಮಿಸುಪ । ಕಡೆಗಂಣತೊಳಗುವನಖಾವಳಿಯಥಳಥಳಿಪಕಂ
ಠಮಾಲೆಯಮುತ್ತಿನ ॥ ತೊಡವುಗಳಘನಸಾರದನುಲೇಪನದಸಂಣ ।
ಮುಡಿದುಕೂಲದಬೆಳ್ಪುಗಕೋರ್ಮೆಲಿಂಗದೋ । ಳ್ಬಿಡದೆ ಸಂಸಿಚಂ
ದ್ರಕಾಂತದಿಂನಿರ್ಮಿಸಿದಪುತ್ಥಳಿಯೊಲವಳೆಸೆದಳು ॥ ೧೦ ॥ ಕರಯುಗ
ದೊಳಾಂತಪೊಂದಟ್ಟೆಯನದರಮೇಲೆ । ಪರಪಿರ್ದಸಂಪಗೆಯಪೂಗಳಂತ
ನ್ನವ್ಯ । ಯೊರಗೆಸರಿಯಾದಪನನೋಡೆಂದುತೋರ್ಪಂತೆಕೊಂಡು
ಬಂದಿದಿರೆನಿಂದ ॥ ತರಳೆಯಂಕಡೆಗಣ್ಣೊಳೊಯ್ಯನೀಕ್ಷಿಸಿನಗುತ । ಸರ
ಸಪರಿಮಳನವ್ಯಕುಸುಮಂಗಳಂಕೊಂಡು। ಭರದಿಂದಕೊಳ್ಗುಳಕೆಪ್ರೇರ
ಮಡುವಗಮನದಿಂಕಾಂತೆಗಪನಿಂತೆಂದನು ॥೧೧॥ ಕಾಂತೆಕೇಳಿಂದುಸಾ
ರದೊಳ್ಜರ್ನಸಂಗಮಾ। ರಾಂತವನಬಿಂಕಮಂಮುರಿವನಾಹರಿಬಕಸು ।
ರಾಂತಕಂಬಂದೊಡಾತನಮುಂದತೋರಿಸುವೆನಂನಭುಜವಿಕ್ರಮವನು॥
ನಾಂತಳವನಾರ್ಪಿಂದವಿಜಯಮಂಪಿಡಿರ್ದ್ದೆಡೆಭ। ವಾಂತರವನ್ಯದಿಸದಮು
ಕ್ತಿಯಂಪಡದಪೆಂ ।ನೀಂತಳವಳಸದಿರೆಂದನಯಳಂಗಂತೈಸಿಪ್ಪುರವಾಡಲ್ತು

ಡೆದೆಂದಳು ||೧೨|| ಯುಕ್ತಮಲ್ಲಿದುರಮಣನಿನಗೇಕೇಳ್ಕಾದುವಾ | ಸಕ್ತಿ
ಯಿಂಚಕ್ರಿಗಭಿಮುಖವಾದಬಳಿಕಲ್ಲಿ | ಮುಕ್ತಿಯಲ್ಲದೆಬೇರೆಜಯಮುಂಟೆ
ಜನಿಸದುವಿವೇಕಸಂತತಿನಿಂನೊಳು || ವ್ಯಕ್ತಚಿಂತನಗೊಂದಪತ್ಯಮುದ
ಯಿಸದೊಡೆವಿ|ರಕ್ತಿಯಿಂಕೈವಲ್ಯವಾದಪುದೆಸಮರಕು|ದ್ಯುಕ್ತನಪ್ಪಾತಂ
ಗೆಸಂತಾನವಿಲ್ಲದಿರಲಪ್ಪುದೇಹೇಳೆಂದಳು ||೧೩|| ಅದರಿಂದಲಾತ್ಮಜವಿವೇಕ
ವಿಲ್ಲದೊಡೆನಿನ|ಗಿದುವೆಜಲದೋದಯದಋತುಸಮಯವಿಾಪಥದೊ |
ಳುದುಭವಿಸುವದುನಿಂನಭೂಮಿಯೊಳ್ಬೀಜಮಂಬಿತ್ತಿದೊಡೆಬೆಳೆಬಾಳ್ಕೆ
ಗೆ|ಕದನಕ್ಕೈದುವವೇಳೆಯಲ್ಲೆನೆಲವಂಮುಂದೆ|ಬೆದಗಾಳಮುಂಟೆಂದೊಡವ
ಳೆಣಿಸಿಮುಗೆಗಳಿಂ|ತುದಿವಿಶಾಖೆಗೆಬಂದುದಿನ್ನುಮೇಲಂಕುರಿಸಲರಿಯದೆನಲಿಂ
ತೆಂದನು||೧೪||ರಮಣಿನೀನೆಂಬುದನುಸಯ್ಯಮಪ್ಪುದಾದೊಡಂ | ಸಮಯ
ಮಲ್ಲಿದುಮೊಳಗುತಿದೆಭೇರಿಪೊರಮಟ್ಟು | ಸಮರಕಯ್ಯಂಪೋದನುಳಿದೆ
ನಾದೊಡೆತಾತನಾಜ್ಞೆಗೊಳಗಾಗದಿರೆನು || ಕ್ರಮವನರಿಯದಳೆನೀನೆನಗೆ
ಸ್ವೈರಿಸಲಳವೆ | ಗಮನಕನುಕೂಲೆಯಾಗೆನುತಗಲ್ಲಂಪಿಡಿದು | ಕಮಲಾಕ್ಷಿ
ಯಂಮುದ್ದುಗೈದುಬೀಳ್ಕೊಂಬಿನಂಕಾತರಿಸಿಮೇಲ್ವಾಯ್ದಳು ||೧೫|| ಅಂ
ಗವಿಲ್ಲದನಸಮರಂಗಮಂಪೊಗಲಂಜ | ತುಂಗವಿಕ್ರಮವಿಜಯಸಂಗರಕ್ಕೆ
ಳಸುವೆನೆಂ | ಬಂಗವಣೆಯೆಂತುಂಟೆಂದಂಗನೆಬಲತ್ಕಾರದಿಂಘನಕುಚದ್ವ
ಯವನು || ಸಂಘಟಿಸುವಂತೆಬಿಗಿಯಪ್ಪಿಗಾಢತರದಾ | ಲಿಂಗನಂಗೈದು
ಕುಡಿಗಂಗಳಿಂದವನನೊಗ|ದಿಂಗಿತವನಾರೈವಶೃಂಗಾರಚೇಷ್ಟೆಯಬೆಡಂ
ಗನದನೇವೇಳ್ವೆನು ||೧೬|| ಮಿಡಿದರೊಡವೆಂತಮೃತರಸದಿಂದನೆರೆವಪೊಂ|
ಗೊಡವೊಲೆಯನವನವಕ್ಷಸ್ಥಳದೊಳಿಟ್ಟೊತ್ತಿ | ದೊಡೆಹಿಸಿದೊಳಗಣ
ತನಿಸುಧೆಯೊಸರಿತೊಟ್ಟಿಡುವಬಿಂದುಗಳಸಾರವೆನಲು || ಕಡಿಕಿಪರಿದೊ
ಗುವಮುತ್ತುಗಳಹಾರದಮಣಿಗ|ಳೆಡೆವಿಡದಸೂಸುತಿರೆಸೊಕ್ಕುತಕ್ಕೆಗೆಸೊ
ಗಸು | ವಡೆದಳಾಕಾಂತೆಪ್ರಿಯನಂಗದೋಳ್ಮೋಹನೋತ್ಸಂಗದೊಳ್ಬ
ಗೆಗೊಳುತಿರೆ||೧೭||ಪ್ರಿಯನತನುಚಂದನಮಹೀಜಮಂಸುತ್ತಿದಫ|ಣಿಯೊವ
ಲ್ಲಭಾಂಗದಾಲಸ್ತಂಭಮಂತೊಡ| ರ್ದಯುಗಸ್ಮರಕರಿಯಶುಂಡಿಲೋಕಾಂ
ತಕಾಯಬಲಮಂಬಂಧಿಸಿದಮದನನ|| ಜಯಪಾಶವೋರಮಣದೇಹಕಲ್ಪ
ದ್ರುಮಾ|ಶ್ರಯದಕೋಮಲಲತೆಯೊಪೊಸತಾದುದೆಂಬಂತಿ|ನೆಯನನಪ್ಪಿದ
ಹರಿಣಲೋಚನೆಯನಳಿತೋಳ್ಗಳೆಸದವತಿಗಾಢದಿಂದ||೧೮||ಕಣ್ಮಲರ್ಕಾತ
ರಿಸೆಮುಡಿಪೂಗಳಂಸೂಸೆ | ನುಣ್ಮೊಗಂಬೇರೆರೊಂದುಪರಿಯಾಗೆನುಡಿದೈ
ನ್ಯ | ಮುಣ್ಮೆಹೀನಸ್ವರದೊಳೆಸೆಯೆಕೈಕಲೆಗಳಂಸೋಂಕೆಪ್ಪುಳಕದಿಂ

ದ॥ ಪೊಣ್ಮೆ ಮದನಾತುರಂತಲೆದೋರೆನೋಲುದಂ। ಬಿಣ್ಮೊಲೆಗಳೋಸರಿಸೆ ನಿರಿಯುಬಿಗಿಪ್ಪೈಸರಿಸೆ ।ಪೆಣ್ಮಂಚದಂಚೆದುಪ್ಪಳವಾಸಿಗೆಳದೊಯ್ದು ಳಿನೆಯ ನಂಬಲ್ಪಿನಿಂದ॥೧೯॥ ಸತಿಗೆಷೋಡಶದಋತುಸಮಯಮೇಕಾದಶೀ।ವ್ರತ ಮುಲಂಘ್ಯಶ್ರಾದ್ಧಮಿನಿತೊಂದುದಿನಮೆಸಂ। ಗತವಾದೊಡೆಂತುಕರ್ತವ್ಯ ಮೆನೆಪೈತ್ರುಕದಶೇಷಾನ್ನಮಾಘ್ರಾಣಿಸೆ।ಕ್ರತುಭೋಜ್ಯಮಾದಪುದುನಡು ವಿರಳ್ಕಳಿದಾವ। ವನಿತೆಯನೊಡಗೂಡಬಹುದದರಿಂದಧರ್ಮ । ಪದ್ಧತಿ ಯನೀಕ್ರಿಸಲಿವಳನಿಂದುವಿಾರುವದುಮತವಲ್ಲೆಂದವಂತಿಳಿದನು॥೧೯॥ತಾತ ನಾಜ್ಞೆಯನುಳಿದುಕೃಷ್ಣದರುಶನಕ್ಕೈದ ।ದೀತರಳೆಗಿಂದುಋತುದಾನನುಂ ಮಾಡಿದೊಡೆ । ಪಾತಕಂತನಗಿಲ್ಲನೆಂದುನಿಶ್ಚೈಸಿಬಳಿಕಾಸುಧಸ್ವಂಮನ ದೊಳು॥ ಭೀತಿಯುಂತೊರೆದುಕಾಂದೆಯಕೂಡೆರಮಿಸಿದಂ। ಪ್ರೀತಿಯಿಂದು ಗುರೊತ್ತಿಸರಸಚುಂಬನಸಲಲ್ಲೆ।ವಾತುಗಳರವನೇಮಗಲೆತಾಡನಪ್ರಾಥಿಬಂ ಧಸವ್ಮೋಹನದೊಳು ॥೨೦॥ ನಾಣ್ಮೀಸಲಳಿಯುದವೆಯುವಭೇದಮಂಮ ರೆದು ।ಜಾಣ್ಮೆಗಳಬಂಧಂಗಳೋಳ್ಬಳಸಿಸೊಗಯಿಸುವ । ಗೋಣ್ಮೊಳೆ ಗಿನಿಂಚರಂಗಳನೆಸಗಿಮೊನೆವಲ್ಲಕದ್ರುಂಕನುಗುರೊತ್ತನು ॥ ಮಾಣ್ಮಾಣೆ ನಲ್ಕೈಗೊಳಿಸಿಲಲ್ಲೆಗೈದೊಲವ । ನಾಣ್ಮಂಗೆಕಾಣಿಸಿದಳವಳೊಡನೆಕೂ ರ್ಮೆಯಿಂ । ಮೇಣ್ಮಾನಿನಿಗೆಮದನಕಲೆಗಳಂತೋರಿಸಿದನವನಂದುಸಮರ ತಿಯೊಳು ॥೨೧॥ ಒದವಿದಸೊಬಗಿನಶೃಂಗಾರದಾತುರದವೀ । ರದಲಲ್ಲೆ ವಾತಿನಕರುಣದನಗೆಮೊಗದಹಾ । ಸ್ಯದನಖಕ್ಷತರೌದ್ರದಕಾತುರದಭ ಯದಬೆಮರೊಗೆದಭೀಭತ್ಸದ ॥ ಪುದಿದರೋಮಾಂಚನಾದ್ಭುತದಸೊಗ ಸಿನಮೋಹ । ನದಶಾಂತವೆಸೆವನವರಸದೇಳ್ಗೆಯನೆಲುಸುರ । ತದನವರ ಸವನುರೆಸವಿದುಸೊಕ್ಕಿಮೈಮರೆದರನ್ಯೋನ್ಯಭಾವದಿಂದ ॥೨೨॥ ಕೂ ರುಗುರ್ಗಳಗೆರೆಯಸೂತ್ರಬಂಧದೊಳೆಸೆವ । ತೋರವೊಲೆಗಳಕುಂಭಸಂ ಸ್ಥಾಪನಂಗೈದು । ಚಾರುತರಗಳರವದಮಂತ್ರದಿಂರೋಮಾಂಚನದಕುಶಾ ಗ್ರಂಗಳಿಂದ ॥ ವೀರರತಿಸಾಮ್ರಾಜ್ಯಪಟ್ಟದೋಳ್ಬೆಮರ್ವನೀಯ । ವಾರಿಸೇಚ ನದಿಂದಕೃತಕೃತ್ಯರಾದಂತೆ । ರಾರಾಜಿಸಿದರೊಮ್ಮೆಮೇಲ್ವಾಸಿನೋಳ್ಮೆರೆ ವಮಣಿಮಂಚದಾಸನದೊಳು ॥ ಪ್ರಕಟಿಸಿದಕಟಿತಳ್ಳುವಳ್ಳಿಬೆಂಡಾದಮೈ। ಸುಕರಗಳಸಾಂತವೊಲೆಕೆದರ್ದಲೇಪದಬೆಮ । ವಿಕಸಿತಸುಖದೊಳಿದ್ದ ಮನವೆದ್ದರೋಮಾಂಚಮುಸವಳಿದಕ್ಕೈಮುಸುಳ್ದ ॥ ಮಕರಪತ್ರದಕದಪು ಮಾಣ್ದರವದೋಳ್ತೊದ । ಲ್ಮಕುಳಿತವಿಲೋಚನಂನರಸೂಳ್ನಿಮಿರ್ದ ನಾಸಿಕಮಳಿದತಿಲಕಂಪರೆದಕುರುಳ್ಸೊಪ್ಪಾದಧರಮೊಪ್ಪಿತಾಕಾಂತೆಗೆ ॥

ಮುನ್ನಾದಿಋಷಿಗಳನುಮತಮಿದೆಂದರಿದಾಸು । ಧನ್ವಂಋತುಸ್ನಾತೆಯುಂ ವಿಹಾರದೊಡಗೂಡಿ । ತನ್ನಿಯುಂಬೀಳ್ಕೊಂಡುಸಮರಕನುವಾಗುತಿರಲಿತ್ತ ಕುರುಕುಲದನೃಪರ ॥ ಅನ್ವಯಕೆತೊಡವಾದನರನಹಯಮುಂಕಟ್ಟು । ವನ್ವೇಷಣದೊಳಾಹವಕೆನಡೆನೃತತಿಬಲಸ । ಮನ್ವಿತಕುಮಾರನಂಸೇನೆ ಯೊಳ್ಕಾಣದೆಕೆರಳ್ದಂಮರಾಳಕೇತು ॥೨೬॥ ಪುರೆಯೊಳಿಹಸಚಿವರಂ ನೋಡುತವರೋಳ್ಸುಮತಿ । ಗರಸಂನಿರೂಪಿಸಲವಂಕಡುಗಡಿಗರಾದ। ಚರರನಟ್ಟಿದಡವರ್ಬರಸೆಳೆದುನಗುತಿಹಸುಧನ್ವನಂತುಡುಕಿಪಿಡಿದು॥ಕರಯುಗಳಮುಂನೇಣ್ಗಳಿಂಬಿಗಿದುತಂದರತಿ । ಭರದಿಂದರಾಯನಿದ್ದೆಡೆಗಾಗಿಪಾರಜನ।ಪರಿಜನಂಬೆರಗಾಗೆಕದ್ದಾತನಂಕೊಂಡುಬಪ್ಪಂತೆನಿಪ್ಪರದೊಳು॥೨೭॥ ಕಟ್ಟುಸಹಿತಾಸುಧನ್ವಂತಾತನಡಿಗೆಪೊಡ । ಮಟ್ಟಡೆಕೆರಳ್ದಲವೊಮೂಢಾತ್ಮನೀನೆನ್ನ । ಕಟ್ಟಳೆಯನರಿದುಕೃಷ್ಣನದೀಕ್ಷೆಯುಂಮರೆದುರಣದಲುತ್ಸಾಹತೊರೆದು ॥ ಪಟ್ಟಣದೊಳೇಕೆತಳುವಿದೆಯೆಂದುಕುವರನಂ । ಧಟ್ಟಿಸಿಮರಾಳಧ್ವಜಂಕೇಳ್ದೊಡಡಿಗಿಟ್ಟ । ದಿಟ್ಟಯಿಂದಂಜುತೊಯ್ಯನೆಲಜ್ಜೆವರಸಿ ಬಿನ್ನೈಸಿದನವಂಪಿತಂಗೆ ॥೨೮॥ ಸತಿಸಂತತಿಗೆಬಯಸಿದಿನಗಳದುದಿನ್ನಿಲ್ಲ। ಋತುಸಮಯಮೆಂದೆನಗೆಪೇಳ್ದೊಡಲ್ಲಿರ್ದೆನೆನೆ । ಕೃತಕಮಿದುನೂಕೀತ ನಂಕೃಷ್ಣದರುಶನದಕಾಲಮೊದಗಿರಲಿತ್ತಲು ॥ ಇತರಧರ್ಮದವೇಳೆಗಡತನಗೆಕರೆಪುರೋ । ಹಿತಶಂಖಲಿಖಿತರಂಬೆಸಗೊಂಬೆವಿದಕೆನಿ । ಷ್ಕೃತಿಯ ನೆನಲರಸನಾಜ್ಞೆಯೊಳವರಪುರೆಗೆಚರರೈತಂದದಂಪೇಳ್ದರು॥೨೯॥ಆಚರರ ನುಡಿಕೇಳ್ದುಶಂಖಲಿಖಿತರ್ಬಂದು । ವಾಚಿಸಿದರೆಲೆಹಂಸಕೇತುನೀನೇನಸಾ। ಲೋಚಿಸುವನಿನ್ನತನಯನಮೇಲಣಾಶೆಯಿಂಭಾಷೆತಪ್ಪಿದೆಯಾದೊಡೆ॥ಈ ಚಂಪಕಾಪುರದೊಳಿಹುದಿಲ್ಲನಾವುಸ । ತ್ಯಾಚರಣೆಗಾಗಿರುಕ್ಮಾಂಗದಕರಿ ಷ್ಠಿಂದ್ರ। ಭೂಚಕ್ರಪಾಲರಾತ್ಮಜರಮೊಗನೋಡಿದರೆಹೇಳೆಂದುನುಡಿದರವರು ॥೩೦॥ ಬಳಿಕರಸನಾಸುಮತಿಯುಂಕರೆದುಪೇಳ್ವನೀ । ಖಳನಂಕಟಾಹಪೂರಿತತಪ್ತತೈಲದೋ।ಳ್ಮುಳಿಗಿಸೆನಲವನೊಡೆಯನಾಜ್ಞೆಯುಂಮೀರದಾತನಕ್ಕೈಗಳಂಕಟ್ಟಿಸಿ ॥ ಧಳಧಳನೆಕುದಿವೆಂಣೆಗೊಪ್ಪರಿಗೆಕಾಯ್ಸಲ್ಲಿ । ಗೆಳತರಿಸಿಮತ್ತೆಪೊತ್ತುವೊಲುರಿವಪೇರೊಗ್ಗರಡು । ಗಳನಿಡಿಸಿಕಳಕಳಸುತಿಹಸುಧನ್ವಂಗೆಮರುಗುತಸಚಿವನಿಂತೆಂದನು ॥೩೧॥ ತಾತನಿನಗಿಂತಾಗಬಹುದೆ ಲೋಕೈಕವಿ । ಖ್ಯಾತನಭಿಮಾನಿಹರಿಸೇವಕಂಸುಂದರಂ । ಮಾತಾಪಿತೃಪ್ರಿಯಂಕೋವಿದಂಕೋಮಲಂಸುಖಿಸಕಲಸಜ್ಜನಸಖಂ ॥ ನೀತಿವಿದಸಾಚಾರಸಂಪನ್ನನುತ್ತಮಂ । ದಾತನೆಂಬೀಸುಗುಣಮುಳ್ಳಕುವರಂನಿನ್ನ । ನೀತ

ಪ್ತ ತೈಲದೊಳಗೆಂತಕಟಬೀಳಿಸುವೆನೆಂದೊಡವನಿಂತೆಂದನು ॥೩೨॥ ಅಂಜ
ಬೇಡೆಲೆಸುಮತಿನೀನೀಗಲಿದಕೆಮನ । ಮಂಜರಿವಿಡುವನಲ್ಲತಾನಿನ್ನೆಗಂಧ
ರ್ಮ । ಮಂಜಡಿದುನಡೆದುದಿಲ್ಲಾ ಹವದೊಳಹಿತರೋಳ್ವೊಯ್ದಾಡಿಮಡಿ
ವೊಡಲಿದು ॥ ಜಂಜಡದೊಳಳೆವುದೆಂಬೊಂದುಭಯಮಿಹುದಾದೊ। ಡಂಜ
ನಾರ್ದನನಂಶರಣ್ಹೊಗುವನೆಳುಕದೆಂ। ನಂಜಸಕನಾಜ್ಞೆ ತಪ್ಪದಹಾಯ್ಕಿ
ಸೆನಲವಂತೆಗದೆತ್ತಿ ಬಿಸುಡಿಸಿದನು ॥೩೩॥ ಭೋಯೆಂದುದಖಿಳಪರಿವಾರವು
ಡಿಗಡಿಗೆಹಾ । ಹಾಯೆಂದುಮರುಗಿದುದುನೀನಿಂತಳಿವರೆದಾ। ತಾಯೆಂದುಪೊ
ರಳ್ದುದೊಡೆತನಕೆಬೇಸತ್ತು ಸತ್ತಾ ಯೆಂದುಸ್ಯೆಗೆಡೆದರು ॥ ವಾಯುಕಿಂತಕಟ
ಸುಕುಮಾರನಂಕೊಂದನೀ। ರಾಯನರಿವಂನೆರೆಸುಡಲಿಶಂಖಲಿಖಿತರೆಂ। ಟೀ
ಯುವೋಪಮರೇಕೆಜನಿಸಿದರೊಭೂಸುರರೊಳೆಂದು ಮೊರೆಯಿಡುತಿರ್ದ
ದು ॥೩೪॥ ಹಿಂದೆಪ್ರಹ್ಲಾದನಂಪಾಲಿಸಿದೆಗಡದ್ರುಪದ । ನಂದನೆಯುಮಾ
ನಮಂಕಾಯ್ದೆಗಡಭಕ್ತರ್ಗೆ । ಬಂದೆಡರನಾವಗಂಪರಿಹರಿಪೆಗಡದೇವನಿ
ನ್ನಂಪೆಸರ್ಗೊಂಡಡೆ ॥ ಇಂದುಮೊರೆಯೊಗುವಡಾರಂಕಾಣೆನಕಟಗೋ।
ವಿಂದನೀನಲ್ಲದೆ ವಿಚಾರಿಸುವರಿಲ್ಲಸಲ । ಹೆಂದವಂಚಿತ್ತದೋಳ್ಕೃಷ್ಣ
ಸಂಧ್ಯಾನಿಸುತನಿರ್ಭಯದೊಳಿರುತಿರ್ದನು ॥೩೫॥ ಜಯಜಯಜನಾರ್ದ
ನಮುಕುಂದಮುರಮರ್ದನವಿ। ಜಯಮಿತ್ರಗೋವಿಂದಪಕ್ಷಿವಾಹನಕಮ
ಲ। ನಯನಪೀತಾಂಬರಘನಶ್ಯಾಮಹರಿಕೃಷ್ಣ ವೈಕುಂಠನಾರಾಯಣ ॥
ಕ್ಷಯರಹಿತಗಾಮಲಕ್ಷ್ಮೀರಮಣನತಜನಾ। ಶ್ರಯದೇನುಭಕ್ತವತ್ಸಲಕೃ
ಪಾಕರಮಹಾ । ಭಯನಿವಾರಣನೃಸಿಂಹತ್ರಾಹಿಯೆನುತಿರ್ದನಾಸುಧನ್ವಂ
ಮರೆಯದೆ॥೩೬॥ ಅರಸಕೇಳಾಶ್ಚರ್ಯಮಂನೋಡಲೆವೆಸಿಪ್ಪೋ। ಪುರಿಗೊಂಡು
ಕಡುಕಾಯ್ದುಥಳಥಳನೆಕುದಿದುಕ್ಕಿ । ಮೊರೆವಪುರುಕಟಹತೈಲಂವೈಗೆ
ಸೊಗಯಿಸುವಬಾವನ್ನದಂಪಾಗಿರೆ ॥ ಕೊರಗದಾತನರೋಮವಡಗದಂಗ
ದಸೊಂಪು । ಕೊರಳತುಲಸಿಯದಂಡೆಬಾಡದುಮುಡಿದಪೂಗ । ಳರೆಗುಂದ
ವರಳ್ದುದುಸುಧನ್ವನಮುಖಂಸುಮಿತ್ರೋದಯದಕಮಲದಂತೆ ॥ ೩೭ ॥
ಕಂಡುಬೆರಗಾದುದೆಲ್ಲಾಜನಂಸ್ತುತಿಸಿದ । ರ್ಪುಂಡರೀಕಾಕ್ಷನಂಬಳಿಕಲಿಖಿ
ತಂಖತಿಯು । ಗೊಂಡಿವಂಬಲ್ಲನಗ್ನಿಸ್ತಂಭವಮಂನಾರಿಕೇಳಂಗಳಂತರಿಸೆನೆ ॥
ಕೊಂಡುಬಂದೆಳನೀರ್ಗಳಂಸುರಿಯಲುರಿನಭೋ । ಮಂಡಲವನಸ್ಪಳಿಸಿ
ಹೊಡೆದುದುಪುರೋಹಿತರ । ಗಂಡಸ್ಥಳಂಗಳಂಸಿಡಿದೋಡ್ಗಳಾರಲುಂನ
ಗುತಿರ್ದನಾಕುವರನು॥೩೮॥ನಿಶ್ಚಲಹೃದಯನಾಗಿವಿಷ್ಣುನಾಮಂಗಳಪುನ। ಶ್ಚ
ರಣೆಯಿಂದಮಂಸುಖದೊಳಿರುತಿರೆಕಂಡು। ಪಶ್ಚಾದ್ವಿವೇಕದಿಂದುರೆನೊಂದು

ಹರಿಕಿಂಕರದ್ರೋಹವುಂಮಾಡಿದ॥ ದುಷ್ಕರಿತಕಾನ್ಯದಂನಿಷ್ಕೃತಿಗಳಿಲ್ಲೆಂ
ಬ।ನಿಶ್ಚಯದೊಳಾಗಪುರಜಾಂತರ್ವೇತನಗೆಪ್ರಾ । ಯಶ್ಚಿತ್ತಮಂದಾಕಟಾ
ಹದೊಳ್ಕುದಿವೆಂಣೆಯೊಳ್ಬಿದ್ದ ನಾಲಿಖಿತನು॥೫೯॥ಆತಪ್ತತೈಲದಕಟಾಹ
ದೆಡೆಲಿಖಿತಂಗೆ।ಶೀತಳಸ್ಥಳವಾದುದಾಸುಧನ್ವನಸಂಗ।ವೇತರತಿಶಯವೋ
ಹರಿಭಕ್ತರಂಸಾರ್ದಂಗೆತಾಪಮಿರ್ದಪುದೆಬಳಿಕ॥ಆತಗಳ್ಕುದಿವೆಂಣೆಯೋ
ಳ್ಸುಖದೊಳಿರೆಹಂಸ।ಕೇತುವಿಸ್ಮಿತನಾಗಿಮಂತ್ರಿಗಳೊಡನೆಬಂದು । ಪ್ರೀತಿ
ಯಿಂದವರೀರ್ವರಂತೆಗೆದುತಕ್ಕೈಸಿದಂಸುತಪುರೋಹಿತರನು॥೬೦॥ ಪನ್ನೀ
ರಮಿಂದುದಿವ್ಯಾಂಬರವನುಟ್ಟುಬಾ ।ವನ್ನದಿಗಂರಂಗೆಲ್ದುಕಮ್ಮಲರ್ಗಳಂ
ಸೂಡಿ। ಸನ್ನುತಸುಯಕ್ಷಕರ್ದಮವನನುಕರಿಸಿಕತ್ತುರಿತಿಲಕವಿಟ್ಟುಹಣೆ
ಗೆ॥ರನ್ನದೊಡವುಗಳನನುಕರಿಸಿವೀಳೆಯಗೊಂಡು । ತನ್ನನುಳುಹಿದದೇವ
ಪುರದಲಕ್ಷ್ಮೀಪತಿಯ । ನಿನ್ನುಕಂಡಪೆನೆಂಬಹರುಷದಿಂಕಳೆಯೇರಿಮೆರೆ
ದಂಸುಧನ್ವನೆಂದು ... ... ॥೬೧॥

ಸಂಧಿ ೧೧ಕ್ಕೆ ಪದ್ಯ ೬೬೬ಕ್ಕಂ ಮಂಗಳಮಸ್ತು.

---

## ಹನ್ನೆರಡನೆಯ ಸಂಧಿ.

ಸೂ॥ಅಪರಿಮಿತಸೈನ್ಯಸನ್ನಾಹದಿಂದರ್ಜುನನ ।ಚಪಲಹಯ
ಮಂಮರಾಳಧ್ವಜಂಪಿಡಿಯಲ್ಕೆ । ತಪನಸುತನಂದನಸುಧ
ನ್ವರ್ಗೆಕಾಳಗಂಪ್ರೌಡದಾಡಂಬರದೊಳು॥

ಇನ್ನುಮೇಲಣಕಥೆಯನಾಲಿಸೆಭರತಕುಲ ।ರನ್ನಜನಮೇಜಯಸುಧ
ನ್ವಂಕಟಾಹದುರಿ । ಯನ್ನಾರಸಿಂಹಜಪದಿಂಜಯಿಸೆಲಿಖಿತನೆಸಗಿದವೈಷ್ಣ
ವದ್ರೋಹಕೆ ॥ ತನ್ನರಿವನುರೆಪರೆದುಕೊಂಡಸುದೊರೆವೆನೆಂದು । ನನ್ನಿ
ಯಿಂದಾತೈಲದೊಳ್ಬೀಳಲವರ್ಗಳಂ। ಮನ್ನಿಸಿನೃಪಂತೆಗಸಲಾಪುರೋ
ಹಿತನವನಿಪತಿಗೆಬಳಿಕಿಂತೆಂದನು ॥೧॥ ಭೂನಾಥಕೇಳ್ನಿನ್ನಸುತನದೆಸೆ
ಯಿಂದನ । ವಿಸ್ಮಾನೆಲಪ್ರಜೆನಾಡುಬೀಡೂರುಪರಿವಾರ । ಮಾನೆಕುದುರೆ
ಗಳಿದ್ದಪಶುಪಕ್ಷಿಮೃಗಕೀಟತರುಗುಲ್ಮಲತೆಗಳೆಲ್ಲ ॥ ಈನಿರುದ್ಧಕೆಧನ್ಯ
ರಾದರೇಂಕೃತರೊತಾಂ। ಭಾನುರಶ್ಮಿಗೆಕಣ್ದೆರೆಯದಗೂಗೆಯವೊಲ।ಜ್ಞಾನಿ
ದ್ವಿಜಾಧಮಂತಾನಾದೆನೀದ್ರೋಹಕೆಂದುಲಿಖಿತಂನುಡಿದನು ॥ ಬಳಿಕಾತ
ನಂಸುಮ್ಮನಿರಿಸಿನುಡಿದಂಶಂಖ । ನೆಲೆಮಹೀಪಾಲಹರಿಶರಣರ್ಗೆಡರ್ಗಳೆ।
ತ್ತಳದುಬೆಳದಿಂಗಳ್ಗೆಬೆಮರುಂಟೆಬೇಸಿಗೆಯೊಳಿವನನಿಜಮಂಕಾಣದೆ॥ ಬಳ

ಸಿಡಿಮ್ವನುಱ್ಕರ್ತೆಯುನರಿಮುರುಳಗಾದವಿ । ನ್ನಳಿದವೊತ್ತುಗಳ್ಗೇಕೆಸಾಕೀ
ಸುಧನ್ವನಂ । ಕಳುಹುಕಾಳಗಕೆನಲ್ಬುಪನವನಂತೆಗದುಬಿಗಿಯಪ್ಪಿದಂ
ಮುದದೊಳು ॥೩॥ ತಂದೆಯುಚರಣಕೆರಗಿಶಂಖಲಿಖಿತರಪದಕೆ । ವಂದಿಸಿಪ
ರಕೆಗೊಂಡುಸಾರಥಿಯುಸಾದರಿಸಿ । ಪೊಂದೇರನಳವಡಿಸಿತುರಗಂಗಳಂಪೂ
ಡಿಸಿಂಧಮುಂನೀಡುಮಾಡಿ॥ಗೊಂದಣದಝುಲ್ಲಿಗಳಕನಕಮಾಲೆಗಳಸ್ರಕ್ಛಂದ
ನವಿಭೂಷಣಾವಳಿಗಳಿಂಸಿಂಗರಿಸಿ । ಬಂದಡರ್ದಂಜಯರವದೊಳಾಸುಧ
ನ್ವಂತಿರಸ್ಕೃತಕುಸುಮಧನ್ವನು ॥೪॥ ಕೇಳ್ಸ್ಗುಣಮಣಿಯೆಧರಣಿಪಾಗ್ರಣಿ
ಯೆತನ್ನಮಗ। ನೇಳ್ಗೆಯುಂಕಂಡುಬ್ಬಿದಂಮರಾಳಧ್ವಜಂ। ಸೂಳ್ಗೈದವಾಗ
ತಂಬಟಭೇರಿನಿಸ್ಸಾಳಕಹಳಾದಿವಾದ್ಯಂಗಳು ॥ ತೊಳ್ಗಟ್ಟುತಾರ್ದುಸು
ನ್ಮಾನದಿಂಪಟುಭಟ । ರೊಕ್ಕಲೆಳ್ಗೊಂಡುಕಡುದಿವ್ರುತಿರ್ದರುಸಾರ್ಥಯೋಜ
ನದೊ।ಳಾಳ್ಗಜತುರಂಗರಥವಿಟ್ಟಣಿಸಿನಡೆದುದುತ್ಸಾಹದಿಂನರನಮೇಲೆ ॥
ಬೆರಬೆರಸುತೊತ್ತಿಡಿದುಮುಂದೆಭರದಿಂದನಡೆ। ವರಸರಸುಗಳಕಂಠಮಾಲೆ
ಗಳತೋರಮು । ತ್ತೊರಸೊರಸುಮಿಗೆಪರಿದವರಸೂಸುದಂಬುಲದಚೆನ್ನೆ
ಲದಮೇಲೊಕ್ಕಿರೆ॥ಪೊರೆದಸಂಧ್ಯಾರುಣದಗಗನಮಂಡಲದೊಳಂ। ಕುರಿಸಿ
ದುಡುಗಣದಂತೆರಂಜಿಸಿತುದೆಸೆದೆಸೆಗೆ। ಪರಿಮಳದೆಲರ್ಪರಿದುದಗರುಚಂದ
ನಯಕ್ಷಕರ್ದಮದಮೊಗವಾಸದ ॥೬॥ ಪಡೆಯೊಳನ್ಯೋನ್ಯಸಂಘರ್ಷಣ
ದೊಳಗುವಷ್ಪೊಂ।ದೊಡೆನ್ರಗಳರೇಣುಗಳೊಮ್ಮೃಗಳಂಸೋಂಕಿಪುಡಿ।ವಡೆದ
ಕುಂಕುಮಸುಗಂಧಾನುಲೇಪನದಚೂರ್ಣಂಗಳೋಪದಘಾತಿಗೆ ॥ ಪೊಡ
ವಿಯಿಂದಿರದೇಳ್ವರುಣರಜಂಗಳೊತಿಳಿದು । ನುಡಿಯಲರಿದೆಂಬಿನಿಂಮೇರು
ವಿನಬಿಂಣಮಂ। ಪಿಡಿದದಿವಿಭಾಗಮಂಜನವನೆಚ್ಚರಿಪಂತೆಕೆಂಧೂಳಿಮುಸು
ಕಿತಾಗ ॥೭॥ ಮೊಗದಕ್ಕೈಯಿಂತಮ್ಮೊಡಲನೀರೆನಾನೆಗ । ಳ್ತೆಗೆದುಚೆಲ್ಲ
ಲ್ಪೊನಲ್ಪರಿದಮಡುಗಳಕೆಸರೊ । ಳೊಗೆದನೃಪಮಂಡಲದಕನಕಾಭರ
ಣಕಿರಣತರುಣಾತಪದೊಳಲರ್ದಮಿಗೆಸುಳಿವ ಚಾಮರಂಗಳರಾಜಹಂಸಾ
ವ। ಳಿಗಳಸಂಚಾರಮಂಕಳೆಗೊಂಡಬೆಳ್ದಾವ । ರೆಗಳಹಂತಿಗಳಂತೆಪಡೆಯೊ
ಳೆಸೆದುವುತಳ್ತಿಡಿದಸತ್ತಿಗೆಯಸಾಲ್ಗಳು ॥೮॥ ಮುಂಕೊಂಬಮುಂದಿಕುದುರೆಗೆ
ಧರಾಮಂಡಲಂ । ಸಂಕುಲದವಾದ್ಯಧ್ವನಿಗೆದಿಶಾಮಂಡಲಂ । ಸಂಖ್ಯೆಯಿಲ್ಲ
ದಸಿಂಧಸೀಗುರಿಪತಾಕೆಗೆನಭೋಮಂಡಲಂಮಿಾರಿದ ॥ ಬಿಂಕದಿಂದಿರಿವಕಲಿ
ತನಕೆರಣಮಂಡಲಂ । ಸಂಕೋಚಮನೆಬಂದುಹಿಡಿದುಪಾರ್ಥನತುರಂಗ ।
ಮಂಕಟ್ಟಬಳಸಿಪದ್ಮವ್ಯೂಹಮಾಗಿನಿಂದಾರ್ದುದಾಸೇನೆನಲಿದು ॥೯॥ ಸು
ತ್ತಪದ್ಮವ್ಯೂಹಮಂರಚಿಸಿನಡುವೆನರ । ನುತ್ತಮತುರಂಗಮಂಕಟ್ಟಿಕಾಳೆ

ಗಕೆಘಟ । ರೊತ್ತಾಗಿನಿಂದರರಿವೀರರಂಬರಹೇಳಿನುತ್ತರಸನಾಜ್ಞೆಯಿಂದ॥
ಇತ್ತ ಪಾರ್ಥಂಗೆಚರರೈತಂದುನುಡಿದರೀ । ವೃತ್ತಾಂತಮಂಬಳಿಕಪ್ರದ್ಯು
ಮ್ನನಂಕರೆಸಿ। ಮತ್ತೆಬಂದದುವಿಘ್ನಮಿದುಕಿಂನುಪಾಯಮೇನೆಂದೊಡವ
ನಿಂತೆಂದನು॥೧೦॥ ನಿನ್ನಂಕಳುಹುವಂದುಹಯದಮೇಲಾರೈಕೆ । ಗೆಂನನ
ಟ್ಟದನಲಾಪಿತನಾತನಾಜ್ಞೆಯಂ । ಮಂನಿಸುವಕಾಲಮಲ್ಲವೆತನಗೆನೀನಿದ
ಕ್ಕೆಣಿಕೆಗೊಳಬಹುದೆಬರಿದೆ ॥ ತಂನಭುಜಬಲದಿಂದಬಿಡಿಸಿತಂದಪೆನಶ್ವ ।
ಮಂನೋಡುಸಾಕೆನುತಪಾರ್ಥನಂಬೀಳ್ಕೊಂಡು । ಪಂನಗಾರಿಧ್ವಜನತ
ನಯನೈದಿದದಹಿತಮೋಹರಕೆಸೇನೆಸಹಿತ ॥೧೧॥ ಲಟಕಟಿಸಿತಾಗೆಸಾತ್ಯ
ಕಿಸಾಂಬಕೃತವರ್ಮ । ಶಠನಿಶಠನನಿರುದ್ಧಗದಮುಖ್ಯರಾದಪಟು । ಭಟ
ರಖಿಳಯಾದವಚತುರ್ಬಲಂಜೋಡಿಸಿತುಸರ್ಬಸನ್ನಾಹದಿಂದ॥ಜಿಟಮಿಂದ
ಜಾಂಡಘಟವೊಡೆಯದಿರದೆಂಬೆನಿಂ । ಪಟಹಡಿಂಡಿಮಡೌಡಭೇರಿನಿಸ್ಸಾಳ
ತಂ । ಬಟಮುರಜಢಕ್ಕೆಡಮರುಗಕೊಂಬುಕಹಳೆಗಳಬಹಳರವಮಳ್ಳಿರಿ
ದುದು॥೧೨॥ಮೊಗದುದರಿಬಲವನನುಸಾಲ್ವಕನಸೇನೆಯೊ। ಮ್ಮೊಗದೊಳೆ
ರೆಯುಗಿದಫಣಿಕುಲದಂತೆರಣದವಕ । ಮೊಗದೊಡಗಿದಂಬುಧಿಯತೆರೆ
ಯಂತೆಯೌವನಾಶ್ವನಸೈನ್ಯಮೊಂದೆಸೆಯೊಳು ॥ ಯುಗದಂತ್ಯದಭ್ರದಂ
ತೆದ್ದುದುರವಣಿಸಿಸಂ । ಯುಗಕೆನೀಲಧ್ವಜನಸೈನಿಕಂಬಳಿಕಕರ । ಯುಗ
ಳಂಮುಗಿದುಕಿರೀಟಗೆವಿನಯದಿಂದಬಿಂನೈಸಿದಂಕರ್ಣಸೂನು ॥೧೩॥ ತಾತ
ಚಿತ್ತೈಸುಗೋಷ್ಪದಜಲಕೆಹರಿಗೋಲ ।ದೇತಕೆವೃಥಾಕುದುರೆಮಂದಿಯಂ
ನೋಯಿಸದಿ।ರೀತಿಗಳನೆಲ್ಲರಂತೆಗೆಸೆನಗೆಸೆಲವಿಂದಿನಾಹವಂಪರಬಲವನು॥
ಘಾತಿಸಿತುರಂಗಮಂತಾರದೊಡೆಬಳಿಕರವಿಜಾತನಕು ।ಮಾರಕನೆನೋಡು
ಸಾಕೆನುತವೃಷ । ಕೇತುಪಾರ್ಥನಚಿಸಂಬಡೆದುರಥವೇರಿದಂವಿಹಾರಿದಪರಾ
ಕ್ರಮದೊಳು ॥೧೪॥ ತಾರಕಾಸುರನಪೇರ್ಬಡಗೆಮೈದೋರುವಕು । ಮಾರ
ನಂತಾನಭ್ರಮಾರ್ಗದೋ । ಳ್ಸುಳಿವಮುಂಗಾರೆಮಿಂಚಂತಂನಹೊಂದೇರು
ಜಲಕೆರಗುವಶನಿಯಂತಂನಘಾತಿ ॥ ಹೇರಡವಿಗೈದುವದವಾಗ್ನಿಯಂತಂನ
ಪ್ರ ।ಚಾರಂನೆಗಳ್ದುನಡುವಗಲರವಿಯಂತಂನವೀರಪ್ರತಾಪಂತಿರಸ್ಕರಿಸೆವೃ
ಷಕೇತುರಿಪುಸೈನ್ಯಮಂಪೊಕ್ಕನು ॥೧೫॥ ದೂರದೊಳ್ಕಂಡಂಸುಧನ್ವನಾ
ತನಬರವ । ನಾರಿವಂಪಾರ್ಥನಾದೊಡೆಕಪಿಧ್ವಜಮಿಹುದು । ದಾರವೃಷ
ಭಾಂಕಿತದಕೇತುದಂಡದಸುಭಟನಾವನೋಪಾಂಡವರೊಳು ॥ ವೀರನಹ
ನೆನುತಬಂದಿದಿರಾಗಿನಿಂದುಪರಿವಾರಮಂತೆಗಿಸಿಬಿಲ್ದಿರುವನೊದರಿಸುತಕೈ!
ವಾರಿಸುತನಸುನಗುತಬಾಣಮಂತೂ।ಗುತಿನಸುತಜನಂಬೆಸಗೊಂಡುನು॥

ಎಲವೊನೀನಾರ್ನಿಂನಪೆಸರದೇನಾವರ್ಷಿ । ಕುಲದವಂನಿಂನಪಿತನಾವಾತ
ನೆಂಬುದಂ । ತಿಳುಪೆನೆಗೆತಾನೀಗವೀರಹಂಸಧ್ವಜನೃಪನಕುಮಾರಂತನ್ನ
ನು ॥ ಇಳೆಯೋಳ್ಸುಧನ್ವನೆಂಬರ್ಮರ್ಧುಚಟ್ಟಂದಮುನಿ। ತಿಲಕನಿಂದಾಯ್ತೆ
ಮ್ಮ ವಂಶಮನೆಕರ್ನಜಂ । ಬಳಿಕನಸುನಗೆಯೊಳೆಡಗೈಯಕೋದಂಡಮಂ
ತಿರುಗಿಸುತಲಿಂತೆಂದನು ॥೧೭॥ ಗೂಢಮಾಗಿರ್ದಲರಪರಿಮಳಂಪ್ರಕಟಿಸ
ದೆ । ರೂಢಿಸಿದವಂಶವಿಸ್ತಾರಮಂಪೌರುಷದ । ಹೇಡಿಯಿಂದರಿಯಬಾರದೆ
ಸಮರಸಾಧನಮಿದರೊಳಹುದೆನಿನಗಾದೊಡೆ ॥ ಮೂಢಕೇಳ್ಕಶ್ಯಪನಕು
ಲವೆಮ್ಮದೆಂಬರಾ । ರೂಢನಾಗಿಹದಿನಮಣಿಯತನಯನಾಹವ । ಪ್ರಾರ್ಥಕ
ರ್ನನಸುತಂಪೆಸರೆನಗೆವೃಷಕೇತುವೆಂದೊಡವನಿಂತೆಂದನು ॥೧೮॥ ಕರ್ನ
ಸುತನಾದೊಡಿಳ್ಳಿತುವೀರನಹುದುನೀ । ನಿರ್ಣೈಸಬಲ್ಲೆ ರಣರಂಗಮಂಮೂ
ಢರಾ । ವ್ವರ್ನಕದಮಾತುಗಳನರಿಯೆವೆನುತೆಚ್ಚಂಸುಧನ್ವನೀತನಸರಿಸಕೆ॥
ಸ್ವರ್ಣಪುಂಖದಕಣೆಗಳ್ಪೈದಿದೆವುಮಿಂಚಿನವೊ! ಗರ್ನಭೋಮಂಡಲಮನಂ
ಡಲೆಯಲಾಕ್ಷಣಂ । ದುರ್ನಿರೀಕ್ಷಣವಾಗಲೆಡೆಯೊಳವನೆಲ್ಲವಂತರಿದಿವಂ
ಕೋಲ್ಗರದನು ॥೧೯॥ ಬರಸಿಡಿಲಭರದಿಂದಮಿಂಚಿನಹೊಳಹಿನಿಂದ । ಬಿ
ರುವಳೆಗಳೊತ್ತಿಂದಕರ್ನಜಂಕಣೆಗಳಂ । ಕರೆವುತಿರೆನಡುವೆಖಂಡಿಸಿದಂಸು
ಧನ್ವನಾತನಸರಳ್ಗಳನೆಡೆಯೊಳು॥ತರಿದಂವೃಷಧ್ವಜಂಬಳಿಕವನಕೋಲ್ಗ
ಳಂ। ಬರಿಕೈದನಾಮರಾಳಧ್ವಜನಸುತನಿಂತು । ತೆರಹುಗುಡದೋರ್ವರೋ
ರ್ವರಮೇಲೆಮುಳಿದುಜರಿದೆಚ್ಚಾಡಿದರ್ಧುರದೊಳು ॥ ಷೋಣಿಗೆಸುಧನ್ವ
ತಾನಿರೆನೀಂಸುಧನ್ವನೆ। ವಾಣಿಸುವೆನೀಪೆಸರನೀಕ್ಷಣದೊಳೆಂದುಪೊಸ। ಸಾ
ಣೆಯಲಗಿನಸರಳ್ಗಳವನೆಚ್ಚು ಕರ್ನಜಂಪೋಳ್ಗಳವನಂಮೈಯೊಳು॥ ಕಾಣಿ
ಸೆಕೆರಳ್ದಲವೊಮೇದಿನಿಗೆರಿಪುಪಂಚೆ । ಬಾಣವೃಷಕೇತುತಾನಿರಲಾಗಿವೃಷ
ಕೇತುಮೇಣುಂಟೆಹೇಳೆನುತಕೂ। ರ್ಗಣೆಗರದನವನತಮುವನುಚ್ಚಳಿಸುವಂ
ತೆ॥ಭುಗಿಭುಗಿಸೆಕೋಪಾಗ್ನಿಮೂಡಿಗೆಯಕೋಲ್ಗಳಂ। ತೆಗೆತೆಗೆದುಕರ್ನತ
ನುಜಂಸುಧನ್ವನರಥದಬಗೆಬಗೆಯೊ। ಳಮರ್ದ್ದಸುವಛತ್ರಚಾಮರಸಿಂಧಸೀ
ಗುರಿಪತಾಕೆಗಳನು ॥ ಮೊಗಮೊಗಸಿಮುಂಬರಿವಕುದುರೆಸಾರಥಿಗಳಂ।
ಝಗಝುಗಿಪಕವಚಮಂತಂನಕಣೆಯುಂನಡುವೆ । ತಗತಗವಕೋಲ್ಗಳಂತ
ರಿದವನಬಿಲ್ಲನಿಕ್ಕಡಿಗೈದುಬೊಬ್ಬಿರಿದನು ॥೨೦॥ ತಂದರಾಗಳೆಸುಧನ್ವಂಗೆ
ಮಣಿಮಯದಮ । ತೊತ್ತಂದುರಥಮಂಬಳಿಕಬಿಲ್ವಾಡಿದುಜೇಗೈದು । ನಿಂ
ದುನಿಡುಗಣೆಗಳಿಂತೆಗವೆಚ್ಚು ಕರ್ನಜನಕೈಮಗಿವ್ಮಗಿಲಾಗಲು॥ಸ್ಯಂದನ
ತುರಂಗಸಾರಥಿಗಳಂಕವಚಮಂ। ಸಿಂಧಸೀಗುರಿಛತ್ರಚಾಮರಪತಾಕಗಳ ।

ನಂದುಕತ್ತರಿಸಿವೃಷಕೇತುವಿನಕರದಕೋದಂಡಮಂಖಂಡಿಸಿದನು ॥೨೩॥
ವಿರಥನಾದೊಡೆಕರ್ಣಸೂನುಕೈಗೆಡದೆಸಂ । ಗರದೊಳಸಿಮುದ್ಗರಮು
ಸುಂಡಿತೋಮರಖಡ್ಗ । ಪರಶುಗದೆಚಕ್ರಡೊಂಕಣಿಕುಂತಶೂಲಪಟ್ಟಸ
ಭಿಂಡಿವಾಳಶಕ್ತಿ ॥ ಸುರಗಿಮೊದಲಾಗಿರ್ದಕೈದುಗಳಸರಿವಿಡಿಯೊ । ಳುರ
ವಣಿಸಿಪೊಯ್ದಂಸುಧನ್ವನಂಮತ್ತವನ।ಪೊರೆಯುಪರಿವಾರಮಂನಾನಾಪ್ರಹಾ
ರದಿಂದೈದೆಘಾತಿಸುತಿರ್ದನು॥೨೪॥ ಅತ್ತಲಂತಿರಲಿತ್ತಲಿವನಸಾರಥಿಬೇಗ।ಮ
ತ್ತೊಂದುರಥಮಂತರಲ್ಕದನಡರ್ದುಮಸೆ।ವೆತ್ತಕೂರ್ಗಣೆಗಳಂಕರ್ಣಜಸಂ
ತೆಗೆದೆಚ್ಚಡಾಸುಧನ್ವನಮಯ್ಯೊಳು॥ತೆತ್ತಿಸಿದವಂಬೊಡಲೊಳಡಿದತನಿವೀ
ರರಸ।ವೊತ್ತರಿಸಿಮುಯ್ಯಕ್ಕವಂದದಿಂಬಸಿವಟಿಸಿ। ನೆತ್ತರೆಸದಿರೆಕೆರಳ್ದೆಚ್ಚ
ಡಾಕೋಲ್ಗಳಂತರಿವೃತ್ತಲಿವನೆಚ್ಚನು॥೨೫॥ ನಭಕುಪ್ಪರಿಸಿನೆಲಕೆಪಾಯ್ದೆಡ
ಬಲಕೆಮುರಿದು।ರಭಸದಿಂಬಾದೊರ್ರ್ವರೋರ್ವರಂವಿವಾದರ್ದಗಿ।ವಿಭವ
ದಿಂದಖಿಳಶಸ್ತ್ರಾಸ್ತ್ರದಿಂಸಮವಿಷಮಸೋಲುಗೆಲವುಗಳಿಲ್ಲದೆ॥ತ್ರಿಭುವನಕೆ
ರಂಗವೋಲ್ಸುಭಟನರ್ತನವ । ನಭಿನಯಿಸುವಂತೆಲಾಘವದೃಷ್ಟಿಮುಷ್ಟಿಗ
ಳೊ । ಳುಭಯವೀರರ್ಖತಿಯೊಳೆಚ್ಚಾಡಿದರ್ಕರ್ಣನಂದನಸುಧನ್ವರಂದು॥
ಒತ್ತುವರೆಸವರೆಚ್ಚಕಣೆಗಳಂಕಣೆಗಳಿಂ।ಕತ್ತರಿಸಿಬಿಸುಡುವರ್ಬಿಸುಟೊಡ
ಲೊಳಡಿದಂಬ । ಕಿತ್ತುಮೆತ್ತುವರಸೃಗ್ವಾರಿಯುಂವಾರಿಯಿಂತೊಳದೊಡ
ನೆಕಳವಳಗೊಂಡು ॥ ಮತ್ತೆಕೈಗೆಡದಾಳ್ದುಬೊಬ್ಬಿಡುವರೀತೆರದೊ ।
ಳಿತ್ತಂಡದಗ್ಗಳಿಕೆಸಮವಾಗಿಖತಿಯೊಳೊಂ । ಭತ್ತುನಾರಾಚದಿಂದಾಸುಧ
ನ್ವಂಕರ್ಣತನಯನಂಘಾತಿಸಿದನು ॥೨೬॥ರಾಯಕೇಳಾಗಪೂರಾಯಘಾಯ
ದೊಳಶ್ರು । ತೋಯದಿಂದವನುವಂತೋಯಲುಳವಳಿದುದಾ । ಛಾಯೆಜಂಬ
ಹಳಬಾಧೆಯುನಾಗಲ್ಕವನಸಾರಥಿರಥವತಿರುಗಿಸೆ ॥ ಜೇಯನೇರಿಸಿಬಿಲ್ಗಜೇ
ಯಹರಿಸೂನುಸಹ । ಸಾಯತಿಕೆಯಿಂದನಿಜನಾಯಕವನುಗಿನ್ರತಡ । ಹಾ
ಯಿದಂಕರಸಿಕೋಳ್ಸಹಾಯಿಗನೆಗೆನುತಕಡುಗಲಿಸುಧನ್ವನಸರಿಸಕೆ॥೨೭॥
ಅರಿದನಚ್ಯುತನಸುತನೆಂಬುದಂಟೆಕ್ಕೆಯದ । ಕುರುಪಿಂದನುಡಿದನೇನಿಲ್ಲೆ
ನಿನಗೆಬಲೆಯರ । ಮರೆಯಿಲ್ಲನಿನ್ನಸುಗೆಗಳುಕುವರರಾರೆನುತಕಲಿಸುಧನ್ವ
ಕಣೆಗಳ॥ ಬಿರುವಳೆಗರೆಯಲೆಡೆಯೊಳರಿದಲವೇಸಂಗರದೊ । ಳುರುವಜ
ಯುವಥುತನ್ನಭುಜದೊಳೆಹಳೆನುತಕೆಂ । ಗರಿಯಬಾಣಂಗಳಂಮುಸುಕಿದ
ಪ್ರದ್ಯುಮ್ನನವನರಥದೇಣ್ಡೆಸೆಯೊಳು ॥೨೮॥ ಅಸಮಸಾಯಕಸೆಂದುಬಿಂ
ಣಿಸರ್ಪಿನ್ನನಿಂ । ದಸಮಸಾಯಕನಾನುನೀನೊನೋಡೆನುತಪೊಸ । ಮ
ಸೆಯವಿಶಿಖಂಗಳಂಸುರಿದಂಸುಧನ್ವನಾತನಕಣೆಗಳಂಖಂಡಿಸಿ॥ ಪಸುಮತಿಗೆ

ವೀರನೀನೆಸನುಸಾಯಕನಾದೊ । ಡುಸುರೆನಗೆಯುಸನ್ಮುಸಾಯಕದಾತ್ರಿರ್
ಲೋಕದೋ। ಳ್ಪುಸಿಯುಬೇಡೆನುತಕೂರಂಬುಗಳನಂಬರಕೆತುಂಬಿದಂಶಂ
ಬರಾರಿ ॥೩೦॥ ಬರಿಯುಪ್ಪಾಗೋಲೆಸುಗೆಯುಳ್ಳದಾಹವದೊಳುಂ । ಕಿರಿದುಶ
ರಸಂಧಾನಮುಂಟಲಾನಿನಗೆಂದು । ಜರಿದೆಂಟುಬಾಣದಿಂದೆಚ್ಚಂಸುಧನ್ವ
ನಾತನಕೋಲ್ಗಳಂಸ್ಯೆರಿಸಿ ॥ ಬಿರುಸರಳಸಾರದಿಂದವನಸರ್ವಾಂಗಮುಂ ।
ತುರಿಗಿದಂಕವಚಸೀಸಕಬಾಹುರಕ್ಷೆಗೆ । ಳ್ಪರಿವಿನಿಂಕೆನ್ನೀರ್ಗಳೊರವಿನಿ
ನ್ನೊಂದುನೃಮರವಿನಿಂಪ್ರದ್ಯುಮ್ನನು॥೩೧॥ ಕೃಷ್ಣಸುತನೆಂದಿಂನೆಗಂಸ್ಯೆ
ರಿಸಿದೊಡೆನೀ। ನುಷ್ಣಮುಳ್ಳವನಾದೆತಂನಬಾಣಾವಳಿಯ । ತೃಷ್ಣೆಗರು
ಣಾಂಬುವೆಂನಿಂನೊಡಲೊಳೂಡಿಸದೆಬಿಡುವನೇಮೋಣಸುವನು ॥ ಉಷ್ಣ
ಮಂಮಾಡಿಸದೆಮಾಣ್ದಸೆನೆಸಾಕಿನ್ನು ।ಜಿಷ್ಣುಶಂಕರೆಸುತೊಲಗೆನುತೊಂ
ದುಸರಳಿಂದ । ವೃಷ್ಣಿಕುಲತಿಲಕನಕುಮಾರಕನಘನುವನೇಳ್ತುಂಡಾಗಿಖಂ
ಡಿಸಿದನು ॥ ಬಿಲ್ಮುರಿಯೆಕಾರ್ಷ್ಣಿಕಡುಗೋಪದಿಂಧಾರ್ಪ್ಪಣಂ । ಫಲ್ಗುರ
ನುತಸಿವಲಸೆವಿಡಿದವನಮೇಲೆಸಡೆ ।ಯುಲ್ಕುಂದಕಡಹಾಯ್ದನರಿಮಲಾರಿಪು
ರೌದ್ರಕರ್ಮಕೃತವರ್ಮಕನನು॥ಬಲ್ಕೆಯುಳ್ಳವನಹೆವೃಷಧ್ವಜಪ್ರದ್ಯುಮ್ನ
ರೊಳ್ಕಹಾವೀರರಿಲ್ಲವರೋಳಿಪ್ಣರ್ದನೀ । ನಿಲ್ಕದೀಯಾಸ್ತ್ರವಿನ್ಯಾಸ್ತರ
ಮಂನೋಡೆನುತತೆಗದೆಚ್ಚುಬೊಬ್ಬಿರಿದನು ।೩೩॥ ಲೇಸಾದುದಖಿಳಯಾದ
ವರೊಳಗೆಕೃತವರ್ಮನೇ ಸಮರ್ಥಂಕಾಣಬಹುದುಕಾಳಗದೊಳೆನು । ತಾ
ಸುಧನ್ವಂತೆಗದೆಸಲ್ಕವನಕಣೆಗಳಂಕಡಿದಿವೆಂಮುಗುಳ್ದೆಚ್ಚಡೆ ॥ ಆಸರಳ್ಗಳನ
ವಂತರಿದುಹತ್ತಂಬಿನಿಂ । ಘಾಸಿಮಾಡಿದೊಡಿವೆಂಪದಿನ್ಯೆದುಮಾರ್ಗಣದೋ
ಳೋಸರಿಸದವನಸರ್ವಾಂಗಮುಂಕೀಲಿಸಿದನರುಣಜಲದೊರತೆವಸಗೆ ।೩೪॥
ಹಾರ್ದಿಕ್ಯನೆಸುಗೆಯಿಂದುರನೊಂದುಕೋಪದಿಂ। ದಾರ್ದಾರ್ಸುಧನ್ವನಿಪ್ಪ
ತ್ತನಾಲ್ಕಂಬಿನಿಂ । ತೇರ್ದೆಗೆವಕುದುರೆಗಳಕಾಲ್ಗಳಂಘಾಲಿಗಳಕೀಲ್ಗಳಂ
ಮೂಡಿಗೆಯನು ॥ ಮಿರ್ದೆಸೆವಚಾಪಮಂಸಾರಥಿಯಕರಮಂಷ್ಟೆ। ಣಾರ್ಧ
ದೊಳ್ಕಡಿಯೆಕೃತವರ್ಮನಳವಳಿದುಕೆಲ । ಸಾರ್ದೊಡಾಪಥದೊಳನು
ಸಾಲ್ವನಿದಿರಾದನತಿವೇಗದಿಂದವನರಥಕೆ ॥೩೫॥ ಸಾಲ್ವಾನುಜಂಕರ್ಣಾತಾ
ನೆಂನೊಳಾಹವಕೆ । ಮೇಲ್ವಾಯ್ದಡನುಪಮಸುರೇಂದ್ರನಪರಾಕ್ರಮಕೆ ।
ಸೋಲ್ವನೇತಂನೊಳ್ಪ್ಪಣರ್ದುನಾಯ್ದುಡೆಧರ್ಮರಾಜನವರಂಕಾಣ್ಬದು ॥
ತೇಲ್ವುದುರಹಾಗ್ರದಿಂದಲ್ಲದೊಡುಳುಹನೆನುತ । ಕೋಲ್ಮಳೆಗರೆದನವಂ
ಪ್ರಳಯಜೀಮೂತವಂ। ಪೋಲ್ವಿನಿಂಮುಸುಕಿತುಸುಧನ್ವನನರಥವಂ
ಬಹಳಶರಯೂಥಮುಂದು ॥ ಬಲ್ಲೆನನುಸಾಲ್ವನೆಂಡಳಹಿಯಂಬಿಟ್ಟಡಾಂ।

ಬಿಲ್ಲಾಳಿಪೇಳ್ ಧರ್ಮರಾಜನವರಂ ಕಾಣ್ಬ । ನಲ್ಲ ಕಾಣಿಸುವೆನೀಗಳೆ ಧರ್ಮ
ರಾಜನವರಂತರಹರಿಸು ನಿನ್ನನು ॥ ಎಲ್ಲಿ ತೋರಿಸುವೆ ಪ್ರಗಸದಳದಬಲ್ಮೆ
ಯಂ । ಕೊಲ್ಲಬೇಕಾದೊಡಿದ್ದಪೆನೆನುತ ಕೋಲ್ಗಗಳಂ । ಬೆಲ್ಲಿದಂ ಹಂಸ
ಧ್ವಜನಸುತಂ ಕಾಶಿರಾಜನಸುತಂ ಘಾಸಿಯಾಗೆ ॥೩೭॥ ಫಡಫಡಲವೆಲವೊ
ತೊಲತೊಲಗೆನುತ ರೋಷದಿಂ । ಘುಡಿಘುಡಿಸಿ ಕಾರಿಡುವ ಕಾಯದಿಂದನ
ಸಾಲ್ವ । ನೊಡನೊಡನೆ ಪೊಳೆಪೊಳೆವ ಪೊಸಮಸೆಯ ನಿಡುನಿಡುಸರಳ್ಗಳಂ
ತೆಗೆದೆಸುತಿರೆ ॥ ಎಡೆಯೆಡೆಯೊಳಡಿಗಡಿಗೆ ಹಂಸಧ್ವಜಾತ್ಮಜಂ । ಕಡಿಕಡಿ
ದುವಿಾರಿದಸರಾಕ್ರಮದೊಳಸುರನಂ । ಬಿಡಬಿಡದೆ ಘಾತಿಸಿದನಿಪ್ಪತ್ತು ಬಾ
ಣದಿಂ ಬಿಸಿಬಿಸಿಯ ನೆತ್ತರೊಸರೆ ॥೩೮॥ ಮತ್ತೆ ಕಿಡಿಯಿಡೆ ಕೋಪಮನುಸಾ
ಲ್ವನಬ್ಧಿಯಂ । ಮುತ್ತು ಗೊಂಬುರಿಗೆ ಸರಿಯಾದೊಂದು ಬಾಣಮಂ । ಕಿತ್ತು
ಹೂಡಿದನಿದಂತರಹರಿಸಿ ಕೊಳ್ಳೆನುತ ತೆಗದೆಚ್ಚು ಬೊಬ್ಬಿರಿಯಲು ॥ ಕತ್ತರಿ
ಸುವಡೆಗಣೆಗಳಂ ವಿಾರಿನಡುವೆದೆಯ । ನುತ್ತರಿಸಿ ಕೋಲತ್ತ ಡಗಿತವನಿಯೊ
ಳಾಗ । ಪುತ್ತವೊಗುವಹಿಯಂತೆ ಬಳಿಕ ಮೈಮರೆದಂ ಸುಧನ್ವನದನೇವೇಳ್ವೆ
ನು ॥೩೯॥ ಎಲೆಲೆಕವಿಕವಿಯೆನುತ್ತವನ ಬಲಕಂಡುಸಂ । ಕಲೆಗಡಿದಮುಗಿ
ಲಂತಿವನ ಮೇಲೆ ಕೈದುಗಳ । ಮಳೆಗರೆವುತಿಟ್ಟಣಿಸಿ ನೂಕಲನುಸಾಲ್ವಂಕನ
ಲ್ದು ಜಗದಳಿವಿನಂದು ॥ ಸುಳಿವ ಬಿರುಗಾಳಿಯಂ ಸೋಲಿಸುವ ನಿಡುಸರ । ಳ
ಳಗೆಯ ಭರದನಿಲಘಾತದಿಂ ಬಯಲಾದು । ದಳವಿಯೆನಲೆಸುಗೆಯಂ ಕೈ
ಗೊಂಡು ಸವರಿದಂ ಬಂದರಿಪುವೋ ಹರವನು ॥೪೦॥ ಕಣ್ದೆರದು ಕಂಡಂ ಸ
ಧನ್ವನಾಬಳಿಕ । ಖತಿಯಿಂದ ಕೋದಂಡಮಂ ಕೊಂಡೆಲವೊ ಕಲಿಯಾಗಿ ।
ನಿಂದಿದಂ ಸೈರಿಸಿದೆಯಾಡಿನ್ನೆ ಸೆವುದಿಲ್ಲಾವು ಹೋಗೆನುತ ಹೆದೆಗೆ ॥ ಬಂದು ಸರ
ಳಂಪುಡಿಕಿ ವಿತರಗೆ ತೆಗದೆಚ್ಚ । ಡಂದು ಸಾಲ್ವಾನುಜನ ಪೇರುರವನುಚ್ಚಳಿಸೆ
ನೊಂದಿಳೆಗುರುಳ್ದನಾದುದು ಮೂರ್ಛೆ ಪೊಕ್ಕನುರುವಣಿಸಿ ಪಾರ್ಥನಬಲವ
ನು ॥೪೧॥ ಹಾಣೆಹೊಕ್ಕವನೆಸವ ಬಾಣಂಗಳರಿಭಟರ । ಗೋಣನರಿದುಚ್ಚ
ಳಿಸವಮೊಣಬೆಗಗನಕೇಳ್ವ । ಶೋಣಿತದಧಾರೆಗಳ್ ಶೋಣಾಭ್ರದಂತಿರಲ್ ಪ್ರಾ
ಣಿಗಳ ದೃಷ್ಟಿಗಳ್ಗೆ ॥ ಕಾಣಿಸಿದುದಾಲಿಸೈ ಕ್ಷೋಣಿಪ ಸುಧನ್ವನ । ಕ್ಷೋಣಿವಿ
ಕ್ರಮಶಿಖಿಯ ಚೂಣಿಯ ಮಹಾಜ್ವಾಲೆ । ಕೇಣಿಗೊಂಡರಿಬಲಶ್ರೇಣಿಯಂ
ಬೊಂದಡವಿದಾಣಮಂ ಹೊಕ್ಕಂತಿರೆ ॥೪೨॥ ಸಂದಣಿಸಿದಂತಿಗಳ ಘಟೆಗಳೊ
ತ್ತರಿಸಲ್ಕೆ । ಸಂದಣಿಸಿದಂ ಸರಳಸಾರದಿಂ ಕೆಡಹಿದಂ । ಕೊಂದನುರವಣಿಸಿ
ಕಾಲಾಳ್ಗಳಂ ಮುಳಿದು ಬಳಿಕೊಂದನುಳಿಯದೆರಣದೊಳು ॥ ಬಂದವಾಜಿಗ
ಳಸಾನಳವಿಯೊಳ್ ಕಾಣೆನೆಂ । ಬಂದವಾಗಲ್ಕೆ ತಡೆಗಡೆದು ಮುದೆಗೆಡಹಿದಂ ।

ಮುಂದಿಟ್ಟಣಿಸಿಬಿದ್ದುದಾಗರಥಿಕವ್ರಾತಮುಂದಿಟ್ಟನೆಸುಗೆಯಿಂದ ॥ ೪೩ ॥
ಕೆಡದೊಡದಸೀಳಿಂದಕಡಿವಡೆದತೋಳಿಂದ । ತೊಡೆಯುಡಿದತುಂಡಿಂದನೆ
ಣವಸೆಯುಜೊಂಡಿಂದ। ಬಿಡುಮಿದುಳತುಂಡದಿಂತಂಡದಿಂರುಂಡದಿಂಮುಂಡ
ದಿಂಖಂಡದಿಂದ ॥ ಅಡಗುಗಳತಿರುಳಿಂದನಿಡುನರದಕರುಳಿಂದ । ಕೆಡವಿಡಿ
ವನೆತ್ತರಿಂದೆಡೆವಿಡದೆಸತ್ತರಿಂ । ದಿಡಿದಿರ್ದುದಾರಣದಲೋರಣದವಾರಣದ
ಕಾರಣದಪೂರಣದೊಳು ॥೪೪॥ ಕಾಕಬಕಗೃಧ್ರಗೋಮಾಯುಸಂತತಿಗ
ಳಿಂ।ಡಾಕಿನಿಪಿಶಾಚವೇತಾಳಭೂತಂಗಳಿಂ। ಭೀಕರದೊಳಂಜೆಸಿದವಾದುರ್
ರಿಂಗಣಗುಣಿವಕಲಿಗಳಕಪಾಲಂಗಳು ॥ ಲೋಕದಖಿಳಪ್ರಾಣಿಗಳನುಂಡ
ಜೀರ್ತಿಯಿಂ ॥ ದೋಕರಿಸಿದನೊಕಾಲನೆಂಬಿನಿಂಕಣ್ಗೆಸದು । ದಾಕಳಂ
ಕಾಕುಳಿದಮಾಂಸಕರ್ದಮರುಧಿರನೆಣವಸೆಮಿದುಳ್ಗಳಿಂದ ॥೪೫॥ ನೋಡಿ
ದಂಸಾತ್ಯಕಿಸುಧನ್ವನಾಟೋಪಮಂ । ಮಾಡಿದಂಬದ್ಧಭ್ರುಕುಟಿಯಿಂದ
ಕೋಪಮಂ । ತೀಡಿದಂತಿರುವನೇರಿಸಿಮಿಡಿದುಚಾಪಮಂತಾಗಿದನವನರಥ
ವನು ॥ ಆಡಿದಂನಿಜನಾಮಧೇಯಪ್ರತಾಪಮಂ । ಪೂಡಿದಂತೆಗೆದಂಬನೆ
ಚಹಿರಿಯುಮೋಘಮಂ । ತೋಡಿದಂಮುವ್ವತ್ತುಬಾಣದಿಂತಾಪಮಂಕುರಿ
ಸುವಂತವನನೊಡಲೊಳು । ಘಾಯುವಡದಕ್ಕೆಲನತೆರದಿಂಕೆರಳ್ದೈ।ನೇ
ಯುನೆಂಮುಗುಳೆಮುವ್ವತ್ತೈದುಕೋಲ್ಗಳಿಂ। ನೋಯಿಸಿದನಾಸುಧನ್ವಂ
ಬಳಿಕಸಾತ್ಯಕಿಸಹಸ್ರಸಂಖ್ಯಾತಮಾದ ॥ ನಾಯಕದೊಳಾತನವರೂಥಹ
ಯುಸಾರಥಿಯು ।ಗಾಯತಧ್ವಜಛತ್ರಚಮರಮಂತರಿದೊಡವ । ನೀಯಾ
ದವನತೇರನುರಮುರಿಯಲೀರ್ವ್ವರುಂವಿರಥರಾದರ್ಧುರದೊಳು ॥ ೪೬ ॥
ನಿಂದುಕಾದಿದರೊಮ್ಮೆಕೈದುಕೈದುಗಳೊಳ್ಳೈ। ತಂದುಕಾದಿದರೊಮ್ಮೆಮ
ತ್ತೆಪೊಸತೇರ್ಗಳಿಂ।ಬಂದುಕಾದಿದರೊಮ್ಮೆಕೂಡೆತಮತಮಗೊದಗಿದೆಡ
ಬಲದಪಡಿಬಲವನು ॥ ಕೊಂದುಕಾದರೊಮ್ಮೆಶರಶರದಹತಿಗಳಿಂ।ನೊಂ
ದುಕಾದಿದರೊಮ್ಮೆಚಳಬಳಿಕೆಯಿಂದಸಲೆ। ಸಂದುಕಾದಿದರೊಮ್ಮೆಸಾತ್ಯ
ಕಿಸುಧನ್ವರೋರೋರ್ವರ್ಗೆಸರಿಮಿಗಿಲೆನೆ ॥೪೭॥ ಬವರಮೀವರ್ಗೆಸರಿ
ಯಾಗೆಕಡುಗೋಪದಿಂ।ದವಘಡಿಸಿದಂಸುಧನ್ವಂಬಳಿಕಸಾತ್ಯಕಿಯು । ಸವ
ಗಸೀಸಕಬಾಣಬತ್ತಳಿಕೆಸಿಂಧಸೀಗುರಿಛತ್ರಚಾಮರವನು ॥ ಸವರಿಸಾರಥಿ
ಯುಂವರೂಥಹಯಚಕ್ರಮಂ।ಕವಲಂಬುಗಳೊಳೆಚ್ಚುಕತ್ತರಿಸಿಕರದಚಾ।
ಪವನ್ನೈದುಕಡಿಯಾಗಿಮಾಡಿಪೇರುರಕೆಮೊನೆಗಣೆಗಳಂಮೋಹಿಸಿದನು ॥
ಸತ್ಯಕಸುತಂಗೆಪರಿಭವಮಾಗೆಭುಜಬಲದೊ । ಳತ್ಯಧಿಕಯೌವನಾಶ್ವಾಸಿ
ತಧ್ವಜಗದಾ। ದಿತ್ಯಭವಸೂನುಶಿತನಿಶಿತಕೃತವರ್ಮ್ಮಸಾಂಬಾನುಸಾಲ್ವಪ್ರ

ಮುಖರು ॥ ಪ್ರತ್ಯೇಕವೀರರಿನಿತೆಲ್ಲರುಂಪಡೆಸಹಿತ । ಸತ್ಯವಿಕ್ರಮಸುಧನ್ವ
ನಸಮ್ಮುಖಕೆನಡೆವ । ಕೃತ್ಯಮಂಕಂಡರ್ಜುನಂಕೋಪದಿಂದಕಾಳಗಕೆ
ತಾನನುವಾದನು ॥ ಮುಂಚೆರಗನಳವಡಿಸಿವೀರಪಳೆಯಂಬಿಗಿದು । ರಂಜಿಪತ
ನುತ್ರಸೀಸಕವನಾಂತಮರಗಣ । ಕಂಜಾಳಿಯನೆತ್ತಿಪಳವಿಗೆಯಹನುಮಂ
ಗೆರಗಿಬಲವಂದುಮಣಿರಥವನು ॥ ಮಂಜುಳಹಯಂಗಳಂಬೋಳೈಸಿಮಣಿ
ದುತೀ । ರಂಜಯುನಿನಾದದಿಂದೇರಿದಂಸಮರಕೆಧ । ನಂಜಯಂಧ್ಯಾನಿಸುತ
ಮನದೊಳಗೆದೇವಪುರನಿಲಯಲಕ್ಷ್ಮೀಪತಿಯನು ... ॥೫೧॥

ಸಂಧಿ ೧೨ಕ್ಕೆ ಪದ್ಯ ೬೧೭ಕ್ಕಂ ಮಂಗಳಮಸ್ತು.

——*——

## ಹದಿಮೂರನೆಯ ಸಂಧಿ.

ಸೂಚನೆ ॥ ಹಂಸಧ್ವಜನಸುತನಸಮರಮಿದಾಗಿಬರೆ । ಕಂ
ಸಾರಿಬಂದುಸಾರಥಿಯಾಗಿನರನಶರ । ದಿಂಸುಧನ್ವನಶಿರವನರಿ
ಸಿದಂಮೇಲೆಸುರಗಣವ್ಯೈದೆಕೊಂಡಾಡಲು ॥

ಕೇಳೆಲೆನೃಪಾಲಕುಲಮೌಳಿಬಳಿಕರ್ಜುನಂ । ಕಾಳಗಕೆನಡೆವಭಟರಂ
ನಿಲಿಸಿಮುಂದುವರಿ । ವಾಳಪಡೆಯಂತೆಗಸಿಘರದಿಂದನೂಕಿದಂಕಲಿಸುಧನ್ವ
ನಸರಿಸಕೆ ॥ ಗಾಳಿಯಜವಂಪೊಡೆವಸಿಡಿಲಗರ್ಜನೆರವಿಯ । ಮೇಳಮುಂದಾ
ವಾಗ್ನಿಯಾಟೋಪಮಂತಕನ । ಕೋಳಾಹಳಂಕೂಡಿಕೊಂಡೊಂದುರೂ
ಪಾದವೋಲ್ಕಾಣಿಸುವರಥವನು ॥೧॥ ಕುದುರೆಗಳಖುರಪುಟಧ್ವನಿನಿಜವ
ರೂಥದಚ । ಕ್ರದರವಂದೇವದತ್ತದಘೋಷಮುಸೆವಸಿಂ । ಥದತುದಿಯಕಪಿ
ಯುಬ್ಬರಣೆಧನುರ್ಘೋಂಕಾರವೊಂದಾಗಿಭೀಕರದೊಳು ॥ ಪದಿನಾಲ್ಕು
ಲೋಕಮಂಬೆದರಿಸಲ್ಕಿದುನರರನ । ಕದನದಾಟೋಪಮಂದರಿದಂಬುಜಾಸ
ನಂ । ಮೊದಲಾದನಿರ್ಜರರ್ತಮತಮ್ಮವಾಹನವಿಮಾನದಿಂದೈತಂದರು ॥೨॥
ವಾನರಸಮುನ್ನತಧ್ವಜವರೂಥದೊಳೈದು । ವಾಸರಸಮೇಶರಥವನರಿದು
ಕಾಳಗಕೆನಾ । ವಾನರಸಮರ್ಥನೆಂದರ್ಜುನಂಬಹನೆಂದುನಿಜಸಾರಥಿಗೆ
ಸೂಚಿಸಿ ॥ ದಾನವನರಾನಿಮಿಷರೊಳುನೀನೆಭಟನಹೆನಿ । ದಾನವನನೇಕ
ಮುಖದಿಂಕೇಳ್ದಸಂಗ್ರಾಮ । ದಾನವನರಸಿಬಂದೆನೆಂದೆಚ್ಚನಾಸುಧನ್ವಂಪಾ
ರ್ಥನಂಧುರದೊಳು ॥೩॥ ಕೃದ್ಧನಾದಂಧನಂಜಯನಿದೇಕೆಂಮೊಡನೆ । ಯುದ್ಧ
ವನಪೇಕ್ಷಿಸುವಶಿವಶಿವಾಸೇನಪ್ರ । ಬುದ್ಧನಲ್ಲವೆದೇವದೈತ್ಯಮಾನವರೊ
ಳ್ಮದೀಯವೈರದೊಳೆಬಾಳ್ದ ॥ ಉದ್ಧತಪರಾಕ್ರಮಿಗಳುಂಟೆಸಂಗರಕೆಸಂ ।

ನದ್ಧರಾದಿಸಸುತದ್ರೋಣಭೀಷ್ಮಾದಿಪ್ರ। ಸಿದ್ಧಭಟರೇಸಾದರರಿಯಲಾಪ
ರುಳಿಹೋಗೆನುತೆಚ್ಚನಾಪಾರ್ಥನು ॥೪॥ ಸಾರಥಿಯುಬಲ್ಪಿಂದಕೌರವನ
ಬಲದಖಿಳ। ವೀರರಂಗೆಲ್ದಯಲ್ಲದೆನಿನ್ನನೀಥರೆಯೊ। ಆರರಿವರಕಟನೀಂಕೃ
ಷ್ಣನಂಕರೆಸಿಕೊಂಡಳವಿಗೊಂಡುಬಳಿಕೆನ್ನೊಳು॥ ಸಾರನ್ನೆಗಂಬರಿದೆಬ
ಳಲಬೇಡೆಮ್ಮಲ್ಲಿ। ಹಾರ್ಕೈಸದಿರ್ಜಯವನೆನುತೆಚ್ಚದರ್ಜುನನ । ತೇರಿರದೆತಿ
ರ್ರನೆಬಗುರಿಯಂತೆತಿರುಗಿತದನೇನೆಂಬೆನದ್ಭುತವನು॥೫॥ಫೂತುರೆಸುಧನ್ವ
ಸತ್ತ್ವಾತಿಶಯದಿಂದವಿ । ಖ್ಯಾತನಹೆಮದ್ರಥವನೀತೆರದೊಳೆಸವರಂ । ಪಾ
ತಾಳಸುರನಿಲಯಭೂತಳದಪಟುಭಟವ್ರಾತದೋಳ್ಕಾಣೆನಿನ್ನ ॥ ನೀತರ
ಳನಕಟಬರಿದೇತಕಳಿದಪೆನಿನ್ನ। ತಾತನಂಬರಹೇಳ್ಘಾತಿಸುವರಲ್ಲನಾ ।
ವಾತುರಗಮಂಬಿಡದೆಧಾತುಗೆಡಬೇಡೆನುತಲಾತನಂನರನೆಚ್ಚನು ॥ ೬ ॥
ಇನ್ನುಹಯಮಂಬಿಡುವನಲ್ಲನಿನಗೆಮ್ಮತಾ । ತನ್ನಳಿಸನಾಥನಸಹಾಯ
ಮಿಲ್ಲದೆಬರಿದೆ । ತನ್ನನಳುಕಿಸಲರಿಯೆಕಕ್ಕುಲಿತೆಬೇಡನಡೆಹಸ್ತಿನಾಪುರ
ಕೆಮರಳಿ॥ ಸನ್ನುತತುರಂಗಮೇಧಾಧ್ವರಕೆದೀಕ್ಷೆಗೊಂ । ಬನ್ನರೇಂದ್ರಾ
ಗ್ರಣಿಮರಾಳಧ್ವಜಂಬಳಿಕ । ನಿನ್ನವಿಕ್ರಮದಿಂದಜಯಿಸುಭೂಮಂಡಲ
ವನೆನುತವಂತೆಗೆದೆಚ್ಚನು ॥ ಈಚಾಪವೀಬಾಣವೀದಿವ್ಯರಥವೀವ ।
ನೇಚರಧ್ವಜವೀಮಹಾಶ್ವಂಗಳೀಸವ್ಯ । ಸಾಚಿತ್ವವೀದೇವದತ್ತಶಂಖಂತ
ನಗಿದೇಕೆನಿನ್ನಂಜಯಿಸದೆ ॥ ಈಚತುರ್ದಶಜಗನೆಣುವಂದರಿಯೆನಕಟ ।
ಗೋಚರವನೀನೆನಗೆಘಡಯೆನುತತೆಗದುನಾ । ರಾಚವೇಳ್ನೂರನೆಚ್ಚಂ
ಸುಧನ್ವನಮೇಲೆಪಾರ್ಥನೇಣ್ದೆಸೆಕಂಪಿಸೆ ॥೮॥ ದಿವ್ಯರಥಹಯಚಾಪಶರ
ಕೇತುಕಂಬುಗ । ಳ್ಸವ್ಯಸಾಚಿತ್ವಮಿವುನಿನಗೊದಗಿದವುರಣದೋ । ಳವ್ಯ
ಯಂಸಾರಥ್ಯಮಂಮಾಡಲಿನ್ನುಜಯಮಹುದೆಹುಲುಸೂತನಿಂದ ॥ ಹವ್ಯ
ವಾಹನಸಖಂತೊಲಗಿಸುವಬಹಳಮೇಘ । ವ್ಯೂಹಸಂಘಾತದೊಡ್ಡವಣೆ
ಮುರಿವುದೆಕೃ । ತವ್ಯಜನವಾತದಿಂದೆಲೆಮರುಳೆಹೋಗೆನುತವಂಕಿರೀಟ
ಯನೆಚ್ಚನು ॥೯॥ ಪಾಂಡವಂಬಳಿಕಬೇಸಿಗೆಯನಡುವಗಲಮಾ । ರ್ತಾಂ
ಡನಂತಿಹಕಲಿಸುಧನ್ವನಂಕಂಡುಮಿಗೆ। ಖಾಂಡವದಹನಲಬ್ಧಮಾಗಿಮೂ
ಡಿಗೆಯೊಳಿದ್ದಾಗ್ನೇಯಮಾರ್ಗಣವನು ॥ಗಾಂಡೀವಕಳವಡಿಸಿತೆಗವಿನಿಂಕಾ
ರ್ಬೊಗೆಯು । ಜಾಂಡಮಂತೀವಿದುದುಕಾದವುಕುಲಾದ್ರಿಗ । ಳ್ಬಾಂಡಜಲ
ದಂದದಿಂಕುದಿದುಕ್ಕಿದದುಕಡಲ್ಪೇಳಲೇನದ್ಭುತವನು ॥ ಆವಗಂಪೀರ್ವ
ಡಾಸರ್ಗೊಂಡುತೀರದಮು । ಹಾಪಾರ್ಥಜಲವನೊಂದೇಸಾರಿಸುರಿಗೊಂ
ಬ । ದಾವರದೊಳಿದ್ದವಡಬಾಗ್ನಿಯೋವಿಲಘುರುದ್ರನಫಣೆಯಕಣ್ಗಿಚ್ಚೆ

ದೊ ॥ ಭಾವಿಸುವಡರಿದೆಂಬೊಲಾದದುಧನಂಜಯನ । ಪಾವಕಾಸ್ತ್ರಂ
ಬಳಿಕತೆಗೆದುಬೊಬ್ಬಿರಿದುಗಾಂ । ಡೀವದಿಂಪಾರಿಸಿದೊಡಾಸುಧನ್ವನಸರಿ
ಸಕಡರಿತುರಿಕಡುಭರದೊಳು ॥೧೧॥ ತೆಕ್ಕೆವರಿದೆಳ್ವಕಾರ್ಬೊಗೆಯುಹೊ
ರಳಿಗಳದಶ । ದಿಕ್ಕುಗಳನಪ್ಪಳಿಪಕೇಸುರಿಯುಚಟುಳಿಗಳ । ಮಿಕ್ಕುಸೂಸು
ವತೂರುಗಿಡಿಗಳಕಣ್ಣಾಲಿಗಳಕಾರಿಡುವಪೊತ್ತಿಗೆಗಳ । ಕೊಕ್ಕರಿಸುತೊ
ಗುಪತನಿಗೆಂಡದಿಂಡೆಗಳಸಲೆ । ಮುಕ್ಕುಳಿಸಿಮೊಗವಪೇರ್ಗಿಚ್ಚುಗಳಬೆಂ
ಕಿಮೇ । ಲಿಕ್ಕಿದುದುಹಂಸಧ್ವಜನಸೇನೆಬೆಂದುಬೇಗುದಿಗೊಂಡುದಾಕ್ಷ
ಣದೊಳು ॥೧೨॥ ಕಾದವುಭಟರಕೈದುಗಳ್ಪಿಡಿಯುಲರಿದನ । ಲ್ಕಾದವುಶ
ರಾಗ್ನಿಗಾಹುತಿಗಜಹಯಾದಿಗ । ಳ್ಕಾದವುಧನಂಜಯನಮುಂದೆಮ್ಮಬಲ
ಮೆಂದುಕಲಿಸುಧನ್ವಂಕೆರಳ್ದು ॥ ಕೋದಂಡಕತಿವೇಗದೊಳ್ವಾರುಣಾಸ್ತ್ರ
ಮಂ । ಕೋದಂಡಲವಶಿಖಿಜ್ವಾಲೆಯಂನಿಲಿಸಲಿದ । ಕೋದಂಡಮನ್ನೊ
ಳಿನುತಾರ್ದುತೆಗೆದೆಚ ಡುರಿನಂದಿಜಲಮಯಮಾಗಲು ॥೧೩॥ ನಾದವುಸ
ಮಸ್ತಬಲಮಖಿಳವಾದ್ಯಂಗಳನಿ । ನಾದವುಡುಗಿತುನನೆದುಗಜವಾಜಿನಿಕ
ರಮೇ । ನಾದವುದಕದೊಳೆಂಬುದಂಕಾಣೆನಾಸುಧನ್ವನವಾರುಣಾಸ್ತ್ರದಿಂ
ದ ॥ ತೋದಳವಳಿದರೆಲ್ಲರಂಬುಧಾರೆಗಳನೆಂ । ತೊದಳವನೊರಗಿಸತು
ಫಲುಗುಣಂಬೆರಗುವೆ । ತ್ರೋದಳವಡದವಟುವಿನಂತಿರ್ದಸಾಹಸದೊಳರ
ಸಕೇಳ್ಕೌತುಕವನು ॥೧೪॥ ಬಳಿಕವಾಯುವ್ಯಾಸ್ತ್ರದಿಂದಶೋಷಿಸಿದನಾ ।
ಜಲವನರ್ಜುನನದ್ರಿಬಾಣಮಂಪೂಡಿದಂಕಲಿಸುಧನ್ವಂತೊಟ್ಟನೈಂದ್ರಶರ
ಮಂಫಲುಗುಣಂತಿಮಿರಸಾಯಕವನು ॥ ಸೆಳೆದಂಮರಾಳಧ್ವಜನಸುತಂತೆ
ಗೆದನು । ಜ್ವಲರವಿಕಲಂಬಮಂಭೀಭತ್ಸುತುಡುಕಿದಂ । ಮುಳಿದವಂಗರ
ಳವಿಶಿಖವನೂಗಿದನಾನರಂಗಾರುಡಶಿಲೀಮುಖವನು ॥೧೫॥ ಈತೆರದೊಳ
ಖಿಳಮಂತ್ರಾಸ್ತ್ರಂಗಳೆಸುಗೆಗಳ । ಚಾತುರ್ಯದಿಂದೋರ್ವರೋರ್ವರಂಗೆಲ್ವ
ಸ । ತ್ವಾತಿಶಯದಿಂದಕಾದಿದಾಸುಧನ್ವಾರ್ಜುನರ್ಬಳಿಕರೋಷದಿಂದ ॥
ಭೀತಿಗೊಳೆಮೂಜಗಂತೆಗೆದುಬ್ರಹ್ಮಾಸ್ತ್ರಮಂ । ಶ್ವೇತವಾಹನನಾರ್ದಸ
ಲ್ಕೆಹಂಸಧ್ವಜನ । ಜಾತಂಪ್ರತೀಕಾರಕಾಪಿತಾಮಹಶರವನೆಚ್ಚೊಡನೆ
ಬೊಬ್ಬಿರಿದನು ॥೧೬॥ ಆವರಬ್ರಹ್ಮಾಸ್ತ್ರಮುರಡುಂಪೊಣರ್ದಡಗ । ಲಾ
ವಿಜಯನೆಣಿಕೆಗೊಂಡೀತನಂಗೆಲ್ವಬಗೆ । ಯಾವುದೆಂದುಗಿದುಪೂಡಿದನಷೆ
ಯಾಸ್ತ್ರಮಂತನ್ನರಥಕವನತೇರ್ಗೆ ॥ ತೀವಿದವುಬಾಣಂಗಳಾಕಾಶಮಂ
ಕಾಣೆ । ನೀವಸುಧೆಯತ್ತಣದುಶಶಿರವಿಕುಲಾದ್ರಿತಾ । ರಾವಳಿಗಳೇನಾದವೇ
ಣ್ಪೆಸೆಯನರಿಪರಾರೆಂಬಿನಂಕೈಗೈದನು ॥ ಇಚ್ಛಾರಿಗೊಂಡುನರನೆಚ

ಕೆಂಗರಿಗೋಲ । ಬಿಚ್ಚಳಿಯುಪ್ಪೊಸಮುಸೆಯುನಿಚ್ಚಳದನಿಡುಸರಳ್ಪಿಚ್ಚಿ ದು
ವುನಿಮಿಷದೊಳ್ಮುಚ್ಚಿ ದುವುಗಗನಮುಂಕೊಚ್ಚಿ ದುವುಪರಬಲವನು ॥ ಬಿ
ಚ್ಚಿ ದುವುಕವಚಮುಂಕಚ್ಚಿ ದುವುಖಂಡಮಂ। ಚುಚ್ಚಿ ದುವುಕೊಟೆಘಟ್ಟಚ್ಚಿ
ದುವುಸೀಳಾಗಿ । ಹಚ್ಚಿ ದುವುಪೈಯೊಳಗೆಹೊಚ್ಚಿ ದುವುಹೊಗರಲಗುಮು
ಚ್ಚಿ ದುವುನೆಣವಸೆಯನು॥ಗೌರಿಯರಸನಕೊಡೆಕಾದಿದಪರಾಕ್ರಮದ।ಸಾ
ರಂಭಮಿನಿತುಟೆನಿವಾತಕವಚರಸಿರಿದ । ಗೌರವಮಿದೀಗಳ್ಭೀಷ್ಮಕ
ರ್ಣದ್ರೋಣಮಾದ್ರಪತಿಮೊದಲಾಗಿಹ ॥ ಕೌರವಬಲದೊಳಖಿಳವೀರಭ
ಟರಂಗೆಲ್ದ । ಪೌರುಷಮಿನಿತೆನಾಕುಬರಿದೆಬಳಲಿಸಬೇಡ। ಶೌರಿಯಂಕರಸೆ
ನುತಕಣೆಗಳಂಕಡಿದೆಚ್ಚನಾಸುಧನ್ವಂನರನನು ॥೧೯॥ ಕೇಳವನಿಪಾಲಕ
ಸುಧನ್ವನೆಸುವೆಸುಗೆಯಿಂ । ಪೇಳಲರಿಯಂತಿರುಗುತಿರ್ದುದುಮರೂಥಂ
ಕು । ಲಾಲಚಕ್ರದವೋಲ್ಬಸವಳಿದಕಪೀಶ್ವರಂಭ್ರಮಣೆಯಿಂಧ್ವಜದಮೇ
ಲೆ ॥ ಕಾಲಾಟವಡಗಿದುವುಕುದುರೆಗಳಸೂತನಂ। ಕಾಲನೊಯ್ದಿದಂಧನಂ
ಜಯನನೊಡಲೊಳಂಬುಗ । ಳ್ಕೀಲಿಸಿದವಿಕ್ಕೆಲದಸೇನೆಯಂಸವರಿದುವು
ಹೊಗರೊಗುವಹೊಸಕಣೆಗಳು ॥೨೦॥ ವ್ಯಥಿಸಿದಂಘಾಯದಿಂಸೂತನಳಿ
ಯಲ್ಕೆನಾ । ರಥಿತನವನುಂತಾನೆಮಾಡುತಿದಿರಾದನತಿ । ರಥರೊಳಗ್ಗ
ಳಿಯನರ್ಜುನನಾಸುಧನ್ವಂಗೆಬಳಿಕೀತಸಂಘುರದೊಳು ॥ ಮತಿಸದಿರ್ದೊರ್ಗ
ಚೆತನ್ನನೇಕೆಪಡೆದಳೊಬರಿದೆ । ಪೃಥೆನೆಲಕೆಪೊರೆಯಾಗಿಶಿವಶಿವಾಬಂದು
ದೆ । ಪೃಥಿವಿಪನಮುಖಕೆಡರಕಟೆನುತಮನದೊಳಗೆಕೃಷ್ಣನಂಧ್ಯಾನಿಸಿ
ದನು ॥ ಆರಸಕೇಳರ್ಜುನಂಧ್ಯಾನಿಸಬ್ಜಾಕ್ಷಗಳಿಭ । ಪುರದೊಳರಿದಂಮು
ರಧ್ವಂಸಿಹಂಸಧ್ವಜನ । ಘುರಮಂಸುಧನ್ವನಪರಾಕ್ರಮವನೆಚ್ಚರಿಸಿಧರ್ಮ
ತನಯಮಾದಿಗಳ್ಗೆ ॥ ತೆರಳದುಕಿರೀಟಿಗಾಹವಮೆಂದುವಹಿಲದಿಂ । ಗರುಡ
ವಾಹನನಾಗಿಬಂದನಾಕ್ಷಣಕಲ್ಲಿ । ಗರವಿಂದನಾಭನಾಸತರನೆನಹಿಗೆನಿತ್ಯ
ನೆಂಬುದಂತೋರುವಂತೆ ॥೨೧॥ ಕಸ್ಯಪವಸಿಷ್ಠಾದಿಪರಮಋಷಿಮುಖ್ಯ
ರಾ । ಲಸ್ಯವಿಲ್ಲದೆಮಾಡುವಧ್ಯಾನಕೊಮ್ಮೆಯುಂ । ದೃಶ್ಯಮಿಲ್ಲದಚಿನ್ಮ
ಯಾನಂದರೂಪನೀಕುಂತೀಕುಮಾರಕರ್ಗೆ ॥ ವಶ್ಯನಾಗಿಹನಂತೊಶಿವಶಿ
ವಾನೀಲಮೇ । ಘಶ್ಯಾಮಲನಲೀಲೆಪೊಸತೆಂದುಸುರರುಲಿಯೆ । ಸ್ವಶ್ವಾಲ
ಕನರಥಾಗ್ರಕೆಸುಪರ್ಣಸ್ಕಂಧದಿಂಮುರಹರನಿಳಿದನು ॥ ಮೊಳಗಿದುವುನಿ
ಸ್ಸಾಳಕೋಟಿಗಳ್ಫಲುಗುಣನ । ದಳದೊಳಗೆತನತನಗೆಗೋರ್ದ್ದುದುತ್ಸವ
ದ । ಲಳಿಮಸಗಿಕಳಕಳವಬೊಬ್ಬೆಯಿಂಮಿಕ್ಕುದರಭಸಮುಬ್ಬಿಘೋಷಣ
ವನು ॥ ಬಳಿಕನಸುನಗುತಚರಣಕೆಮಣಿದಪಾರ್ಥನಂ । ಸಳದುಬಿಗಿಯ

ಸಿಂಗರದಪದಪಿನಿಂದ ||೪೬|| ಎಲ್ಲಿಕೌಂತೇಯನಿರ್ದಪನಲ್ಲಿಗಾಗಿಬಂ| ದಲ್ಲಿ
ನಿಲ್ಲದೆಸಂಭ್ರಮದಲಿನಡೆತಂದುಮೈ| ಭುಲ್ಲವಿಸೆಹರುಷದಿಂಪಾರ್ಥನಂಕಂ
ಡುನಿಜಮೌಳಿಯಂತೆಗೆದುನರನ || ಮೆಲ್ಲಡಿಗನರ್ಘ್ಯರತ್ನಂಗಳಂಸುರಿದು
ಕರ| ಪಲ್ಲವದ್ವಿತಯಮಂಮುಗಿದುಭಯಭಕ್ತಿಯಿಂ| ಚೆಲ್ಲಿದನೊಡಲನಿಳೆ
ಯೊಳಾಬಭ್ರುವಾಹನಂನೀಡಿಸಾಷ್ಟಾಂಗದಿಂದ ||೪೭|| ಅರಸಕೇಳಾಬ
ಭ್ರುವಾಹನನೊಡನೆಬಂದ|ಪರಿವಾರಮಾಪುರಜನಂಗಳಾಕಾಮಿನಿಯ |
ರರಳಮಳೆಮುಕ್ತಾಫಲಂಗಳಂಸುರಿದರರ್ಜುನನಮಸ ಕದಮೇಲೆ || ಪರ
ಸುಬುದ್ಧಿಪ್ರಮುಖಮಂತ್ರಿಗಳ್ಬಂದರೊ| ತ್ತರಿಸಿಕಾಣಿಕೆಗೊಂಡುಬಳಿಕವಿ
ಸ್ಮಿತನಾಗಿ| ನರನೆಲೆನೃಪಾಲನೀನಾರೆನಲ್ಕವನೆದ್ದುಕೈಮುಗಿವುತಿಂತೆಂದ
ನು ||೪೮|| ತಾತಚಿತ್ತೈಸುನಿನ್ನಾತ್ಮಜಂತಾನೆನ್ನ |ಮಾತೆಚಿತ್ರಾಂಗದೆಯು
ಸಲಹಿದಳುಲೂಪಿಸಂ| ಪ್ರೀತಿಯಿಂದಿವರಾದರರರಸಿಯರ್ನೀನಂದುತೀರ್ಥಯಾ
ತ್ರೆಗೆಬಂದಿರೆ || ಜಾತನಾದೆಂಬಭ್ರುವಾಹನಂತಾನೀಗ| ಳೀತುರಗಮಂಪಿಡಿ
ದುಕಟ್ಟಿತಪ್ಪಿದೆಗುಣಾ| ತೀತಮಂಕ್ಷಮಿಸೆಂದುಮಗುಳೆರಗಿದಂಪಾರ್ಥನ
ಡಿಗೆನಂಭೀತಿಯಿಂದ||೪೯|| ಮಗುಳಮಗುಳಡಿಗೆರಗಿಭಯಭರಿತಭಕ್ತಿಯಿಂ|
ಮಿಗೆಬೇಡಿಕೊಳುತಕಾಲ್ವಿಡಿದಿಪ್ಪತನಯನಂ| ಮೊಗನೋಡಿಮಾತಾಡಿಸದೆ
ಬೆಗಡುವಡದಂತೆಕೆತ್ತುಕೊಂಡಿಹವಿಜಯನ || ಬಗೆಯನೀಕ್ಷಿಸಿಹಂಸಕೇತು
ನೀಲಧ್ವಜಾ| ದಿಗಳೆಲ್ಲರಾಗವಿಸ್ಮಿತರಾಗಿಚಿಂತಿಸಿಕ | ರಗಿದರತಿಕರುಣರಸ
ಭಾವದಿಂದೇನೆಂಬೆನಪಕೃತದಸೂಚಕವನು ||೫೦|| ಪ್ರದ್ಯುಮ್ನಹಂಸಧ್ವ
ಜಾದಿಗಳ್ಬಳಿಕಿದೇ| ನುದ್ವೇಗನೆಲೆಪಾರ್ಥನಿನ್ನತನುಭವನೀತ |ನುದ್ಯ
ತ್ಪರಾಕ್ರಮಿಮಹಾವೈಭವಶ್ಲಾಘ್ಯನಭಿಮಾನಿಮಾನ್ಯನಿಳೆಗೆ || ಖದ್ಯೋತ
ಸಂನಿಭಂನಿನ್ನಹೋಲುವೆಯನಿರ |ವದ್ಯರೂಪಂಪದಾವನತನಾಗಿರ್ದಪಂ|
ಹೃದ್ಯನಿವನಂಪರಿಗ್ರಹಿಸಿಮಂನಿಸದೇಕೆಸುಮ್ಮನಿರ್ದಪೆಯೆಂದರು ||೫೧||
ಭೂಪಕೇಳವರಿಂತೆನಲ್ಕೆಬಳಿಕರ್ಜುನಂ| ಕೋಪದಿಂದವನನಿಟ್ಟಿಸುತೆಂದ
ನಾಗತಲೆ |ಪೋಪುದಕೆತನ್ನಕಾಲೆಪ್ಪಣೆಯೆಂಬಧರೆಯನಾಣ್ಣುಡಿತಪ್ಪದಾ
ದುದೆನಲು || ಆಪುತ್ರನಹಬಭ್ರುವಾಹನನನೊದೆದೆಲವೊ |ನೀಪಂದಲೋ
ಕದೊಳ್ತನಗೆಸಂಭವಿಸಿದವ | ನೀಪರಿಯೊಳಂಜುವನೆಮೊದಲಶ್ವಮಂಕ
ಟ್ಟಿಮತ್ತೆಕಾದದೆಬಿಡುವನೆ ||೫೨||ಚಿತ್ರಾಂಗದೆಗೆವೈಶ್ಯನಿಂದಸಂಭವಿಸಿರ್ದ|
ಪುತ್ರನಲ್ಲದತನಗೆಜನಿಸಿದೊಡೆಬಿಡುವೆಯಾ |ಕ್ಷತ್ರಿಯರಮತಮಂಸುಭದ್ರೆ
ಗೆನ್ನಿಂದುದಿಸಿದಭಿಮನ್ಯುತಾನೊಬ್ಬನೇ || ಶತ್ರುಗಳಪಿಗಸಚಕ್ರವ್ಯೂಹದ
ಲ್ಲಿಗೆಧ| ರಿತ್ರೀಶನಂವಿರಾಂನಡೆದುಸಂಗ್ರಾಮದೊಳ | ಮಿತ್ರಭಟರಂಗಲಳಿ

ದನಾತನಲ್ಲದಾತ್ಮಜರುಂಟೆತನಗೆಂದನು ॥೫೩॥ ಜಂಬುಕಂಜನಿಸುವ್ರಸಿಂ
ಗಮುದರದೊಳಕಟ । ಹೆಂಬೇಡಿನೀನೆಲವೊಕುಲಗೇಡಿತನ್ನಬಸು। ರಿಂಬಂ
ದಪರೆಬೂಳಕುದುರೆಯುಂಕಾದದೇತಕೆತಂದೆಪಂದನಿನಗೆ ॥ ಡೊಂಬಿನಚ
ತುಬ್ಬಲಮಿದೇಕೆಭೂಪಾಲರಾ । ಡಂಬರದಛತ್ರಚಾಮರಗಳೇತಕೆಬಯಲ।
ಡಂಬಕದಕೈದುಗಳಿವೇಕೆಸುಡುಸುಡುನಿಂನಜೀವದಾಶೆಯುನೆಂದನು ॥೫೪॥
ಆಹಹನರ್ತಕಿಯುಲಾಗಂಧರ್ವನಾಯಕನ । ದುಹಿತ್ರುವಲ್ಲಾನಿನ್ನಮಾತೆಚಿ
ತ್ರಾಂಗದೆಯು।ವಿಹಿತವಿದುನಿನಗೆಭೂಪಾಲಕರವೇಷಮುಂತಳೆವನಾಟಕದ
ರಚನೆ ॥ ಬಹಳಪೌರುಷವೂದುದಿಂದುಹಯಮುಂತಡೆದ ।ರಹಣಿರಾಯರ
ಮುಂದೆಹೋಗೆಂದುದುಷ್ಕೃತಿಯು। ಕುಹಕದಿಂಪೈದುಭಂಗಿಸಿಜರಿದನಾತ್ಮ
ಜನನರ್ಜುನಂಕೋಪದಿಂದ ॥೫೫॥ ಬಿರುನುಡಿಗಳಿಂತನ್ನಮೊಗನೋಡದ
ರ್ಜುನಂ । ಜುದೊಳಾತನಬಗೆಯುನಾಸಬುದ್ಧಿಗೆತೋರು ।ತುರೆಕನಲ್ದುರಿ
ದೆದ್ದುಪಳಿದೆಲಾಮಾತೆಯುಂತನಗೆಸೀವರಿಸಿದೆಯಲಾ ॥ ಅರಿಯಬಹುದಿಂನು
ಕೇಳ್ನಿನ್ನತಲೆಗೆಹಹೊಡೆ । ಕುರುಹಿಟ್ಟುನೀನಾಡಿದಿನಿತೆಲ್ಲಮುಂಧಿಟಂ ।
ಮರೆಯುದಿರ್ಪಕೆಂದುತಿರುಗಿದಂಬಭ್ರುವಾಹನನಂದುಕುದುರೆಸಹಿತ॥೫೬॥
ತೆಗೆಸಿದಂತಂದಖಿಳವಸ್ತುವಂಕುದುರೆಯುಂ । ಬಿಗಿಸಿದಂಲಾಯದೋಳ್ಪುರ
ಜನಸ್ತ್ರೀಯರಂ ।ಪೊಗಿಸಿದಂಪಟ್ಟಣಕೆಕರೆಸಿದಂಸಚಿವರಂಸೇನಾಧಿನಾಯ
ಕರನು ॥ ಬಿಗಿಸಿದಂಚತುರಂಗಮುಂನೆರಹಿಂಧಾತ್ರಿಯುಂ । ಮಿಗಿಸಿದಂವಾಧ್ಯ
ರವದಿಂದಬ್ಧಿಘೋಷಮುಂ । ಮುಗಿಸಿದಂತಾವರೆಯುನಾಬಭ್ರುವಾಹನಂ
ಧೂಳ್ಗೀನನಂಮುಸುಕಲು ॥ ೫೭ ॥ ಕೇಳೆಲೆನೃಪಾಲಕುಲತಿಲಕಮುಂದ
ದ್ಭುತಕ । ಥಾಳಾಪಮುಂಬಳಿಕಪೂಡಿದುದುಕರ್ಕಶದ । ಕಾಳಗಂಸವ್ಯ
ಸಾಚಿಗೆಬಭ್ರುವಾಹನನಕೂಡೆಮಹದಾಹವದೊಳು ॥ ಹೇಳಲೇನೆಂದು
ಕರ್ಣಂಗೆಪಾರ್ಥನೊಳಾದ । ಕೋಳಾಹಳದಕದನದಂತೆಮುಂನಧ್ವ
ರದ । ಬೇಳಂಬದಿಂದರಾಮಂಗೆಕುಶಲವರೊಡನೆಬಂದಸಂಗ್ರಾಮದಂ
ತೆ ॥೫೮॥ ಆಲಿಸಿದನಲ್ಲಿಪರ್ಯಂತಜನಮೇಜಯಂ। ಮೇಲಣಕಥೆಯನೊ
ಲಿದುಬೆಸಗೊಂಡನೆಲೆಮುನಿಪ । ಹೋಲಿಸಿನುಡಿದೆಕರ್ಣಫಲುಗುಣರಸಮ
ರಮಂಕೇಳ್ದೆನದನಾನಿನ್ನೊಳು ॥ ಹೇಳಬೇಹುದುರಾಘವಂಗಸುತರೊಡ
ನಾದ । ಕಾಳಗದಸಂಗತಿಯನೆನಗೆಂದೆನಲ್ಕೆಭೂ । ಪಾಲಂಗೆವಿರಚಿಸಿದ
ನೀತೆರದೊಳಾತಪೋನಿಧಿಬಳಿಕಸಂತಸದೊಳು॥ಪ್ರೇಮದಿಂದ್ಯೈದವಿಸ್ತರಿಸಿ
ದಂನೃಪಕುಲೋ । ದ್ದಾಮಜನಮೇಜಯಂಗೆಸಗೊಳಲ್ಜೈಮಿನಿಮು ।
ಹಾಮುನೀಂದ್ರಂಕೊರ್ತುಕೇಳ್ವರ್ಗೆರೋಮಾಂಚಸಂಪೂರ್ಣಕ್ಕೆಹರುಷಮೂ

ಣ್ಮೆ ॥ ರಾಮಾವತಾರದೊಳ್ದೇವಪುರನಿಲಯುಲ । ಕ್ಷ್ಮೀಮನೋವಲ್ಲಭಂ
ತನ್ನಸುತರೊಡನೆಸಂ । ಗ್ರಾಮದೊಳ್ಕಾದಿದಕಥಾಮೃತವನದರಕಾರಣ
ಸಹಿತತುದಿವೊದಲನು ॥೫೯॥

ಸಂಧಿ ೧೭ಕ್ಕೆ ಪದ್ಯಗಳು ೪೬೬ಕ್ಕೆ ಮಂಗಳಮಸ್ತು

---

## ಹದಿನೆಂಟನೆಯ ಸಂಧಿ.

ಸೂ॥ ಸಾಮ್ರಾಜ್ಯಮಂತಾಳ್ದೆ ಸೆವರಾಘವೇಂದ್ರನಿಂ । ತಾಮ್ರ
ಪ್ರವಾಳಗಂತಿರೆವಿರಾಜಿಸುತಿರ್ಪ । ತಾಮ್ರಾಧರೆಯುರಸೀಮಂತ
ಮಣಿಸೀತಾರಮಣಿಗರ್ಭಮಂತಾಳ್ದಳು॥

ಭೂಪಾಲಕೇಳಾದೊಡಿನ್ನು ಪೂರ್ವದೊಳವನಿ । ಜಾಪತಿಯಕುಶಲಪರ
ಸಂಗರದಕೌತುಕವ । ನಾಪನಿತನೊರವೆನಿಷ್ವಾಕುವೊದಲಾದರವಿಕುಲ
ದನೃಪರೆಲ್ಲಗಳನು ॥ ವ್ಯಾಪಿಸಿದಸಂಪದಕೆನೆಲೆವನೆಯೆನಿಪ್ಪಯೋ।ಧ್ಯಾ
ಪುರದೊಳವತರಿಸಿದಂಮಹಾವಿಷ್ಣು ಸುತ । ರೂಪದಿಂರಾಮಾಭಿಧಾನದೊ
ಳ್ಪುತ್ರಕಾಮೇಷ್ಟಿಯಿಂದಶರಥಂಗೆ ॥೧॥ ತೊಳೆದುಜನನಿಯಜಠರವಂಜ
ನಿಸಿಭವನದೊ । ಳ್ಬಳೆದುಲಕ್ಷ್ಮಣಭರತಶತ್ರುಘ್ನರೊಡಗೂಡಿ । ತಳೆದು
ಕೌಶಿಕನಮಖಮಂಕಾಯ್ದು ತಾಟಕಿಯನೊರಸಿಮುನಿಸತಿಯಘವನು ॥ ಕ
ಳೆದುಮಿಥಿಲೆಗೆಪೋಗಿಭಾರ್ಗವನಗರ್ವಮಂ । ಸೆಳೆದುಹರಚಾಪಮಂಮುರಿ
ದೊಲಿಸಿಸೀತೆಯುಂ । ತಳೆದುತ್ಸವದೊಳಯೋಧ್ಯಾಪುರಿಗೆದಶರಥನೊಡನೆ
ರಾಘವಂಬಂದನು ॥೨॥ ವರ್ಧಿಪಕುಮಾರಂಗೆಭೂಮೀಶ್ವರಂಬಳಿಕ । ಮೂ
ರ್ಧಾಭಿಷೇಚನಂಮಾಡಲನುಗಯ್ಯೆನೃಪ । ನರ್ಧಾಂಗಿತಡೆಯೆಪೊರಮಟ್ಟು
ಬನಕೈದೆನರಪತಿಪುತ್ರಶೋಕದಿಂದ ॥ ಸ್ವಾರ್ಧಾಮಕಡರೆಕೇಳುತಭರತನಂ
ಕಳುಹಿ । ದುರ್ಧರದರಣ್ಯಪ್ರವೇಶಮಂಮಾಡಿದಂ । ಸ್ಪರ್ಧಿಸುವದನುಜ
ರಂಮುರಿದುಮುನಿಗಳನೋವಿಸತಿಸಹಿತಕಾಕುತ್ಸ್ಥನು ॥೩॥ ದಂಡಕಾ
ರಣ್ಯದೊಳಿರಲ್ಕೆಶೂರ್ಪನಖಿಬಂ । ದಂಡಲೆಯುಲಾಕೆಯುಂಭಂಗಿಸಿಖರಾದ್ಯ
ರಂ । ಖಂಡಿಸಿಕನಕಮೃಗವ್ಯಾಜದಿಂದೈದೆಲಕ್ಷ್ಮಣನಗಲೆಕಪಟದಿಂದ ॥
ಕೊಂಡೊಯ್ಯೆರಾವಣಂಸೀತೆಯುಂಕಾಣದುರೆ । ಬೆಂಡಾಗಿವಿರಹದಿಂಬಿದ್ದಿ
ಹಜಟಾಯುವಂ । ಕಂಡುಪೊಲಬಂಕೇಳ್ದುಸೌಮಿತ್ರಿಸಹಿತನಡೆದಂಮುಂ
ದೆರಘುನಾಥನು ॥೪॥ ಪಥದೊಳ್ಕಬಂಧನಂಕೊಂದುಶಬರಿಯುಮನೋ ।
ರಥಮಂಸಲಿಸಿಕರುಣದಿಂದಾಂಜನೇಯನಂ। ಪ್ರಥಮದೊಳ್ಕಂಡುಸುಗ್ರೀ

ವೆಂಗೆಕೈಗೊಟ್ಟು ವಾಲಿಯಂಬಾಣದಿಂದ ॥ ಮಥಿಸಿರಾವಣನಮೇಲಣರಾಜ ಕಾರಿಯದ। ಕಥನಕಾಲೋಚಿಸಿಕರಡಿಕಪಿಗಳಂನೆರಪಿ । ಪೃಥಿವಿಜೆಯನರ ಸಲ್ಕೆವೀರಹನುಮಂತನಂಕಳುಹಿದಂಕಾಕುತ್ಸ್ಥನು ।೫॥ ಥಿಂಕಿಟ್ಟುಶ ರಥಿಯಂದಾಂಟಿಮೇದಿನಿಯಸುತೆ । ಗಂಕಿತದಮುದ್ರಿಕೆಯನಿತ್ತುಬೀಳ್ಕೊಂ ಡುನಿ । ಶ್ಯಂಕೆಯುಲಶೋಕವನಮಂಕಿತ್ತುದನುಜರಂಸದೆದಕ್ಷನಂಮರ್ದಿ ಸಿ ॥ ಅಂಕದೊಳ್ಬಳಿಕಿಂದ್ರಜಿತುವಿನಬ್ರಹ್ಮಾಸ್ತ್ರ। ದಂಕೆಯೊಳ್ಸಿಂದು ವಾಲಧಿಗಿಕ್ಕಿದುರಿಯಿಂದ । ಲಂಕೆಯಂಸುಟ್ಟುಬಂದೊಸಗೆಪೇಳ್ದನಿಲಜನ ನಸುರಾರಿಮನ್ನಿಸಿದನು ॥೬॥ ಗಣನೆಯಿಲ್ಲದಕಪಿಗಳಂಕೂಡಿಕೊಂಡುತೆಂ। ಕಣಕಡಲತೀರದೊಳ್ಬಿಟ್ಟುಬಂದೊಡೆವಿ। ಭೀಷಣನಂಪರಿಗ್ರಹಿಸಿಲಂಕಾ ಧಿಪತ್ಯಮಂಕೊಟ್ಟುಜಲಧಿಯನೆಕಟ್ಟಿ ॥ ರಣದೊಳಸುರರಕುಲದಹೆಸರು ಳಿಯದಂತೆರಾ । ವಣಕುಂಭಕರ್ಣಮೊದಲಾದರಕ್ಕಸರನುರೆ । ಹಣಿದ ವಾಡಿದನುರುವಣಿಸಿಧೂಳಿಗೋಟೆಯಂಕೊಂಡನಾರಘುವೀರನು ॥೭॥ ಗಾ ವಣನಪದವಮಂವಿಭೀಷಣಂಗೊಲಿದಿತ್ತು। ದೇವರ್ಕಳಂಪೊರೆದುಸೆರೆಯಿರ್ದ ಸೀತೆಯಂ । ಪಾವಕನಮುಖದಿಂಪರಿಗ್ರಹಿಸಿಮೂಜಗಂಮೆಚ್ಚೆ ವಿಜಯೋ ತ್ಸವದೊಳು॥ಭೂವರಂಸೌಮಿತ್ರಿದಶವದನನನುಜನು। ಗ್ರೀವಾದಿಗಳಗಡ ಣದಿಂದಯೋಧ್ಯಾಪುರಿಗೆ । ದೂವಾಳಿಸಿದನಮಲಮಣಿಪುಷ್ಪಕದಮೇಲೆ ಭರತನಂಪಾಲಿಸಲ್ಕೆ ॥೮॥ ವರಪುಷ್ಪಕವನಿಳಿದುಭರತಶತ್ರುಘ್ನರಂ । ಕ ರುಣದಿಂತೆಗೆದಪ್ಪಿಕೌಶಿಕವಸಿಷ್ಠಾದಿ । ಗುರುಗಳಂಸತ್ಕರಿಸಿಕೈಕೆಮೊದಲಾ ಗಿರ್ದಮಾತೃಜನಕ್ಕೈದೆನಮಿಸಿ ॥ ಅರಮನೆಯಸತಿಯರಂಸಚಿವರಂಪ್ರಜೆಗ ಳಂ।ಪರಿಜನಪ್ರಕೃತಿಗಳನಿರದೆಕಾಣಿಸಿಕೊಂಡು । ಬರವನೇಹಾರೈಸಿಕೃಶೆ ಯಾದಕೌಸಲೆಗೆರಾಮನಭಿವಂದಿಸಿದನು ॥೯॥ ಕೈದಳದೊಳೊಯ್ಯನೊ ಯ್ಯನೆಘನಸ್ನೇಹದಿಂ। ಮೈದಡವಿತನಯನಂತಕ್ಕೈಸಿಮುಂಡಾಡಿ । ಕೈ ದುಗಳಘಾಯಮಂಕಂಡುಕರಗುತಮಗನೆನಿಂನಕೋಮಲತನುವನು॥ಪೊ ಯ್ದುವರದಾರಕಟಬೆಂದುದೆನ್ನೊಡಲೆಂದು। ಸುಯ್ದುಮುಗ್ಧಾಭಾವದಿಂತಂ ನಸವತಿಯುಂ । ಬೈದುಮರುಗುವಮಾತೆಯಂನೋಡಿನಗುತಸಂತೈಸಿದಂ ರಾವಣಾರಿ ॥೧೦॥ ಮೇಲೆತಾಳ್ದಂಶುಭಮುಹೂರ್ತದೊಳ್ವಾರಿನಿಧಿ । ಮೇ ಲೆಯಾದವನಿಯುಂಪಟ್ಟಾಭಿಷೇಚನದ । ಕಾಲದೊಳ್ಕಂಡರುಸಮಸ್ತಮು ನಿಗೀರ್ವಾಣನರನಾಗದನುಜರಂದು ॥ ಮೂಲೋಕಮೈದೆಕೊಂಡಾಡೆಬಳಿ ಕುಪ್ಪಿಯುಂ । ಪಾಲಿಸುತಲಿರ್ದನೊಂಭತ್ತುಸಾವಿರವರುಷ।ಮೋಲೈಸಿದು ದುರಾಘವೇಂದ್ರನಂನಿಖಿಳಭೂಭುಜಚಯಂಪ್ರೀತಿಯಿಂದ ॥೧೧॥ ಯೂಪ

ಮಯಮಾಯ್ತುಧರೆಯೆಲ್ಲಮುಂವರಜಾತ। ರೂಪಮಯಮಾಯ್ತುಮನೆಯೆಲ್ಲ
ಮುಂಶುಕಪಿಕಕ । ಲಾಪಮಯಮಾಯ್ತುವನಮೆಲ್ಲಮುಂವರ್ಧಿಪಪ್ರಜೆಗ
ಳುಂಸಂಚರಿಸುವ ॥ ಗೋಪಮಯಮಾಯ್ತುಗಿರಿಯೆಲ್ಲಮುಂರತ್ನ।ಪ್ರದೀಪ
ಮಯಮಾಯ್ತುತಮಮೆಲ್ಲಮುಂರಘುಜಪ್ರ।ತಾಪಮಯಮಾಯ್ತುಮೂಜ
ಗಮೆಲ್ಲಮುಂದಾಶರಥಿರಾಜ್ಯಮಂಪಾಲಿಸೆ ॥೧೨॥ ಪಣ್ಣಾಗಿಯಿಪೂದಳಿರ್ಬೀ
ತತರುಲತೆಯಿಲ್ಲ । ತಣ್ಣೊಗ್ಗಿಳಂಕೆರೆಕಾಲುವೆಗಳಿಲ್ಲದಿಳೆಯಿಲ್ಲ । ಪೆಣ್ಗಂಡುಗ
ಳೊಳೋರ್ವರುಂನಿಜಾಚಾರವಿರಹಿತರಾಗಿನಡೆವರಿಲ್ಲ ॥ ಬಿಣ್ಗಿಚ್ಚಲಿಕ್ಕಿಕೊ
ಡವಾಳ್ಗರೆಯದಾವಿಲ್ಲ।ನುಣ್ಣಾಡಿವೆತ್ತಿರದಪಶುಪಕ್ಷಿಮೃಗಮಿಲ್ಲ। ಕಣ್ಗೊಳಿ
ಪರಾಮರಾಜ್ಯದೊಳಕಾಲದಮರಣಮಿಲ್ಲಖಿಳಜೀವಿಗಳ್ಗೆ ॥೧೩॥ ಕಾಳಿಂ
ದಿಸುರನದಿಗೆಕೃಷ್ಣನಮೃತಾಬ್ಧಿಗಳ। ಕಾಳಿವಾಣಿಗೆಕಳಂಕಿಂದುಮಂಡಲ
ಕೆವರ ।ಕಾಳಿಕಾಪಾಲಿಗೆಮದಂದೇವಗಜಕೆನಂಜಹಿಪತಿಗೆತೊಡವಾಗಿರೆ ॥
ಕಾಳಿಮದಕೂಟಮನಗಿಲ್ಲೆಂಬಮುನಿಸತಿವಿ । ಕಾಳಸಲಮಲಕೀರ್ತಿಕಾಂ
ತೆಪೊರಮಟ್ಟಲೋ। ಕಾಳಿಯಂತಿರುಗುವಳೆನಲ್ಕೆರಾಮನಯಶೋವಿಸ್ತರ
ವನೇಂಪೊಗಳ್ವೆನು ॥೧೪॥ಸರ್ವಸಂಪತ್ಸಮೃದ್ಧಿಗಳಿಂಸ್ವಧರ್ಮದಿಂ।ನಿರ್ವಿಘ್ನ
ಮಾಗಿಸಕಲಪ್ರಕೃತಿಜಾತಿಚಾ । ತುರ್ವರ್ಣಮಂಬಿಡದಪೊರೆವಲ್ಲಿನೀತಿಶಾ
ಸ್ತ್ರಂಗಳಿಗೆಪಳಿವೊರಿಸದೆ ॥ ಉರ್ವಿಯಂನವಸಹಸ್ರಾಬ್ದಮಂಪಾಲಿಸಿದ ।
ನುರ್ವಸಂತಾನಮಂಕಾಣದಿಕ್ಷ್ವಾಕುಕುಲ । ನಿರ್ವಾಹಮಂನೆನೆದುರಘುವ
ರಂನುಡಿದನೇಕಾಂತದೊಳ್ಜಾನಕಿಯೊಳು ॥೧೫॥ ಕಾಂತೆಕೇಳಿಕ್ಷ್ವಾಕು
ವಂಶಮೆನ್ನಲ್ಲಿಬಂದಾಂತುದಿಲ್ಲಿಂದಸಂತತಿನಡೆಯದಿರ್ದೊಡೆಕು । ಲಾಂತಕಂ
ತಾನಾದಪೆಂಸಾಕದಂತಿರಲಿಮನುಜರ್ಗೆಸಂಸಾರದ ॥ಭ್ರಾಂತಿಯಂಬಿಡಿಸು
ವಡಪತ್ಯದೇಳ್ಗೆಗಳವಿ।ಶ್ರಾಂತಿಯಲ್ಲದೆಪೆರತದೇನುಂಟುಮುಂದಪು। ತ್ರಾಂ
ತರವನೈದದಿರ್ದಪೆನೆಂತೊಪೇಳೆಂದುದಾಶರಥಿಬಿಸುಸುಯ್ದನು ॥೧೬॥ ಸಂ
ತಾನಮಂದಾರದೊಳ್ಪಡೆದತುಳವಿಭವ।ಮಂತಳೆದುನಂದನೋತ್ಸವದಮೃ
ತಪಾನದ।ತ್ಯಂತಸೌಖ್ಯಮನೈದಿದೇವೇಂದ್ರನಂತೆಸುಮ್ಮಾನಮಾಗಿರದಚಿರ
ದೆ॥ ಸಂತತಂಜಾತರೂಪವನೆಕಾಣದೆತಾಪ । ದಿಂತೊಳಲಿಬಳಲುವದರಿದ್ರ
ನಂದದೊಳೈದೆ! ಚಿಂತಿಸುವಸಂಸಾರಮೇಕೆಮಾನವಜನ್ಮಕೆಂದುರಘುಪತಿ
ನುಡಿದನು ॥೧೭॥ ನೀರಿರ್ದಕಾಸಾರಕರವಿಂದಮಿಲ್ಲದೊಡೆ। ತಾರಕಿಗಳಿರ್ದ
ಗಗನಕೆಚಂದ್ರನಿಲ್ಲದೊಡೆ। ಚಾರುಯೌವನಮಿರ್ದಪೆಣ್ಗೆನೆಯನಿಲ್ಲದೊಡೆ
ಸನ್ನುತಪ್ರಜೆಗಳಿರ್ದ ॥ಧಾರುಣಿಗೆಧರ್ಮದರಸಿಲ್ಲದೊಡೆಸಿರಿಯಿರ್ದ।ದಾ
ರವಂತಕೆಕುವರನಿಲ್ಲದೊಡೆಮರೆವುದೇ। ನಾರಿಪೇಳೆನೆಲಜ್ಜೆಯಿಂದತಲೆವಾಗಿ

ನಿಜಪತಿಗೆಜಾನಕಿನುಡಿದಳು ॥೧೮॥ ಕಾಂತನೀಂ ಪೇಳ್ದುದೇಂ ಪ್ರತ್ಯವತಿಯ ಹುದುಜ। ನ್ಮಾಂತರದಪುಣ್ಯವ್ಯೆಸಲೆಪೆಣ್ಗೆಮುನ್ನತಾಂ। ನೋಂತಡಲ್ಲದೆ ಬಂದಪುವೆಬರಿದೆಬಯಸಿದೊಡೆಸುಕುಮಾರನಂಪಡೆವುದು ॥ ಅಂತೊಳಗೆ ಪುದುಗಿರ್ದಪರಿಮಳದೊಳೊಪ್ಪುವಲ। ತಾಂತಕುಟ್ಮಲದಂತೆವರಗರ್ಭ ಲಾಂಛನದ। ಕಾಂತಿಯಂತಳೆವುದಂಗನೆಯರೆಲ್ಲರ್ಗೆದೊರೆವುದೆಮೇದಿನಿಯೊಳೆಂದಳು ॥೧೯॥ ಕಂದನಾಡುವಬಾಲಲೀಲೆಯಂನೋಡಿತೊದ। ಳೊಂದಿದಿನಿವಾತನುರೆಕೇಳ್ದುಮುದ್ದಿನಮುದ್ದೆ। ಯಂದದಂಗವನೆತ್ತಿಕೊಂಡುನಳಿತೋಳ್ಗಳಿಂದಪ್ಪಿಕೆಂಗುರುಳ್ಗಳೆಸೆವ॥ ಮುಂದಲೆಯಕಂಪನಾಘ್ರಾಣಿಸಿತೊರೆದಜೊಲ್ಲ। ಕೆಂದುಟಿಯಬಾಯ್ದೆರೆಯನೈದೆಚುಂಬಿಸಿಸೊಗಸು। ಗುಂದದಾಯೆಂದುಪಂಚೇಂದ್ರಿಯಪ್ರೀತಿಯಂಪಡೆವರಿನ್ನಾವಕೃತರೊ ॥೨೦॥ ತೇಲ್ವೋಸರಸಿಮೇಲುದಂಸೆಳೆವಕಮಲಮಂ। ಪೋಲ್ದಕಣ್ಗೊನೆಯಿಂದತಾಯಮೊಗಮಂನೋಳ್ಪ। ಕಾಲ್ದಿಗಳಂಬಿಡಿರಿತಡವರಿಸಿಕ್ಕೈವಿಡಿವಬಾಲಂಗೆಮೋಹದಿಂದ॥ ಜೋಲ್ದಲವಹಾರಮಂಸರಿದುಮೇಲುದಸಾರ್ಚಿ। ಪಾಲ್ದೆರೆದಮೊಲೆಯಊಡಿಕೊಡೆತೊಟ್ಟಲೊಳಿಟ್ಟು। ಸಾಲ್ದಸೈಪಿಂದಜೋಗುಳವಾಡಿತೊಗುವಳದೇಂಸುಕೃತಿಯೋಧರೆಯೊಳು ॥೨೧॥ ಇಂತುಸುತರಿಲ್ಲದಾಸರೊಳವರ್ಗಳೀರ್ವರುಂ। ಚಿಂತಿಸುವಸಮಯಕೆವಸಿಷ್ಠಮುನಿಪತಿಬಂದು। ಸಂತಾನದಭ್ಯುದಯಮಾದಪುದುಮುಂದೆನಿಮಗೆಂದುಸುರಪ್ರೀತಿಯಿಂದ॥ ಸಂತೈಸೆಬಳಿಕರಘುಕುಲಸಾರ್ವಭೌಮನ। ತ್ಯಂತಹರುಷಿತನಾಗಿರಲ್ಕೆತಲೆದೋರಿತುವ। ಸಂತಕಾಲಂವಿರಾಜಿತರಸಾಲಂವಿರಹಿಹೃದಯಶೂಲಂತಾನೆನೆ ॥೨೨॥ ಅರಸಂಚೆಸರಸಿಯಂಕಲಪಿಕಂತಳಿತಮಾ। ಮರನಂಚಕೋರತತಿಚಂದ್ರಿಕೆಯನಳಿಕುಲಂ। ಬಿರಿಮುಗುಳನರಗಿಳಿಬನಂಗಳಂವಿರಹಿಗಳ್ಕೂಪರಂಸಾರ್ದಸೆಯುಲು ॥ ಧರೆಯೊಳೆಳೆಗಾಳಿಯಂಶೀತಳದವಾರಿಯಂ। ತರುಗಳನೆರಳ್ಗಳಂಸೇರತೊಡಗಿತುಜನಂ। ಪರಿವೃತವಸಂತಕಾಲದೊಳಿಂತಿರಲ್ಬಳಿಕಸೀತೆಖರುಮತಿಯಾದಳು ॥೨೩॥ ಮಲ್ಲಿಕಾಸ್ಮಿತರುಚಿರೆಕುಂದಕುಟ್ಮಲರದನೆ। ಪಲ್ಲವಾಧರೆಭೃಂಗಕುಂತಳೆಕುಸುಮಗಂಧಿ। ಸಲ್ಲಲಿತಕೋಕಿಲಾಲಾಪೆಚಂಪಕವರ್ಣೆಮೃದುಮಧುರಕೀರವಾಣೀ ॥ ಫುಲ್ಲಲೋಚನೆಚಾರುಚಂದ್ರಬಿಂಬಾನನೆಯು। ಸಲ್ಲಲಿತಗಾತ್ರೆಜಾನಕಿವಿರಾಜಿಸಿದಳ್ಸು। ಮುಲ್ಲಾಸದಿಂಪುಷ್ಪವತಿಯಾಗಿವಿದಳಿತವಸಂತಲಕ್ಷ್ಮಿಯತೆರದೊಳು ॥೨೪॥ ಮೊಡವಿಮೂಡಿದಮೊಗಂಸೊಗಡುಗಂಪೊಗೆದಮೈ। ತೊಡವುಗಳತೊಡರಿಲ್ಲದವಯವಂಪೂಗಳಂ। ಮುಡಿಯದಬಳಲ್ದುರುಬುನಿಚ್ಚಳದಕೆಂಗಳ್ತೊಳಪಪಣೆ

Funding: Tattva Heritage Foundation,Kolkata. Digitization: eGangotri.



ಯುಮಿರುಸಕದಪು ॥ ಕಡುಬಿಣ್ಪಿಡಿದಕುಚಂಮಾಧವೀಲತೆಯುಸೆಳೆ । ವಿಡಿ
ಗಕ್ಕೈನಿರಿಗುಳಿದನಸುನಾಸಿದಂಬರಂ । ಕುಡಿವರಿವಲಜ್ಜೆ ಸಿಂಗರಕೆಮಿಗಿಲಾ
ಯ್ತು ನೆನಿಸುತೆಗೆಮುತುಮತಿಯಾಗಲು ॥೨೫॥ ಸಮುಚಿತಸ್ತ್ರೀಧರ್ಮದಿಂದ
ನಾಲ್ಕನೆಯದಿನ । ದಮಲಮಜ್ಜನದಲಂಕಾರದೊಳೆಸೆದಳಂದು । ನಿಮಿಷ
ದೊಳ್ತ್ರಿಜಗಮಂಗೆಲ್ವೆನೆಂದಂಗಜಂಮಸದಾಯುಧೋತ್ತಮವನೆ ॥ ಕ್ರ
ಮದಿಂದನುಸ್ಮಘಂಕಲುಷಮಂಶೋಧಿಸಿದ । ರಮಣೀಯ್ಯಸೌಂದರ್ಯಸಾರ
ಮೋಸ್ಮರನಸಿರು । ಸಮುಯಶಿಶ್ರೀಯುಸಾಕಾರಮೋಪೇಳೆನಲ್ಸೀತೆರಾಘವ
ನಕಣ್ಗೆ ॥೨೬॥ ಸ್ಫುರದುತ್ಕಟಾಕ್ಷಚಂಚಲದಿಂದಚಾರುಪೀ।ವರಪಯೋಧರ
ದಿಂದಪರಿವೃತಸುಮೇಖಲಾ।ತರಳಕಿಂಕಿಣಿಘೋಷನರವದಿಂದಲಾರಾಜಿಸುವ
ಕಂಕಣಂಗಳಿಂದ ॥ ಸರಸತರಲಾವಣ್ಯಪೂರಪ್ರವಾಹದಿಂ।ಭರಿತಕಬರೀಬ
ರ್ಹಲೀಲೆಯಿಂಮಳೆಗಾಲ।ದಿರವನೆಚ್ಚರಿಪರಸಿಯುಂಕಂಡುರಾಮನಮನಶ್ಲಾಘಿ
ತಕಂನಲಿದುದು ॥೨೭॥ ಮಂದಗಮನೆಯಮಂದಹಾಸದವಿಲಾಸಮಂ।ಕುಂ
ರದನೆಯುಕುಂದದಪಯುವದಸೌಂದರ್ಯ। ದಂದಮಂವಕ್ರಕುಂತಳೆಯುವಕ್ರಾ
ವಲೋಕನದಭಾವದಬಗೆಯನು ॥ ಚಂದನಸುಗಂಧಿನಿಯಚಂದ್ರಾಸ್ಯದಸ
ಕಮಂ।ಬಂಧುಗೆಯುದುಟಿಯಬಂಧುರದಸಿಂಗರವನೇ।ನೆಂದುಬಂಣಿಸಬಹು
ದುರಾಮಣೀಯ್ಯಕವಾದಗಾಮನಮಡದಿಯೊಲವನು ॥೨೮॥ ನೊಸಲೊ
ಳಾರಾಜಿಸುವತಿಲಕದಿಂದಲಕದಿಂ।ಮಿಸುಪಮೈನಸುದೋರ್ವವಸನದಿಂದಶ
ನದಿಂ।ಪಸರಿಪಳೆನಗೆಯುತೆಳ್ಗದಪಿನಿಂಪದಪಿನಿಂದಮರ್ದಪೊಂದೊಡಿಗೆಯಿಂ
ದ॥ ಅಸಿನೆರಳೊಳೊಪ್ಪುವನ್ರುಗುಗ್ಗಳಿಂತಿಗುರ್ಗಳಿಂ।ಪೊಸತೆನಿಪಕುಂಕುಮ
ದಗಂಪಿನಿಂದಿಂಪಿನಿಂ।ತ್ರಿಸರದೊಳ್ಮೆರೆವಗುರುಕುಚದಿಂದಕಚದಿಂದಕಾಂತೆ
ಗಣ್ಗೆಸೆದಿರ್ದಳು॥ಪಜ್ಜಳಿಪರತ್ನಪ್ರದೀಪಂಗಳಿಂದಪೊಸ।ಬಜ್ಜರದಮಣಿಮಂ
ಚದಿಂದಂಚೆದುಪ್ಪಳಿಂ।ಸಜ್ಜುಕದರಳ್ಗಳಿಂದೆಸೆವಮೇಲ್ವಾಸಿನಿಂರಾಜೋಪ
ಭೋಗ್ಯವಾದ॥ಸಜ್ಜೆವನೆಯೊಳ್ವಿರಾಜಿಪಕಾಂತನೆಡೆಗೆನಸು।ಲಜ್ಜೆಮಂದ
ಸ್ಮಿತಂಕಿರುಬೆಮರ್ಕರ್ಣತರಂ।ಪಜ್ಜೆದೋರಲ್ಮೊಗದೊಳ್ಕೈತಂದುಸಾರ್ದಳೊ
ಯ್ಯನೆಮತ್ತಗಜಗಾಮಿನಿ ॥೨೯॥ ಬೆಂಗೊಡದೆಮೋಸಪೋಗದೆತವಕಮು
ಡುಗಿಹರೆ । ಹಿಂಗದೆವಿಘಾತಿಗೆಳುಕದೆಕೈಮರೆಯದೆಚದು।ರಿಂಗದೆನೆಗಳಪು
ಳಕಂಬಿಡದೆತಳ್ಳಕ್ಕರಡಗದಲಸಿಕೆದೋರದೆ । ಅಂಗಪಶ್ರಮವನೀಂಟಸದೆ
ಸರೆರಂಜಿಸುವ । ಸಂಗರಸದಾಳಾಪದಿಂದೆಸೆದರೊಂದಿಸು । ಭಂಗವಿಲ್ಲದೆ
ವೀರಭಟರೊದಗುವಂತೆಸಮರತಿಯೊಳಾದಂಪತಿಗಳು ॥೩೦॥ ನಾಗರದನ
ಡುಪಪಣಿತಲ್ಪದೋಳ್ಸಿರಿಯೊಡನೆ । ಭೋಗಿಸುವತೆರದಿಂದಮಿಥಿಳೇಂದ್ರ

ಸುತೆಯುಸಂ ।ಭೋಗದಿಂರಘುಕುಲಲಲಾಮನೆಸೆದಂಮನುಜಲೀಲೆಗಿದುಸಾ
ರ್ಥಮೆನಲು ॥ ರಾಗರಸದಿಂದಪುಳಕಂಪೊಣ್ಮೆ ನಲಿದುಮುದ ।ನಾಗಮುಪ್ರಾ
ಪ್ತಿಯಿಂ ಸಕಲರತಿಕಲೆಗಳಿಂ । ಪಾಗಲ್ಪರಸ್ಪರವಿಚಾರಮಂಮರದೈಕ್ಯಭಾ
ವದಿಂಸೊಗಸುಗೊಳಿಸಿ ॥೩೦॥ಇಂತೆಸೆವಸುರತಿಯುಸೊಬಗಿನಿಂದವರೀರ್ವ
ರುಂತೊಳಲುತಿರಬಳಿಕವರವಿಷ್ಣುನಕ್ಷತ್ರ । ದಂತದೋಳ್ವೈದೇಹಿಗಾ
ಯ್ತುಗರ್ಭಾದಾನಮುದರಫಲಮಂನೋಳ್ಪಲು ॥ ಎಂತಾದೊಡಂತನ್ನಕಾಂ
ತನನಗಲ್ದುಸೀ । ಮಂತಿನಿಪರಸ್ಥಳದೊಳಣುಗರಂಪಡೆದಪಳ । ದಂತಿಳಿ
ಯುನುತ್ಸವದೊಳಿರ್ದಳಾಕಾಂತೆಬಸುರಾದಲಾಂಛನವನಾಂತು ॥೩೧॥ ಸಣ್ಣ
ನಡುಬೆಳೆಯುತ್ತಿವಳಿಗಳಡಗೆತೆಳುವಾಸೆ।ನುಣ್ಣನೆಪೊಗರ್ವೆಗೆಯೆಚೂಚು
ಕದಕಪ್ಪೂಣ್ಮೆ । ತಿಣ್ಣವೊಲೆಬಿಣ್ಪಡರೆಕಾಲ್ಕಂಡಗತಿಗಲಸೆನಗೆಮೊಗಂ
ಬಿಣ್ಪದೋರೆ ॥ ಕಣ್ಣವೆಯುಪ್ಪುರ್ಬಿನನವಿರ್ಮಿಂಚುದಳೆಯುತನು । ತಣ್ಣಸ
ದೊಳೆಸೆಯೆಪೊಸಗಾಡಿವೆತ್ತಿರ್ದಳೀ । ವಣ್ಣಿಸುವನುಲ್ಲಸತ್ಕಾಂಚನಲತಾಂಗಿ
ಸುತಲಾಂಛನದಗರ್ಭದಿಂದ ।೩೨।। ಬೆಳ್ದಾವರೆಯೊಳೆರಗಿದಳಿಕುಲಂಗಗ
ನಾಗ್ರ । ದೋಳ್ದಿನದಿನಕೆಬೆಳೆವಚಂದ್ರಕಲೆಕನಕಾದ್ರಿ । ಯೋಳ್ದಿಟ್ಟಗೊ
ಳಿಸುವಸಿತಾಂಬುಜಂರಾರಾಜಿಸುವತೆರದೊಳಾಕಾಂತೆಯು ॥ ಬಳ್ದಳೆದಚ
ಲ್ವಿನಾನನದೊಳುರೆಮಿರುಗುವಕು । ರುಳ್ದುಂಗಲಸಿನಡುವಿನೋಳ್ಪೊಳೆ
ವಗರ್ಭಂನೆ । ಗಳ್ದುಕುಚದೋಳ್ಮಿಸುಪಚೂಚುಕದಕಪ್ಪುಚೆಲ್ವಿಂದಕಣ್ಗೆ
ಸೆದಿರ್ದುದು ॥೩೩॥ ಚಂದ್ರಮುಖಿಯಾದವೈದೇಹಿಯುಜಠರಮೆಂಬ । ಚಂ
ದ್ರಕಾಂತದಮಣಿಯಮಧ್ಯದೋಳ್ತವರಾಮ ।ಚಂದ್ರನೆಂಬಖಿಳಲೋಕಾ
ನಂದಕರಮಾಗಸಂಪೂರ್ಣಕಲೆಗಳುಳ್ಳ ॥ ಚಂದ್ರನವಿರಾಜಿಸುವಪ್ರತಿಬಿಂಬ
ಮಾಗಿರ್ದ ।.ಚಂದ್ರನೆನೆಶಿಶುಗರ್ಭದೋಳ್ಪೊಳೆಯೆಕೂಡಿರ್ದ । ಚಂದ್ರಿಕೆ
ಯೊಳಂಗರುಚಿಬೆಳ್ಪಡರಲೊಳ್ಪಿನಿಂದೊಪ್ಪಿರ್ದಳುತ್ಪಲಾಕ್ಷಿ ।।೩೪॥ ಕಾಂಚ
ನಲತಾಕೋಮಲಾಂಗಿಗರ್ಭಿಣಿಯಾದ । ಲಾಂಛನವನಿನಕುಲಾಧೀಶ್ವರಂ
ಕಂಡುರೋ । ಮಾಂಚನದಹರುಷದಿಂನಾಲ್ಕನೆಯತಿಂಗಳೋಳ್ವಿಭವದಿಂ
ಭೂಸುರರ್ಗೆ ॥ ವಾಂಛಿತವನಿತ್ತುಪುಂಸವನೆಸೀಮಂತಮಂ ।ತಾಂಚಾರು
ಲೋಚನೆಗೆವಿಸ್ತರಿಸಿದಂಚಿತ್ತ । ಚಾಂಚಲ್ಯಮಿಲ್ಲದೆವಸಿಷ್ಠವಿಶ್ವಾಮಿತ್ರರು
ಕ್ತದಿಂಮಾಡಿಸಲ್ಕೆ ॥೩೫॥ ಯೋಜನತ್ರಯದಗಲದುತ್ಸವದಶಾಲೆಯುಂ ।
ರಾಜಿಸಲ್ಕೈಗೈಸಿಬಳಿಕಲ್ಲಿನೆರದನಾ । ನಾಜನಕೆದಿವಿಜರ್ಗೆಸುಗ್ರೀವಮೊದ
ಲಾದಕಪಿಗಳ್ಗೆಭೂಸುರರ್ಗೆ ॥ ರಾಜವರ್ಗಕೆವಿಭೀಷಣಮುಖ್ಯದೈತ್ಯರ್ಗೆ ।
ಭೋಜನಸುಗಂಧತಾಂಬೂಲಪ್ರಸ್ಸ್ರಾಕ್ಷತೆಯು । ಪೂಜೆವಸ್ತ್ರಾಭರಣದು

ಡುಗೊರೆಗಳಂಕೊಟ್ಟು ರಾಘವಂಮನ್ನಿಸಿದನು ||೩೯|| ಉತ್ಸವಕೆಬಂದನಿ
ಬರೆಲ್ಲರಂಶರಣಜನ | ವತ್ಸಲಂಸತ್ಕರಿಸಿಬೀಳ್ಕೊಟ್ಟು ರಾಜಸಂ | ಉತ್ಸಕ
ದೊಳಿಪ್ಪನಿತರೊಳ್ಬಳಿಕಸೀತೆನಿಜಕಾಂತನೇಕಾಂತಕ್ಕೈದಿ || ಕುತ್ಸಿತಂಪೊ
ದ್ದದಾಶ್ರಮಕೆಋಷಿಪತ್ನಿಯರ | ಸತ್ಸಂಗದೊಳ್ತಂನಬೇಸರಂತವಿಸುವೆ
ನಿ | ದುತ್ಸುಕಂತನಗದಿರಲಿನ್ನೊಮ್ಮೆವನಕೆತನ್ನಂಕಳುಹಬೇಕೆಂದಳು ||
ಆಕ್ಷಿತಿಜೆಬಯಕೆಯುಂಬಿನ್ನೈಸೆಕೇಳ್ದುನಗು | ತಾಕ್ಷೇಪದಿಂದಕಳುಹುವ
ನಾಗಿಸಂತೈಸಿ | ರಾಕ್ಷಸಾಂತಕನಿರಲ್ಕೊಂದಿರುಳ್ಕನಸುಕಂಡೇಳುತಪೆಗಪ್ಪ
ನೊಡನೆ || ಈಕ್ಷೋಣಿಸುತೆಗಂಗೆಯುಂಕಳಿದುಕಾಡೊಳ್ಮ | ಹಾಕ್ರೋಣೆ
ಯಾಗಿದೇಸಿರಂತೆದೆಸೆದೆಸೆಯ | ನೀಕ್ಷಿಸುತಮರುಗುತಳುತಿರ್ದುದಂಕಾಣ್ಬೆನಿ
ದುಬೇಸಹುದೆಪೇಳೆಂದನು ||೪೦|| ಎನೆಕನಸಿದೊಳ್ಳಿತಲ್ಲಿಂದದಕೆಶಾಂತಿಯಂ|
ಮುನಿವರವಸಿಷ್ಠಂನೆಗಳ್ಚಿದಂಬಳಿಕಮನ | ದನುತಾಪದಿಂಪ್ರಜೆಯಸಾ
ರ್ಕೈವುದನಮರದೆರೆಡುಮೂರುದಿವಸವಿರ್ದು || ಜನಮುಲಸಿದಪುದೆಂದುರಾ
ತ್ರಿಯೊಳೊಪ್ಪರಮುಟ್ಟು | ದಿನಪಕುಲತಿಲಕನೇಕಾಂತದೊಳ್ನಗರ
ಶೋ | ಧನೆಯಚರರೊಳಗೊರ್ವನಂಕರೆಸಿಕೇಳ್ದನಿಂತೆಂದುಪಿನಯೋಕ್ತಿ
ಯಿಂದ ||೪೧|| ನಿಂದಿಸರಲೇಪ್ರಜೆಗಳಿನ್ನೆಗಂತನ್ನಗುಣ | ಕೊಂದಿಸರಲೇ
ಪಳಿವನಮಲತರಕೀರ್ತಿಯಂ | ಕಂದಿಸರಲೇದೂಸರಿಂದಭುಜವಿಜಯಪ್ರ
ತಾಪತೇಜವನಿಳೆಯೊಳು || ನಂದಿಸರಲೇಜರಿದುನಿಜವಂಶದೇಳ್ಗೆಯಂ |
ಕುಂದಿಸರಲೇಖಿೞಡಿಗಳೆದುವಹುಮಾನದೋ | ಳ್ಸಂಧಿಸರಲೇಕೊಂಕುಕೊ
ರತೆಗಳನೆಂದವನನಸುರಾರಿಬೆಸಗೊಂಡನು ||೪೨|| ದೇವನಿನ್ನಂಪೆಸರಿಸಿ
ದೊಡೀಶನಾದಪಂ | ಸೇವಿಸಿದವಂಚತುರ್ಮುಖನಾಗಲುಳ್ಳವಂ | ಕಾವುದೆಂ
ದೈದೆಮೊರೆಯೊಕ್ಕವಂಜಗದೊಳಾಚಂದ್ರಾರ್ಕವಾಗಿಬಾಳ್ವ ||ಶ್ರೀವಿಭವದಂ
ಶಕ್ರಪದವಿಯುಂಪಡದಪಂ | ಭೂವಲಯದೊಳ್ನಿಂದಿಸುವರುಂಟೆತರಣಿ
ಯಂ | ಕಾವಳಂಮುಸುಕಿರ್ದ್ದಡೇನಾದುದೆಂದವಂಬಿನ್ನೈಸಿಕೈಮುಗಿದ
ನು ||೪೩|| ಏನಾದೊಡಂಕಟಕಿಯಾಗಿರ್ಪುದೀಮಾತು | ಭಾನುವಂಕಾವ
ಳಂಮುಸುಕಲೇನೆನಬೆನ್ನ | ದೀನವಾದರಸುತನಕಾವುದೂಣೆಯುಮೆಂಬ
ಬರಂದುರಘುಪತಿಕೇಳಲು || ನೀನೆಪಾವನರೂಪನೆಂಬುದಂಮುನಿಯುವ
ಧು | ತಾನೆತೋರಿಸಲೆಲೋಕದಜನಕೆಜಗದೊಳ | ಜ್ಞಾನಿಗಳುನುಡಿದ
ನಿಂದೆಯನುಸುರಲಮ್ಮನೆಂದವನೆರತದಂಪದದೊಳು ||೪೪|| ಏಳಂಜಬೇಡಿ
ನ್ನುಮಾಜದಿರ್ತನ್ನಾಣೆ | ಹೇಳೆಂದುರಘುಕುಲಲಲಾಮನೊತ್ತಾಯದಿಂ |
ಕೇಳಲವನೆಂದನವಧರಿಸೋರ್ವಮಡಿವಾಳಿಮಹಿನಮಂತೊಳೆವನಾಗಿ|| ಕಾ

ಳುಗೆಡದಂಜೇಯುಸದ್ಗುಣಚರಿತ್ರನಾ । ಮಾಳಿಯಿಂಜಗಮಂಪುನೀತವಂ
ಮಾಳ್ಪನೀಂ । ನೇಳಿಗೆಯುನವನೆತ್ತಬಲ್ಲನೆನಲೇನೆಂದನೆನಲಾತನಿಂತೆಂದ
ನು ॥೪೫॥ ಪೆಂಡತಿತವರ್ಮನೆಗೆಮುಳಿದುಪೋಳದೆಪ್ರೋದ । ಚಂಡಿತಕವಳ
ತಾಯ್ತಂದೆಗಳ್ಕಳುಹಬಂ । ದಂಡಲೆದೊಡಿನ್ನೊಲ್ಲೆನಗಲಿರ್ದಮಡದಿಯುಂ
ಮತ್ತೆರಘುನಾಥನಂತೆ ॥ ಕೊಂಡಾಳುವವನಲ್ಲತಾನೆಂದುರಜಕನು । ದ್ದಂ
ಡದೋಳ್ನುಡಿಯೆಕಿವಿಮುಚ್ಚಿಕೊಂಡೆಂದೇವ । ಖಂಡಿತದಮಂತ್ರಪೂರಿತ
ಹವಿಯುನರಿದೆಂಜಲಿಪುದೆವಾಯುಸಮಂದನು ॥ ... ... ॥೪೬॥
ಎಂದುಬಿನ್ನೈಸಕೇಳ್ದಾತನಂಕಳುಹಿರಘು । ನಂದನಂಬಂಧನಕ್ಕೊಳಗಾ
ದಮತ್ತಗಜ।ದಂದದಿಂನಿಜಶಿರವನೊಲೆದುಮೂಗಿನಮೇಲೆಬೆರಳಿಟ್ಟುಮಾ
ನದಿಂದ ॥ ನಿಂದುಸ್ವೈರಗಾಗಿನೆನೆನೆದುಚಿತ್ತದೋ । ಳ್ನೊಂದುಬಿಸುಸು
ಯ್ದುಕಡುಪಳಿದುಕಾತರಿಸಿ । ಕಳೆಗುಂದಿದುಂಮಾನದಿಂಪೊಕ್ಕನಂತಃಪುರ
ಕೆವೃತ್ತವೊಗುವಹಂಸನಂತೆ ॥೪೭॥ಓಲಗಂಗೊಡದೆಬಾಗಿಲ್ಗೆಬಂದಖಿಳಭೂ।
ಪಾಲರಂಕರೆಸಿಕಾಣಿಸಿಕೊಳ್ಳದೊಳಗೆಬಂ ।ತಾಲತಾಂಗಿಯುಕೇಳಿಗೆಡೆಗೊ
ಟ್ಟುರಾಜೇಂದ್ರನಿರೆಕೇಳ್ದುಭೀತಿಯಿಂದ ॥ ಆಲಕ್ಷ್ಮಣಾದಿಗಳ್ಪೊಕ್ಕರಂತಃ
ಪುರವ । ನಾಲಿಂಗಿಸಿದಜಾಡ್ಯದಿಂದಜಡಿದವಯುವದ ।ನೀಲಾಂಗನಂಕಂಡು
ಕಾಲ್ಗೆರಗಿನುಡಿಸಲೆಮ್ಮದಸುಮ್ಮನಿರುತಿರ್ದರು ॥೪೮॥ ಎದ್ದುಕುಳ್ಳಿರ್ದು
ಕರುಣಾಳುಗಳಬಲ್ಲಹಂ । ಮುದ್ದುಗೈದನುಜರಂಕರೆದಿಳೆಯೊಳಿಂದೆನಗೆ ।
ಪೊದ್ದಿದಪವಾದಮಂನೀವರಿದುದಿಲ್ಲಕಟಸಾಕಿನ್ನುನೆರಪಿಗಳೊಳು ॥ ಕದ್ದ
ಕಳ್ಳನವೋಲ್ನುಡಿಸಿಕೊಳ್ಳಲಾರೆನೊಡ ।ಲಿದ್ದಲ್ಲಿನಿಂದೆಗೊಳಗಾಗಿಬದುಕು
ವನಲ್ಲತಿದ್ದಿತೀರದವಿಲಗಕಂಜುವೆನುಸೀತೆಯುಂಬಿಟ್ಟಲ್ಲದಿರೆನೆಂದನು ॥೪೯॥
ಇವಳಯೋನಿಜೆರೂಪುಗುಣಶೀಲೆಸಂಪನ್ನೆ । ಭುವನಪಾವನೆಪುಣ್ಯಚರಿತೆ
ಮಂಗಳಮಹೋ । ತ್ಸವೆಪತಿವ್ರತೆಯೆಂಬುದಂಬಲ್ಲೆನಾದೊಡಂನಿಂದೆಗೊ
ಳಗಾದಬಳಿಕ ॥ ಅವನಿಸುತೆಯಂತನಗೆಬಿಡುವುದೇನಿಶ್ಚಯಂ ।ರವಿಕುಲದ
ರಾಯರಪಕೀರ್ತಿಯಂತಾಳ್ದಪರೆ । ಕುವರನಾಗಿರ್ದತನ್ನಂತಾತನುಳಿದು
ದಿಲ್ಲವೆಸತ್ಯಭಾಷೆಗಾಗಿ ॥೫೦॥ ಕಲಿಯುಗದವಿಪ್ರರಾಚಾರಮಂಬಿಡುವಂತೆ।
ಪಲವುಮಾತೇನಿನ್ನುಸೀತೆಯುಂಬಿಟ್ಟೆನೆನೆ । ಬಲುಗರಮಿದೆತ್ತಣದೊಕಾರು
ಣ್ಯನಿಧಿಗೆನುತನಡನಡುಗಿಭೀತಿಯಿಂದ ॥ನೆಲೆಗೊಂಡವೇದಮಂಧರೆಯುಪಾ
ಷಂಡಿಗ । ಳ್ಪಲೆನಿಂದಿಸಿದೊಡದಂಮಾಣ್ಬಪರೆದ್ವಿಜರಕಟ । ಕುಲವರ್ಧನಿ
ಯುನೆಂತುಬಿಡುವೆನೀಂಪೇಳೆಂದರನುಜಾತರಗ್ರಜಂಗೆ ॥೫೧॥ ಭಯುಶೋಕ
ದಿಂದಗದ್ಗದಿಸೆಕಂಠದೊಳಶ್ರು ।ನಯನದೋಳ್ತುಳುಕೆಭರತಂಕರೆವಕಪಿಲೆ

ಯುಂ ।ನದವಿದಱ್ಪೊಡೆದಡವಿಗಟ್ಟುವರೆಘಾಪಕನೊಳರಸಿಯಂಪೊಗಿಸಿದಂ
ದು ॥ ಪ್ರಿಯೆನಿನಗೆಪರಿಶುದ್ಧಕುಲಕೆಮಂಗಳೆಸುತೆಯೇ ।ದಯಕೆನಿರ್ಮಲತನ
ಗೆಗತಿಗೊಡುವಸೊಸೆಯೆಂದು ।ಬಯಸಿದೊಡೆಬಂದಯ್ಯನಾಡನೆಗುಱಸು
ರರಮುಂದೆಕಪಿಕಟಕಮಿರಿಯೆ ॥೫೨॥ ಅದನೆಲ್ಲಮಂಮರೆದುಹುಲುಮನು
ಜರಜಕನಾ । ಡಿದದೂಸರಂನೆನೆದುಕುಲಪತ್ನಿಯಂಬಿಡುವ ।ಹದನಾವುದ
ಕಟಗುರುಲಘುವಿನಂತರವನೆಣಿಸದಬರಿದೆಮೂಢರಂತೆ ॥ ಎದೆಗೆಟ್ಟುದೇವಿ
ಯಂದೆಶೋಷಿಯುಂಬರೆಜೀಯ್ಯ । ಪದುಳವಿಹುದೆಂದುವಿನಯದೊಳಗ್ರಜಾತ
ನಂ । ಕದುಬಿನುಡಿದಂಭರತನಾತನಂನೋಡುತೊಯ್ಯನೆಘೋಷಿನಿಂತೆಂ
ದನು ॥೫೩॥ ತಮ್ಮನೀನಾಡಿದಂತವನಿಸುತೆನಿರಜೆಯಹು ।ದುಮ್ಮಳಿಸಬೇ
ಡಸ್ಯೆರಿಸಲಾರೆನೀದೂಸ । ರಂಮಹಿಯೊಳುಳಿದರೇಪ್ಪೃಥುಪುರೂರವಹರಿ
ಶ್ಚಂದ್ರಾದಿನರಪತಿಗಳು ॥ ಸುಂಮನೆಸುಕೀರ್ತಿಗೊಳಗಾಗಲೇತಕೆಮಾತೆ।
ಯಂಮಹಾಯೋಗಿಬಿಡುವಂತಿವಳನುಳಿವೆನೆನೆ ।ಹಂಮ್ಯೆಸಿಲಕ್ಷ್ಮಣಂಕಂ
ಪಿಸುತಕಿವಿಮುಚ್ಚುತಗ್ರಜಂಗಿಂತೆಂದನು ।೫೪॥ ಕಾಯಸುಖಕೋಸುಗಂ
ಧರ್ಮಕೃತವುಂಬಿಡುವೊ।ರಾಯತಾತ್ಮೀಯಭಾವಶುದ್ಧಿಯಂತಿಳಿದಿರ್ದು। ವಾ.
ಯದಪವಾದಕಿಂತರಸಿಯಂತೊರೆಯಬೇಕೆಂಬರೇನಿಷ್ಕರುಣದಿ ॥ ಜೀಯ
ತುಂಬಿದಬಸುರ್ಬೆಸಲಾದದೇವಿಯಂ । ಪ್ರಿಯೆಯ್ಯಾಂದಾರ್ಕೆದುಃಸಹಬೇ
ಕೆಂದು । ರಘುರಾಯಂಗೆಲಕ್ಷ್ಮಣಂಬಿನ್ನೈಸೆಮೋಲ್ಬಾಯ್ತುಶತ್ರುಘ್ನನಿಂ
ತೆಂದನು ॥೫೫॥ ಬಿಡುವರೆಂತಿಕ್ಷ್ವಾಕುವಂಶದವರರಸಿಯಂ । ನುಡಿವ
ರೆಂತಿಳೆಯೊಳಾರಾದೊಡಂದೂಸರಂ । ಪಡೆವರೆಂತಮಲಸತ್ಕೀರ್ತಿಯಂಬು
ದ್ಧಿವೇಳ್ವದಕೊಡೆಯರಿಲ್ಲವಾಗಿ।ಕಡಿವರೆಂತೇಳ್ಗೆಯಂಪೆಂಣಳಲ್ವೆಂಕಿಯಿಂ।
ಸುಡುವರೆಂತನ್ವಯದಬಾಳ್ಕೆಯನಿದಕ್ಕೆಕಿವಿ । ಗುಡುವರೆಂತೀಗಲೆಂನೊಡ
ಹುಟ್ಟಿದವರೆನುತಶತ್ರುಘ್ನನುರಿದೆದ್ದನು ॥೫೬॥ ಆಸಕೇಳನುಜರಾಡಿದ
ನುಡಿಗೆತಲೆವಾಗಿ । ತರಣಿಕುಲತಿಲಕನೊಯ್ಯನೆದೈನ್ಯಭಾವದಿಂ ।ತಾಹರಿ
ಸಬಾರದಪವಾದಹೃಚ್ಛೂಲಮಂತನಗೆಜಾನಕಿಯನುಳಿದು॥ಪೆರೆಯುರ್ಚಿ
ದುರಗನಂತಿರ್ದಪೆಂಸಾಕುನಿಮು । ಗೊರೊದೊಡೇನಹುದೆಂದುಬೇಸರೋ
ಳ್ಮನೆಗಳ್ಗೆ । ಭರತಶತ್ರುಘ್ನರಂಕಳುಹುತೇಕಾಂತದೊಳ್ಸೌಮಿತ್ರಿಗಿಂತೆಂ
ದನು ॥೫೭॥ ತಂಮುಬಾನೀನಿಂದುವರೆಗೆತಾನೆಂದವೂ । ತಂವಿಾರಿದವನಲ್ಲ
ಕೆಲಬಲವನಾರೈನು । ತುಂಮರುಗದಿರುತನ್ನಕೊರಳಗಿದೆಬಗ್ಗಮಲ್ಲದೊ
ಡೀಗಜಾನಕಿಯುನು ॥ ಉಮ್ಮಳಿಸದೊಯ್ಯುಗಂಗೆಯತಡಿಯರಣ್ಯ
ದೊ । ಳ್ಸಂಮನೆಕಳುಹಿಬಪ್ಪುದದವಳಂನೊಳಾಡಿರ್ಪ । ಳೊಂಪುಕಾ

ನನಕ್ಕೈದಬೇಕೆಂದುಬಯಕೆಯಿಂದದೆನೆವಂನಿನಗೆಂದನು ॥೫॥ ಎನೆ ಶಾಘ
ವೇಂದ್ರನಿನ್ನಾಜ್ಞೆಯಂಮಿಾರಲ್ಕೆ । ತನಗೆರೌರವಮಪ್ಪುದೆಂದುದಂಮಾಡ
ಲ್ಕೆ । ಜನನಿಯಂಕೊಂದುಗ್ರಗತಿಯಪ್ಪುದೇಗೈವೆನೆಂದುಕಡುಶೋಕದಿಂದ॥
ತನುರ್ಷೋಂಪಿಸಲ್ಕೆ ಸೆರೆಬಿಗಿದುಕಂಬನಿಯಿಂದ । ನೆನೆದಳಲ್ದೊರೆಯೊಳಾ
ಳ್ದನುಜನಂಘೂರ್ಮಿ ಸುತ । ನಿನಗೆದೋಷಮಿಾಶಾನಿರಲ್ಕೆನಡೆಕಳುಹೆಂದನ
ರಸನೇಂದಯುದೊರೆದನೋ ॥೪೯॥ ಅಂಣದೇವನೊಳಿಡಿದವಾತ್ಸಲ್ಯಮಂ
ಬಬ । ಲ್ಗಂಣಿಯೋಳ್ಕಟ್ಟುವೊಡೆದಲ್ಲೆನಲರಿಯದನಿ । ರ್ವಿಣ್ಣಭಾವದೊ
ಳಂದುಲಕ್ಷ್ಮಣಂತುರಗಸಾರಥಿಕೇತನಂಗಳಿಂದ ॥ ಹಂಣಿದವರೂಥಮಂ
ತಯಿಸಿಪುರೆಗಿರಿಸಿನೆಲ । ವಂಣಯಮಗಳಿರುತಿರ್ದ ರಾಜಮಂದಿರಕ್ಕೈದಿ। ಕಣ್ಣೊಳಿ
ಕ್ಷಿಸದೆತಲೆವಾಗಿದೂರದೊಳೆನಿಂದಾಸೀತೆಗಿಂತೆಂದನು ॥೬೦॥ ತಾಯೆನೀನೇ
ತಕೆಳಸಿದನಿನ್ನನೀಗರಘು । ರಾಯಂತಪೋವನಕೆಕಳುಹಿಬರಹೇಳಿದಂ ।
ಪ್ರೀಯುನುಳ್ಳಿತೆರಳ್ಪಂಪಂಣಿಬಂದಿದೆಕೊಬಿಜಯಂಗೈವುದೆಂದುಮರುಗಿ॥
ಛಾಯೆಗಾಣಿಸಿಸುಮಿತ್ರಾತ್ಮಜಂನುಡಿದಭಿ । ಪ್ರಾಯಮಂತಿಳಿಯದತಿಸಂ
ಭ್ರಮಾನ್ವಿತೆಯಾವ । ಕಾಯುತಾಂಬಕಿತನ್ನಭೀಪ್ಸ್ಟಮಂಸಲಿಸುವಂಕಾಂತ
ನೆಂಬುತ್ಸವದೊಳು ॥೬೧॥ ಅಂಬುಜಾನನೆಬಳಿಕವಯಣಮಂನಿಶ್ಚೈಸಿ ।
ನಂಬಿದರಭೀಷ್ಟಮಂಸಲಿಸುವಕೃಪಾಳುತಾ । ನೆಂಬುದಂಕಾಣಿಸಿದನಿಂದೆ
ನ್ನಕಾಂತನೆನಸಂದುಕೌಸಲೆಗೆಪ್ಪೇಳ್ದು ॥ ಮುಂಬರಿದೊಡಂಬಡಿಸಿಬಲ
ವಂಮುಕಾಲ್ಗೆರಗಿ । ತುಂಬಿದಪುರಕೆವೆತ್ತುಕೈಕೆಯಾದೇವಿಗೆಸಿ । ರಂಬಾಗಿ
ವರಸುಮಿತ್ರೆಗೆನಮಿಸಿಸಖಿಯರಂಸಂತೈಸಿಬೀಳ್ಕೊಂಡಳು ॥೬೨॥ ಮಿಗೆತ
ಪೋವನದಋಷಿಯರ್ಗೆಮುನಿಪತ್ನಿಯ ।। ರ್ಗೆಗರುಚಂದನಕುಂಕುಮಾನು
ಲೇಪನಗಳಂ । ಬಗೆಬಗೆಯದಿವ್ಯಾಂಬರಂಗಳಂವಿವಿಧಮಣಿಭೂಷಣಸುವ
ಸ್ತುಗಳನು॥ತೆಗೆದುಕಟ್ಟಿಸಿರಥದೊಳಿಂಬಿಟ್ಟುರಾಮನಂ। ಘೆಗಳಚೆಂಬೊಂ
ನಪಾವುಗೆಗಳಂತರಿಸಿಕೊಂ । ಡೊಗುಮಿಗೆಯಹರುಷದೊಳಡರ್ದಳಂಗನೆ
ಮಣಿವರೂಥಮಂನಿಜಮಿದೆಂದು ॥೬೩॥ ಅಗ್ರಜಂತರಿಸಂದುತಂನೊಳಾಡಿ
ದಕಜ್ಜ । ದುಗ್ರಮಂಬನಕೆಪೋದಪೆನೆಂಬದೇವಿಯುಸ । ಮಗ್ರಸಂತೋಷ
ಮಂಕಂಡುಸೌಮಿತ್ರಿಮನದೋಳ್ಮರುಗಿಕಂಬನಿಯನು॥ ನಿಗ್ರಹಿಸಿಕೊಂ
ಡುಸಾರಥಿಗೆಸೂಚನೆಗೈದು । ವ್ಯಗ್ರದಿಂದ್ಯೈದಿಸಿದಸಾರಥವನಾಗದೇ । ವೆ
ಗಾಗ್ರಮನಿಲಯುಲಕ್ಷ್ಮೀಶನುಂಗುಟದೊಳೊಗೆದಮಲಜಾಹ್ನವಿಯತಡಿಗೆ ॥

ಸಂಧಿ ೧೪ಕ್ಕೆ ಪದ್ಯ ೯೩೩ಕ್ಕೆ ಮಂಗಳಮಸ್ತು

## ಹತ್ತೊಂಭತ್ತನೆಯ ಸಂಧಿ.

ಸೂ. ರಮಣಂತೊರೆದನೆಂಬುದಂಕೇಳ್ದುಶೋಕದಿಂ।ಭ್ರಮಿ
ಸುತಡವಿಯೊಳಿರಲ್ಕಂಡುವಾಲ್ಮೀಕಿಯಾ।ಶ್ರಮಕೆಕೊಂಡೊ
ಯ್ದ್ಯಮಿಥಿಲೇಂದ್ರಸುತೆತನಯರಂಪಡೆದುಪದುಳದೊಳಿರ್ದಳು॥

ಅರಸಕೇಳ್ ಸೌಮಿತ್ರಿವೈದೇಹಿಯಂಕೊಂಡು । ತೆರಳುವರಥಾಗ್ರದೋಳ್ಗಿರಿಸುವಪತಾಕೆರಘು । ವರನಂಗನೆಯನುಳಿದನಹನೆಂದಡಿಗಡಿಗೆತಲೆಗೊಡಹುವಂತಿರಲ್ಕೆ ॥ ಪರಮದಾರುಣಮಾಯ್ತಿದೆಂದಯೋಧ್ಯಾಪುರದ । ನೆರವಿಯುಜನಂಗುಜುಗುಜಿಸಿಮನದಿಕರಗಿಕಾ । ತರಿಸುತಿರೆಪರಿಸಿದಂಕಾಣ್ಬಟ್ಟೆಗೊಂಡನಿಲವೇಗದಿಂದಾರಥವನು ॥ ೧ ॥ ಧುರದೊಳಾಂತರನಿರಿದುಮೆರೆಯುಲೇರುವರಥಂ । ತರಳೆಯಂಕಾನನಕೆಕಳುಹಲಡರ್ವಂತಾಯ್ತು । ಧರೆಯೊಳಾರ್ತರನೈದೆರಕ್ಷಿಸುವಬುದ್ಧಿಕೋಮಲೆಯಕೊಲೆಗೆಲಸಕಾಯ್ತು ॥ ಕರುಣಮಿಲ್ಲದೆಪೌರವಹರಣಮಂಸುಡಲಿನಿ । ಷ್ಠುರದೊಳೀಕೃತ್ಯಕೆಂತೆಸಗುವನೊರಾಘವೇ । ಶ್ವರನೆಂತಿದಕೆಬೆಸಸಿದನೊತನಗೆನುತ್ತಸೌಮಿತ್ರಿಮರುಗುತನಡೆದನು ॥ ೨ ॥ ಬಳ್ಳೊರಲ್ದುದುಮುಂದೆಮಾರ್ಗಮಂದಾಂಟಿದುದು । ಕುಳ್ಳಿರ್ದಮೃಗಮೆದ್ದುಬಲದಕಣ್ಬದರೆಕಂ । ಡಳ್ಳಿದೆಯೊಳವನಿಸುತೆನೋಡುಲಕ್ಷ್ಮಣದುರ್ನಿಮಿತ್ತಂಗಳಂಪಥದೊಳು ॥ ಡಿಳ್ಳಮಾದಪುದೀಗಲೆನ್ನಮನಮಿದಕೆಮುಂ । ದೊಳ್ಳಿತಾಗಲಿರಾಮನಾಯುಷ್ಯಕೈಶ್ವರ್ಯ । ಕುಳ್ಳಭುಜಬಲಕಸುರರಂಗೆಲ್ದರಾಘವಂನಮ್ಮಂಸಲಹಲೆಂದಳು ॥೩॥ ಅನ್ನೆಗಂಜಾನಕಿಯಕಣ್ಗೆತೋರಿತುಮುಂದೆ। ಸನ್ನುತರಘೂದ್ವಹನಕೀರ್ತಿಯೆನೆಮೂಪಟ್ಟೆ । ಯಿಂನಡೆದುಮುಕ್ಕಂಣನಂಸಾರ್ದುಮೂಜಗದಪಾಪಮಂಮುರಿದುಮುಕ್ಕಿ ॥ ಮುನ್ನೀರುಮುಂತಾಗಿಮೂದೇವರೊಳಗಾದ । ಮುಂನುಳ್ಳಮೂವತ್ತುಮೂಕೋಟಿವಿಬುಧರಂ । ತಂನೋಳ್ಮುಳುಗಿದರಣಕಿಪಪೆಂಪೊದವಿಪರಿವಬೆಳ್ವೊನಲ್ದಿವಿಜನದಿಯು ॥೪॥ ತರತರದಕಲ್ಲೋಲಮಾಲೆಗಳಲೀಲೆಗಳ । ಜರೆಜರೆವರಾಜಹಂಸಾಳಿಗಳಕೇಳಿಗಳ । ಪರಿಪರಿಯನೀರ್ವನಿಗಳಾಕರದಸೀಕರದನೊರೆಯುಬೊಬ್ಬುಳಿಯಸುಳಿಯ ॥ ನೊರೆನೊರೆದುಘೂರ್ಮ್ಮಿಸುವಪರಿವ್ರಗಳಮುರಿವ್ರಗಳ । ತಿರುತಿರುಗಿಸುಳಿವಜಲಜಂತುಗಳಗಂತುಗಳ । ನೆರನೆರದುಮುನಿಜನಂಸೇವಿಸುವಭಾವಿಸುವಗಂಗೆಗವನಿಜೆಬಂದಳು ॥೫॥ ತೆಂಗೆಳಕವ್ರಂಗುಪನಸದ್ರಾಕ್ಷೆಜಂಬುನಾ । ರಂಗಜಂಬೀರಖರ್ಜೂರಕಿತ್ತಳೆಮಾತು। ಳಂಗತಿಂತ್ರಿಣಿಚೂತನೆಲ್ಲಿಬಿಲ್ವಕಪಿತ್ಥಮೆಂಬಸಾನಾತರುಗಳು ॥ ತೊಂಗುವಫ

ಲಾವಳಿಯಭಾರಂಗಳಾವಗಂ । ಪಿಂಗದಿವನಿಳೆಗಿಳುಪಬೇಕೆಂದುಬಾಗಿಬಂ ।
ದಂಗನೆಯಕಣ್ಗೆಸೆದುವಿಕ್ಕೆಲದೊಳಾಜಾಹ್ನವೀನದಿಯತಟಬನದೊಳು ॥೬॥
ಇಳಿದುರಥದಿಂದಮಂದಾಕಿನಿಗೆಪೊಡಮಟ್ಟು । ಬಳಿಕನಾವಿಕರೊಡನೆನಾ
ವದೊಳ್ಗಂಗೆಯಂ । ಕಳೆದುನಿರ್ಮಲತೀರ್ಥದೊಳ್ಮಿಂದುಸೌಮಿತ್ರಿಮತ್ತೆ
ಭೂಜಾತೆಸಹಿತ ॥ ಒಳಗೊಳಗೆಮರುಗಿಬಿಸುಸುಯ್ದುಚಿಂತಿಸುತಮುಂ ।
ದಳೆದುಗ್ರಮೃಗಪಕ್ಷಿಗಣದಿಂದಘೂರ್ಮ್ಮಿಸುವ । ಹಳುವಮಂಪೊಕ್ಕನಡಿಯಿ
ಡುವಡಸದಳವೆಂಬಕರ್ಕಶದಮಾರ್ಗದಿಂದ ॥೭॥ ಶಕುನಿಚೀತ್ಕಾರಘೋ
ಷಣಮಯಂತೃಣಮಯಂ । ವಿಕಿರಿದುಪಳಾಳಿಕರ್ಕಶಮಯಂಶಶಮಯಂ ।
ಪ್ರಕಟಕಂಟಕಶೀರ್ಣತರುಮಯಂ ರುರುಮಯಂ ವಿವಿಧೋಗ್ರಜಂತುಮ
ಯವು ॥ ನಕುಲಮೂಷಕಸರಿಸೃಪಮಯಂದ್ವಿಪಮಯಂ । ಸಕಲಭೂ
ವಿಷಮಸಂಕುಲಮಯಂಬಿಲಮಯಂ । ವೃಕಸೂಕರವ್ಯಾಘ್ರಚಯಮ
ಯಂಭಯಮಯಂತಾನೆನಿಸಿಕಾಡಿರ್ದುದು ॥೮॥ ಇರುಳಂತೆಪಗಲಂತೆ
ಮಖವಂತೆದಿವಿಯಂತೆ । ವಲಪಯೋನಿಧಿಯಂತೆಕೈಲಾಸಗಿರಿಯಂತೆ । ನಿ
ರುತಮಂಸೋಮಾರ್ಕಶಿಖಿಸಹಸ್ರಾಕ್ಷಕರಿನುತಶಿವಾವಾಸವಾಗಿ ॥ ಧು
ರದಂತೆಕೊಳದಂತೆಕಡಲಂತೆನಭದಂತೆ । ಶರಪುಂಡರೀಕವಿದ್ರುಮಮುಕ್ತ
ಮಯದೊಳಿತಿ । ದಿರುತಿರ್ದ್ದದಾಮಹಾಟವಿಜಾನಕಿಯಕಣ್ಗೆಘೋರತರ
ಮಾಗಿಮುಂದೆ ॥೯॥ ಅಟವಿಯಮಹಾಘೋರಗಂಹರಂಮುಂದೆದು । ಘ
ಟವಾಗೆನಡನಡುಗಿಭೀತಿಯಿಂಸೀತೆಸಂ । ಕಟದಿಂದರಾಮನಾಮಂಗಳಂ
ಜಪಿಸುತೆಲೆಸೌಮಿತ್ರಿಕಾನನವಿದು ॥ ಅಟನಕಸವಳಮಪ್ಪುದಿಲ್ಲಿಪುಣ್ಯಾ
ಶ್ರಮದ । ಜಟಿಗಳಂವಲ್ಕಲವನುಟ್ಟಮುನಿವಧುಗಳಂ । ವಟುಗಳಂಶ್ರುತಿ
ಘೋಷಹೋಮಧೂಮಂಗಳಂಕಾಣೆನೆಂದಳವಳಿದಳು ॥೧೦॥ ಎಲ್ಲಿಮುನಿ
ಪೋತ್ತಮರಪಾವನದವನದೆಡೆಗಳೆಲ್ಲಿಸಿದ್ಧಾಶ್ರಮಂಗಳಮಂಗಳಸ್ಥಳಗ ।
ಳೆಲ್ಲಿಸುಹವಿಗಳಕಂಪೊಗೆದಪೊಗೆದಳೆದಗ್ನಿಹೋತ್ರದಕುಟೀರಂಗಳು ॥ ಎಲ್ಲಿ
ಪರಿಚಿತವಾದವೇದಶಾಸ್ತ್ರಧ್ವನಿಗ । ಳೆಲ್ಲಿಗೊಯ್ಯದದಾರುಪಿಲ್ಲೆಹಕ್ಕಟ್ಟ
ಡವಿ । ಗಿಲ್ಲಿಗೇಕೈತಂದೆತಂದೆಸೌಮಿತ್ರಿಹೇಳೆಂದುಜಾನಕಿಸುಯ್ದಳು ॥೧೧॥
ಪಾವನಕೆಪಾವನಂಮಂಗಳಕೆಮಂಗಳಮ । ದಾವನಚರಿತ್ರನಾಮಂಗಳಾ
ರಾಘವನೆ । ಜೀವೇಶನಾಗಿರಲ್ಕಾತನಂಘ್ರಿಯನಗಲ್ದೀಗನಾಂಬಂದಬಳಿ
ಕ ॥ ಈವನದೊಳಿನ್ನುಪುಣ್ಯಾಶ್ರಮಂಗೋಚರಿಪು । ದೇವನಜದರ
ಳನುಳಿದಾರಡಿಗೆಬೊಬ್ಬುಳಿಯ । ಪೂವಿನೊಳ್ಮಧುವುಂಟೆಸೌಮಿತ್ರಿಹೇ
ಳೆಂಮಸೀತೆಪೊದಕುಳಿಗೊಂಡಳು ॥೧೨॥ ನರನಾಥಕೇಳವನಿಸುತೆನುಡಿದ

ವೊತಿಗು । ತ್ತರವನಾಡದೆಮನದೊಳುರೆನೊಂದುರಾಘವೇ । ಶ್ವರನೆಂದ
ಕಷ್ಟಮಂಪೇಳ್ವೆನೊಮೇಣುಸುರದಿರ್ದಪೆನೊನಿಪ್ಪುರದೊಳು ॥ ತರ
ಣಿಕುಲಸಾರ್ವಭೌಮನರಾಣಿಯುಂಬನದೊ । ಳಿರಿಸಿಪ್ಪೋದಪೆನೆಂತೊಮ
ರಳದಿರ್ದೊಡೆಸಹೋ । ದರನದೇನೆಂದಪನೊಹಾಯೆಂದುಲಕ್ಷ್ಮಣಂಬೆಂ
ದುಬೇಗುದಿಗೊಂಡನು ॥೧೩॥ ಉಕ್ಕಿದುವ್ರಕಂಬನಿಗಳಧರೋಷ್ಟಮದಿರಿ
ತ್ರಲ । ಗಿಕ್ಕಿತಿರುಪಿದೊಲಾಯಿತೊಡಲೊಳೆಡೆವರಿಯುದುಸು । ರೊಕ್ಕುದು
ರೆಕಂಪಿಸಿದುದವಯುವಂಕರಗಿತೆದಸ್ವೈರಣೆಸಮತೆಗೆಟ್ಟುದು ॥ಸಿಕ್ಕಿದುವ್ರಕಂ
ಠದೋಳ್ಮಾತುಗಳ್ಸೆರೆವಿಡಿದು । ಮಿಕ್ಕುವಿಾರುವಶೋಕದಿಂದಬೇಡಾಗಿಕ
ಡು । ಗಕ್ಕಸದಕೆಲಸಮನುಸುರಲರಿಯುದವನೊಯ್ಯನವನಿಸುತೆಗಿಂತೆಂ
ದನು ॥೧೪॥ ದೇವಿನಿನಗಿನ್ನೆಗಂಪೇಳ್ದುದಿಲ್ಲಪವಾದ ।ಮಾವದಿಸೆನಿನ್ನನೊ
ಲ್ಲದೆರಘುಕುಲೋದ್ಭವಂ । ಸೀವರಿಸಿಬಿಟ್ಟುಕಾಂತಾರಕ್ಕೆಕಳುಹಿಬಾಯೆಂ
ದೆನಗೆನೇಮಿಸಿದೊಡೆ ॥ ಆವಿಭುವಿನಾಜ್ಞೆಯುಂಮೀರಲರಿಯುದೆಮ್ಮ।ನೀವಿ
ಪಿನಕೊಡಗೊಂಡುಬಂದೆನಿನ್ನೊಯ್ಯೊಯ್ಯ ।ನಾವಲ್ಲಿಗಾದೊಡಂಪೋಗೆಂ
ದುಲಕ್ಷ್ಮಣಂಬಾಷ್ಪಲೋಚನನಾದನು ॥೧೫॥ ಬಿರುಗಾಳಿಪೊಡೆಯಲ್ಕೆ
ಕಂಪಿಸಿಫಲಿತಕದಳಿ । ಮುರಿದಿಳೆಗೊರಗುವಂತೆಲಕ್ಷ್ಮಣನವಾಕ್ಕಿಳಿ ।
ದೆರೆಗೆಬೀಳವನುನ್ನಹರ್ಮ್ಯಸಿಬಿದ್ದಳಂಗನೆಧರೆಗೆನಡನಡುಗುತ ॥ ಮರ
ದಳಂಗೋಪಾಂಗಮಂಬಳಿಕಸೌಮಿತ್ರಿ । ಮರುಗಿತಂಣೀರ್ದಳಿದುಪತ್ರ
ದೋಳ್ಕೊಡೆವಿಡಿದು । ಸೆರಗಿಂದಬೀಸಿರಾಮನಸೇವೆಸಂದುದೇತನಗೆಂದು
ರೋದಿಸಿದನು ॥೧೬॥ ಒಯ್ಯನರೆಗಳಿಗೆಯೋಳ್ಕಣ್ದೆರೆದುದೈನ್ಯದಿಂ । ಸು
ಯ್ಯಲರನುರೆಸೂಸೆಸೌಮಿತ್ರಿಯುಂನೋಡಿ । ಕೊಯ್ಯಲೊಲ್ಲದಕೊರಳ
ನಿಂತುತನ್ನಂಬಿಡಲ್ಮಾಡಿದಪರಾಘಮುಂಟೆ ॥ ಕಯ್ಯಾರೆಖಡ್ಗಮಂಕೊ
ಟ್ಟುತಂನರಸಿಯುಂ । ಹೊಯ್ಯೆಂದುಪೇಳದಡವಿಗೆಕಳುಹಿಬಾಯೆಂದ । ನ
ಯ್ಯಯ್ಯೊರಾಘವಂಕಾರುಣ್ಯನಿಧಿಯೆಂಡಳಲ್ದಳಂಭೋಜನೇತ್ರೆ ॥೧೭॥ ಬಿ
ಟ್ಟನೆರಘುಶ್ರೇಷ್ಠನೆನ್ನನಕಟಕಟತಾ । ಮುಟ್ಟನೆನೆಗಳ್ದಬಾಳ್ಕೆಸಂಚಕಾ
ರವುಂ । ಕೊಟ್ಟನೆಸುಮಿತ್ರಾತನುಜಕಟ್ಟರಣ್ಯದೋಳ್ಕಳುಹಿಬಾಯೆಂದು
ನಿನಗೆ ॥ ಕೊಟ್ಟನೆನಿರೂಪಮಂತಾನೆಂನಕಾಣ್ಬಟ್ಟೆ । ಗಟ್ಟನೆಮನೋವಲ್ಲ
ಭನನಗಲ್ದಡವಿಯೋ ।ಳ್ಕಿಟ್ಟನೆಪಿಶಾಚದವೋಲೆಂತಿಹೆನೊಕೆಟ್ಟೆನಲ್ಲಾಯೆಂ
ದೊರಲ್ದಳಬಲೆ ॥೧೮॥ ಎಂದುಕೌಶಿಕಮುನಿಪನೊಡನೆಮಿಥಿಳಾಪುರಕೆ ।
ಬಂದುಹರಧನುವಮುರಿದೆನ್ನಂಮದುವೆಯಾದ । ನಂದುಮೊದಲಾಗಿರಮಿ
ಸಿದನೆಂನೊಳಾನಗಲ್ದೊಡೆತಾಂನವೆದನಲ್ಲದೆ ॥ ಬಂದಿದನೆಸೌಖ್ಯಮಂರಾ

Funding: Tattva Heritage Foundation,Kolkata. Digitization: eGangotri.



ಮನೆನೆಗಾಗಿಕಪಿ । ವೃಂದಮಂನೆರಪಿಕಡಲಂಕಟ್ಟಿದೈತ್ಯರಂ । ಕೊಂದಗ್ನಿ
ಮುಖದೊಳ್ಪರೀಕ್ಷಿಸಿದನೆನ್ನೊಳಪರಾಧಮಂಕಾಣಿಸಿದನೆ ॥೧೯॥ ಕಲ್ಮು
ಳ್ಳಿಡಿದಕಾಡೊಳಂದೆನ್ನನುಪಚರಿಸಿ । ಪಲ್ಮೊರೆದುಗರ್ಜಿಪವಿರಾಧನಂವ
ಧಿಸಿದೆ । ಬಲ್ಮೆಯಿಂನಾಂಕಳುಹಿದೊಡೆಜನಸ್ಥಾನದಿಂಪೋದರಾಘವನಬಳಿ
ಗೆ ॥ ನಲ್ಮೆಯಿಂಮರೆದಪೆನೆಸೌಮಿತ್ರಿನೀನೆಲ್ಲ । ರೋಲ್ಮೆಮೈದುನನೆತನಗೆ
ಕಾನನದೊಳೆನ್ನನಿಲಿ । ಸಲ್ಮನಂಬಂದಪುದೆತಂದೆನಿನಗೆಂದುಕಂಬನಿಮಿಡಿ
ದಳಂಬುಜಾಕ್ಷಿ ॥೨೦॥ ತೊಳಪನಾಸಿಕದನುಣ್ಗದಪುಗಳಪೊಳೆವಕಂ । ಗ
ಳತುರುಗಿದೆವೆಯುನಿಡುಪುರ್ಬುಗಳಪೆರೆನೊಸಲ । ಥಳಥಳಿಪಮುಕುಟದಕಿ
ವಿಯಮಕರಕುಂಡಲದಕೋಮಳಿತಚುಬುಕಾಗ್ರದ ॥ ಲಲಿತಾರುಣಾಧರ
ದಮಿರುಗುವರದನಪಙ್ತಿ । ಗಳಸೊಸುವೆಳನಗೆಯಮೋಹನದಚೆಲ್ವಿ
ನೊ । ಬ್ಬುಳಿಯೆನಿಪರಾಘವನಸಿರಿಮೊಗವನೆಂತುನೋಡದೆಪೋಣ್ಬಕಟಂ
ಬಳು ॥೨೧॥ ರಾಮನಂಭುವನಾಭಿರಾಮನಂಗುಣರತ್ನ । ದಾಮನಂರಘುಕು
ಲೋದ್ಧಾಮನಂರೂಪಜಿತ । ಕಾಮನಂಸತ್ಕೀರ್ತಿಕಾಮನಂಶರಣಜನವಾ
ರ್ಧಿಯಂಮಿಗೆಪೇರ್ಚಿಪ ॥ ಸೋಮನಂಸೌಭಾಗ್ಯಸೋಮನಂಕುವಲಯ
ಶ್ಯಾಮನಂನಿಜತನುಶ್ಯಾಮನಂಘನಪುಣ್ಯ । ಸಾಮನಂಸಂತತಂಸಾಮನಂದ
ಣಿಯೆರಮಿಸದೆಬಾಳ್ವೆನೆಂತೆಂದಳು ॥೨೨॥ ರಾಯಕೇಳಿಂತಿಂತುರಾಘವೇಶ್ವರ
ನರಮ । ಣೀಯಗುಣಮಾಲೆಯಂನೆನೆನೆನೆದುಸಂಚಲಿಸು । ತಾಯತಾಂಬಿಕ್ಕಿ
ಮತ್ತೆಮ್ಮೈಮರೆವುತೆಚ್ಚರುತಪಾವಗಿದಪಸುಳಿಯೋಲಿರೆ ॥ ತಾಯೆನಿನ್ನಂಬಿ
ಟ್ಟುಪೋಗೆಲಾರೆನುಪೋಗ । ದೀಯವಸ್ಥೆಯೊಳಿರ್ದೊಡಣ್ಣನೇಗೈದಪನೊ ।
ಹಾಯೆಂದುಲಕ್ಷ್ಮಣಂಶೋಕಗದ್ಗದನಾಗೆಸೀತೆಮಗುಳ್ದಿಂತೆಂದಳು ॥೨೩॥
ತಂದೆಲಕ್ಷ್ಮಣನಿನ್ನೊಳೆಂದೊಡಿನ್ನೇನಹುದು । ಹಿಂದಣಜನಸ್ಥಾನದಂದ
ದೋಳಿಪ್ಪೋಗುನೀಂ । ಕೊಂದುಕೊಂಬೊಡೆತನ್ನಬೆಂದೊಡಲೊಳಿದೆಬಸು
ರದಂದುಗಂಕಾನನದೊಳು ॥ ಬಂದುದಂಕಾಣ್ಬೆನಾನಿಂದುಕೌಸಲೆಯಡಿ
ಗೆ । ವಂದಿಸಿದೆನಪರಾಧವೊಂದುಮಿಲ್ಲದತನ್ನ । ಕಂದನನ್ನಂತೊರೆದು
ದಂದೇಮಿಗೊರೆವುದೆನುತೆಂದಳಲ್ದಳ್ಮೃಗಾಕ್ಷಿ ॥೨೪॥ ಏಕೆನಿಂದಪಪೋಗು
ಸೌಮಿತ್ರಿಕೋಪಿಸನೆ । ಕಾಕುತ್ಸ್ಥನಿಲ್ಲಿತಳುವಿದೊಡೆನೆರವುಂಟುತನ ।
ಗೀಕಾಡೊಳುಗ್ರಜಂತುಗಳಲ್ಲಿರಘುನಾಥನೇಕಾಕಿಯಾಗಿರ್ಪನು ॥ ಲೋ
ಕದರಸೇಗೈದೊಡಂತನ್ನಕಿಂಕರ । ರ್ಬೇಕುಬೇಡೆಂದುಪೇಳ್ವರೆಭರತಶತ್ರು
ಘ್ನ । ರೇಕೆಲಸಕೊಪ್ಪಿದರೆಹನುಮಂತನಿರ್ದಪನೆಪೇಳೆಂದಳಲ್ದಳಬಲೆ ॥೨೫॥
ಅರಿದೊರ್ಡೇಗೈವರಂತನ್ನಮರುಳಾಟ । ಮಾರಮಣನತಮ್ಮನೈಸಲೆವಿ

ಭೀಷಣಂ । ಭೀರುಗಳನರಿದಪನೆಸೋದರಂಗುರೆಮುಳಿದಸುಗ್ರೀವನೆಂಬ
ವಂಗೆ ॥ ಕಾರುಣ್ಯಮಿರ್ದಪುದೆಮತ್ತುಳಿದಮಂತ್ರಿಗಳ । ದಾರುಂಟುಪೇ
ಳುವರೆಸೌಮಿತ್ರಿನೀನೊಪ್ಪಿ । ಘೋರಾಟವಿಗೆಕೊಂಡುಬಂದಕಳುಪ್ರವೊ
ಡಿನ್ನೊರಲೊಡ್ಡೇನಹುದೆಂದಳು ॥೨೬॥ ಕಡೆಗೆಕರುಣಾಳುರಾಘವನಲ್ಲಿತ
ಪ್ಪಿಲ್ಲ । ಕಡುಪಾತಕಂಗೈದುಪೆಣ್ಣಾಗೆಜನಿಸಿತಂ । ನೊಡಲಂಪೊರೆವುದೆ
ನ್ನೊಳಪರಾಧಮುಂಟುಸಾಕಿಲ್ಲಿರಲ್ಬೇಡನೀನು ॥ ನಡೆಪೋಗುನಿಲ್ಲದಿರ್ನಿನ
ಗೆಮಾರ್ಗದೊಳಾಗ । ಲಡಿಗಡಿಗೆಸುಖುಮೆಂದುಸೀತೆಕಂಬನಿಗಳಂ । ಮಿಡಿ
ದಾರ್ತೆಯಾಗಿರಲ್ಸೌಮಿತ್ರಿನುಡಿದನಾವಿಪಿನದಭಿಮಾನಿಗಳ್ಗೆ ॥೨೭॥ ಎಲೆವನ
ಸ್ಥಳಗಳಿರವೃಕ್ಷಂಗಳಿರಮೃಗಂ । ಗಳಿರಕ್ರಿಮಿಕೀಟಂಗಳಿರಪಕ್ಷಿಗಳಿರಲತೆ
ಗಳಿರತೃಣಗುಲ್ಮಂಗಳಿರಪಂಚಭೂತಂಗಳಿರದೆಸೆಗಳಿರಕಾವುದು ॥ ಎಲೆಧ
ರ್ಮದೇವತೆಜಗಜ್ಜನನಿಜಾಹ್ನವಿಯೆ । ಸಲಹಿಕೊಂಬುದುತನ್ನಮಾತೆ
ಯಂಜಾನಕಿಯ । ನೆಲೆತಾಯೆಭೂದೇವಿನಿನ್ನಮಗಳಹಳೆಂದುಸೌಮಿತ್ರಿಕೈ
ಮುಗಿದನು ॥೨೮॥ ಮಾಳ್ಕೆಯಿಂನಾವುದಿಬ್ಬಗೆಯಾಗಿತನ್ನೊಡಲ । ಸೀಳ್ಕೆಡ
ಹಬೇಡನೆಧರಿತ್ರಿಯೊಳ್ಕಿಪ್ಪುರದ । ಬಾಳ್ಕೆಯಂಸುಡಲೆನುತದೇವಿಯಂಬಲ
ವಂದುಲಕ್ಷ್ಮಣಂನಮಿಸಿಬಳಿಕ ॥ ಬೀಳ್ಕೊಂಡುನಡೆಯಲ್ಕೆಹಿಂದಹಿಂದಕೆ
ಮನಂ । ನೀಳ್ಕೆಳಗೊಳಲ್ಕೆಂದುಮುಗಲದಣ್ಣನಕಡೆಗ । ಧೂಳ್ಕಾಯದೆಳ
ಲ್ಪತ್ತಿಪೊರಳ್ವಸೀತೆಯಕಡೆಗೆತಗುಗ್ಯಲೆಯೊಲಾದನು ॥ ೨೯ ॥ ನಡೆ
ಗೊಳಲ್ಕಂಡುಬಂಮಯಾರ್ವಳಂಬೀರ್ವಳಂ । ಕಡಲಿಡುವಕಂಬನಿಯೊಳಾ
ಳ್ವಳಂಬೀಳ್ವಳಂ । ಪುಡಿಯೊಳ್ಪೊರಳ್ದುಬಸವಳಿವಳಂಸುಳಿವಳಂಭರತಾ
ವರಜನಗಲ್ದು ॥ ಅಡಿಗಡಿಗೆತಿರುತಿರುಗಿನೋಡುವಂಬಾಡುವಂ । ಬಿಡದಬಿ
ಸುಸುಯ್ದುಬೆಂಡಾದಪಂಪೋದಪಂ । ಪೊಡೆಮರಳ್ವಂನಿಲ್ವಸಳಲುವಂ
ಬಳಲುವಂಬಟ್ಟೆಯೊಳ್ದಿಟ್ಟಗೆಟ್ಟು ... ... ॥೩೦॥
ತಾಯನೆಳಗರುಬಿಚ್ಚುವಂತೊಯ್ಯನೊಯ್ಯನ । ತ್ಯಾಯಾಸದಿಂದಗಲ್ದಮರ
ನದಿಯಂದಾಂಟಿ । ರಾಯಕೇಳ್ದುಃಖಾರ್ತನಾಗಿಸೌಮಿತ್ರಿನಾಗಿದನತ್ತಲಿವಳಿ
ತ್ತಲು ॥ ಬಾಯಾರಿಕಂಗೆಟ್ಟುಲಕ್ಷ್ಮಣನತಲೆಮುಸುಳೆ । ಲಾಯೆಂದೊರಲ್ದು
ಭಯಶೋಕದಿಂದಸವಳಿದು । ಕಾಯಮುಂಮರೆದವನಿಗೊರಗಿದಳ್ಮೂಲಮಂ
ಕೊಯ್ದೆಳೆಯಬಳ್ಳಿಯಂತೆ ॥೩೧॥ ಅರಸಕೇಳಲ್ಲಿರ್ದಪಕ್ಷಿಮೃಗಜಂತುಗ ।
ಳ್ದರಣಿಸುತೆಯಂಬಳಸಿನಿಂದುಮ್ಮಯಡಿಗಿಜೋ । ಲ್ದಿರದೆಕಂಬನಿಗರೆದುನಿ
ಜವೈರಮಂಮರೆದುಪುಲ್ಮೇವುಗಳನೆತೊರೆದು ॥ ಕೊರಗುತಿರ್ದುವುಕೊಡೆ
ವೃಕ್ಷಲತೆಗಳುಬಾಡಿ । ನೊರಗುತಿರ್ದುವುಶೋಕಭಾರದಿಂಕಲ್ಲುಗ । ಳ್ಕೆರಗುತಿ

ದುರ್ನೃಪನಗರದೊಳುತ್ತಮರಹಾನಿಯುಂಕಂಡುಸೈರಿಸುವರುಂಟೆ ॥೨೦॥ ಮೊ
ರೆಯಲೊಲ್ಲವುತುಂಬಿಕುಣಿಯಲೊಲ್ಲವುನವಿ । ಲ್ಬೆರೆಯಲೊಲ್ಲವುಕೋಕಿನ
ಡೆಯಲೊಲ್ಲವುಹಂಸೆ।ಕರೆಯಲೊಲ್ಲವುಪಿಕಂನುಡಿಯಲೊಲ್ಲವುಶುಕಂನಲಿಯ
ಲೊಲ್ಲವುಚಕೋರಿ॥ನೆರೆಯಲೊಲ್ಲವುಹರಿಣಿಯೊಲೆಯಲೊಲ್ಲವುಕರಿಣಿ। ಪರ
ಯಲೊಲ್ಲವುಚಮರಿಮೊರೆಯಲೊಲ್ಲವುಸಿಂಗ । ಮರರೆಜಾನಕಿಯಶೋಕಂತ
ವ್ಮ್ರಬೆಂದಾಕೆಯುಂಗನುಂನೋಡಿನೋಡಿ॥ಬೀಸಿದುವುಬಾಲದೋಳ್ಹಿಮರಿಗ
ಳ್ಗಮರವಂ।ಪಾಸಿದುವುಕರಿಗಳೆಳೆದಳಿರಮೃದುತಲ್ಪಮಂ। ಸೂಸಿದುವುಸಾ
ರಂಗಗಳ್ತಂಮಗರಿಗಳಂತೋದುತಂದಂಬುಗಳನು ॥ ಆಸಿರಿಮೊಗಕ್ಕೆಬಿಸಿ
ಲಾಗದಂತಾಗಸವೊ।ಳೋಸರಿಸದಿಚೆಗಳ್ರೆಕ್ಕೆಯನಗಲ್ಚಿನೆಳಲೀಸೆಗೈ
ದುವುರಾಘವನರಾಣಿದುಃಖಸಂತಪ್ತೆಯಾಗಿರುತಿರಲ್ಕೆ॥ ಸುರನದಿಯತೆರೆತೆರೆ
ಯುನಡುನಡುವೆಬಿದ್ದದ್ದು।ಬರಲಾರದಿದಿರ್ಗೊಡಂಮತ್ತೆಗಂಗೆಯೊಳಲ।ದರ್
ರವಿಂದಗಂಧದತಿಭಾರಮಂಪೊರಲಾರದಿದಿರ್ಗೊಡಂಧರಣಿಸುತೆಯ॥ ಪರಿತಾ
ಪಮಂತವಿಸದಿರಬಾರದೆಂದುತರ । ಹರದೊಳೊಯ್ಯೊಯ್ಯನೈತಂದುಬೀಸಿ
ತುಸುಖ।ಸ್ಪರುಶವಾತಂಜಗದೊಳುಪಕಾರಿಯಾದವಂತನ್ನನೋವಂನೋ
ಳ್ಪನೆ ॥೨೧॥ ಪೃಥಿವಿಯಾತ್ಮಜೆಬಳಿಕಚೇತರಿಸಿತನಗಿನ್ನು। ಪಥವಾವುದೆಂ
ದುದೆಸೆದೆಸೆಗಳಂನೋಡಿಸಲೆ । ಶಿಥಿಲವಾದವಯವದಧೂಳಿಡಿದಮೈಯುಬಿ
ಡುಮುಡಿಯುಪಿಕೃತಿಯುನೆಣಿಸದೆ ॥ ಮಿಥಿಲೇಂದ್ರವಂಶದೊಳ್ಜನಿಸಿರಘು
ಕುಲದದಶ।ರಥನೃಪನಸೊಸೆಯಾಗಿತನಗೆಕಟ್ಟಡವಿಯೋ। ಳ್ವ್ಯಥಿಸುವಂ
ತಾಯ್ತುಕಟವಿಧಿಯೆಂದುಹಲುಬಿದಳ್ಕಲ್ಮರಂಕರಗುವಂತೆ।೨೨॥ ಕೇಣವಂ
ಬಿಟ್ಟಾತ್ಮಘಾತಕದೊಳೀಕ್ಷಣಂ । ಪ್ರಾಣಮಂತೊರೆದಪೆನೆಬಂದಪ್ರದುಗ
ರ್ಭದಿಂ।ಭ್ರೂಣಹತ್ಯಾದೋಷಮೇಗೈವೆನಾಗರ್ಭರೆವೆನೆಂದೊಯ್ಯನೆದ್ದು
ಬಳಿಕ॥ ವಿಣಾಕ್ಷಿನತೆದಳಡವಿಯೊಳುಪಲಕಂಟಕ।ಶ್ರೇಣಿಗಳ್ಸೋಂಕಿಮೆಲ್ಲ
ಡಿಗಳಿಂಬಸಿವನವ । ಶೋಣಿತಂನೆಲದೊಳ್ಪೊನಲ್ವರಿಯಲರಸಕೇಳ್ಪೊ
ಣ್ಣೊಡಲ್ವಿಡಿಯಬಹುದೆ ।೨೩॥ ಅನ್ನೆಗಂಮುಖಕೆಯುಉಪವನರಸುತಾಬನ
ಕೆ।ಸನ್ನುತತಪೋಧನಂವಾಲ್ಮೀಕಿಮುನಿವರಂ ।ತನ್ನಶಿಷ್ಯವರ್ಗರಸಿನಷೆತಂ
ದುಕಾಡೊಳೋರ್ವಳೆಪೊಗಲ್ದೆಸೆಗಾಣದೆ ॥ ಬನ್ನಬಿಂಬಿಗೆಗಟ್ಟುಪಾಡಳಿ
ದುಗ್ರೀಷ್ಮಖುತು । ವಿಂನವದಕಾಂತಾರದಧಿದೇವತಾನೆನ ।ಲ್ಸನ್ನಗದ್ಗ
ದಕಂಠೆಯಾಗಿರೋದಿಸುತಿರ್ದವೈದೇಹಿಯಂಕಂಡನು ।೨೪॥ ಆರಿವಳ್ಗ
ತಕಿದ್ದಪಳೀವನಸಾಂತರದೊ । ಳಾರ್ಯೆವನಿದನೆಂದುನಡೆತಂದುಕರುಣದಿಂ ।
ದಾಮುಷಿಮತಿಪೆದನೆಲೆತಾಯೆನೀನಾವಳಾಕಂಡಕುರುಪಾಗಿಪ್ಪುದು ॥

ಘೋರತರಗಹನಕೋರ್ವಳೆಬಂದೆಯೆಂತಕಟ । ಭೀರುಹೇಳೌಬೆದರಬೇ
ಡವಾಲ್ಮೀಕಿನಾಂ । ಭೂರಿಶೋಕಾರ್ತರಾಗಿರ್ದರಂಕಂಡುಸುಮ್ಮನೆಪ್ಪೋ
ಪನಲ್ಲೆಂದನು ॥೩೯॥ ಹರುಷಮೊತ್ತರಿಸಿದುದುಶೋಕವಿಂಮಡಿಸಿದುದು।
ಬೆರಸಿದುದುಲಜ್ಜೆಭೂಮಿಜೆಗಂದುಗದ್ಗದ । ಸ್ವರದಿಂದಸೀತೆತಾಂಲೋ
ಕಾಪವಾದಕಪರಾಧಿಯಲ್ಲದೆತನ್ನನು ॥ ತರಣಿಕುಲಸಂಭವಂಬಿಟ್ಟನೆಂದೀ
ವನದೊ । ಳರಿಸಿಪೋದಂಸುಮಿತ್ರಾತ್ಮಜಂಜೀವಮಂ । ಪರಿಯವೇಳ್ಪು
ದೆಗರ್ಭವೊಡಲೊಳಿಹುದೇವನೆಂದೆರಗಿದಳ್ಮುನಿಪದದೊಳು ॥೪೦॥ ದೇವಿಬಿ
ಡುಶೋಕಮಂಪುತ್ರಯುಗಮಂಪಡೆವೆ । ಭಾವಿಸದಿರಿನ್ನುಸಂದೇಹಮಂಜ
ನಕಂಗೆ । ನಾವನ್ಯರಲ್ಲನಮ್ಮಾಶ್ರಮಕೆಬಂದುನೀಂಸುಖದೊಳಿರ್ದೊಡೆನಿ
ನ್ನನು ॥ ಆವಾವಬಯಕೆಯುಂಟೆಲ್ಲಮಂಸಲಿಸಿತಾ । ನೋವಿಕೊಂಡಿರ್ಪೆ
ನಂಜದಿರೆಂದುಸಂತೈಸಿ । ರಾವಣಾರಿಯರಾಣಿಯಂನಿಜತಪೋವನಕೆವಾ
ಲ್ಮೀಕಿಕರೆತಂದನು ॥೪೧॥ ಚಿತ್ರಮಯವಾಗಿಕಟ್ಟಿತುಪರ್ಣಶಾಲೆಶತ । ಪ
ತ್ರಲೋಚನೆಗೆಬಳಿಕಲ್ಲಿಋಷಿಪತ್ನಿಯರ । ಮಿತ್ರತ್ವಮಂತಳೆದುವಾಲ್ಮೀ
ಕಿಮುನಿಪನಾರೈಕೆಯಿಂಸೀತೆತನ್ನ ॥ ಪುತ್ರೋದಯದಕಾಲಮಂನೋಡು
ತಿರ್ದಳ್ಧ । ರಿತ್ರಿಯೊಳ್ದೃಢಪತಿವ್ರತೆಯರ್ಗೆನಿರ್ಮಲಚ । ರಿತ್ರಮಂತಾ
ದೊಡಂವಿಪರೀತಮಾದಪುದೆಭೂಪಾಲಕೇಳೆಂದನು ॥೪೨॥ ಜಾತಿವೈರಂಗ
ಳಿಲ್ಲದಪಕ್ಷಿಮೃಗವಸಂ। ಘಾತದಿಂಋತುಭೇದವಿಲ್ಲದಲತಾದ್ರುಮ। ವ್ರಾ
ತದಿಂಪಗಲಿರುಳಶಂಕೆಯಿಲ್ಲದಪೂಗೊಳಂಗಳವಿಕಾಸದಿಂದ ॥ ಶೀತೋಷ್ಣ
ದಾಸರಿಲ್ಲದಸುಸ್ಥಳಂಗಳಿಂ। ಪ್ರೀತಿವಿರಹಿತದುಃಖಸುಖದಜಂಜಡವಿಲ್ಲ। ದಾ
ತಪೋವನದೊಳಗೆಋಷಿವಧುಗಳೊಡಗೂಡಿವೈದೇಹಿಪದುಳಿಸಿದಳು ॥೪೩॥
ಮುನಿವಟುಗಳೆಡೆಯಾಡಿಪರಿಚರಿಯಮಂಮಾಳ್ಪ । ರಿನಿದಾದವಸ್ತುವಂಋ
ಷಿವಧುಗಳಿತ್ತಪ । ರ್ತನತನಗೆಸತ್ಕರಿಸುವರ್ತಾಪಸೋತ್ತಮವಾಲ್ಮೀಕಿ
ಸಾದರದೊಳು ॥ ದಿನದಿನಕೆಬೇಕಾದಬಯಕೆಯಂಸಲಿಸುವಂ । ಬನದೊ
ಳಿಂತಿರುತಿರ್ದಳವನಿಸುತೆರಾಘವೇಂ। ದ್ರನಚರಣಕಮಲಯುಗಮಂಧ್ಯಾನಿ
ಸುತಮರದಳಖಿಳರಾಜ್ಯಶ್ರೀಯನು ॥೪೪॥ ಅವನಿಜೆಯಗರ್ಭಕ್ಕೆತುಂಬಿದು
ದುನವಮಾಸ । ದವಧಿಬಳಿಕೊಂದಿರುಳಶುಭಲಗ್ನದೊಳ್ಪಡೆದ। ಳವಳಿಮ
ಕ್ಕಳನುಪಚರಿಸೆವಿದಗ್ಧಾಂಗನೆಯರಾಸೂತಿಕಾಗೃಹದೊಳು ॥ ತವಕದಿಂ
ದೈತಂದುಮುನಿವಟುಗಳುಸುರಲುತ್ಸ । ವದಿಂದವಾಲ್ಮೀಕಿಋಷಿಬಂದು
ನೋಡಿಕುಶ । ಲವದಿಂದಸೇಚನಂಗೈದುಕುಶಲವರೆಂದುಪೆಸರಿಟ್ಟನರ್ಭಕ
ರ್ಗೆ ॥೪೫॥ ದೆಸೆಗಳ್ಪ್ರಸಂನತೆಯೊಳೆಸೆದುವಾಗಸದೊಳುಡು । ವಿಸರಂಗ

ಳೊಪ್ಪಿದುವು ಪೊಸಗಂಪಿಡಿದುಗಾಳಿ । ಪಸರಿಸಿತುತ್ತಪಸುಪ್ರದಕ್ಷಿಣದೊಳು
ರಿದುದಗ್ನಿಜ್ವಾಲೆಕಡಲುಕ್ಕಿತು ॥ವಸುಧೆನಲಿದುದುತಿಳಿದುಪರಿದುವುನದಿಗ
ಳೆಂದು । ಶಶಿರವಿಗಳುದಯಿಸಿದರೇಕಕಾಲದೊಳನ । ಲಿಶಿಶುಗಳಾಶ್ರಮದ
ಮುನಿಗಳಕಣ್ಗೆ ಕಾಣಿಸಿದರೊಸಗೆಮೂಜಗಕಾಗಲು ॥ ೪೬ ॥ ಬಾಲದೊ
ಡಿಗೆಗಳೆಲ್ಲಮಂತೊಡಿಸಿನೋಡುವಂ । ಬಾಲಲೀಲೆಗಳನಾಡಿಸಿಮುದ್ದು ಮಾ
ಡುವಂ । ಬಾಲಕರ್ಗೆನಿದಾದವಸ್ತುವಂಕೊಡುವಂತನ್ನತೊಡೆಮಡಿಲೊ
ಳಿಟ್ಟು ॥ ಲಾಲಿಸುವನಾವಗಂಜಪತಪಸಮಾಧಿಗಳ । ಕಾಲಮಂಬಗೆಯದೆ
ಮುನೀಶ್ವರಂಕುಶಲವರ । ಮೇಲಣಕ್ಕರೊಳಿರ್ದನಾಶ್ರಮದೊಳುತ್ಸವಂಪೆ
ರ್ಚಿದುದುದಿನದಿನದೊಳು ॥೪೭॥ ದಶರಥನೃಪಾಲಸುತನರಮನೆಯುಬೆಳ
ವಿಗೆಯು । ಶಿಶುಗಳ್ಗೆ ಕಾಂತಾರವಾಸದೊಳ್ಪವಕ । ರ್ಕಶಮಿದೆತ್ತಣದೆಂದು
ಮಿಥಿಳೇಂದ್ರಸಂಭೂತೆಚಿತ್ತದೊಳ್ಮರುಗದಂತೆ ॥ ವಿಶದಮಾನಸನಾಗಿವಾ
ಲ್ಮೀಕಿಮುನಿವರಂ । ಕುಶಲವರನೋವಿದಂವಿವಿಧವೈಭವದಿಂದ । ಶಶಧರನ
ಕಳೆಯುತೆರದೊಳುರಾಘವಾತ್ಮಜರ್ದಿನದಿನಕೆವರ್ಧಿಸಿದರು ॥೪೮॥ ಚೆಲ್ವರ
ಡುರೂಪಾಯ್ತೊ ವಿಮಲತೆಕವಲ್ತುದೋ । ಗೆಲ್ವದೆಸೆಗೆಳಗೊಂಡಡರ್ದಪು
ದೊಕೀರ್ತಿಯುಮು । ಡಲ್ವಸುಧೆಯೋಳ್ದ್ವಿಧಾಕೃತಿಯಾಯ್ತೊ ಸಂತಸದಬೆ
ಳಸಿನಬೆಳದಪಸುಗೆಯೊ ॥ ಸಲ್ವಕುಲದೇಳ್ಗೆಯುಸಸಿಯುಕೋಡೊಮೋಹ
ನದ । ಬಲ್ವನಲಸವಡಿಯೋಸೊಗಸಿನವಳಿಯುಫಲವೊ । ಸೊಲ್ವಿಡಲ್ವೊ
ಸತೆನಲ್ಕುಶಲವರ್ಕುಶಲದಿಂಕಣ್ಗೆಸೆದರಾಶ್ರಮದೊಳು ॥೪೯॥ ತೊಟ್ಟಿ
ಲೋಳ್ನಲಿವನೆವಮಿಲ್ಲದೆನಗುವಬಾಯ್ಗೆ । ಬೆಟ್ಟಕ್ಕಿಪೀರ್ವಪಸಿದರೆಚೀ
ರ್ವನೂಲೆಯುಂಬ । ಪಟ್ಟರಿಸೆಪೊರಳ್ವಂಬೆಗಾಲಿಡುವಮೊಳೆವಲ್ಲಜೊಲ್ಲೊ
ಗೆವತೊದಳಿನುಡಿವ ॥ ದಟ್ಟಡಿಯಿಡುವನಿಲ್ವಕೊಡುವಬೇಡುವಪರಿವ । ಬ
ಟ್ಟೆಯೊಳೋರಗುವಕಾಡುವಕುಣಿವಲೀಲೆಯುಂ । ನೆಟ್ಟನೆಕುಮಾರಕರ್ತೋರಿ
ದರ್ಜ್ಞಾನಕಿಗೆವಾಲ್ಮೀಕಿಮುನಿವರಂಗೆ ॥೫೦॥ ಬಿಡದೆಪಾಲ್ವೆರೆವುದಂತಣಿದು
ಯೋರಗೆಮಕ್ಕ । ಳೊಡನೆಧೂಳಾಟಮೊದಲಾದಲೀಲೆಗಳಪರಿ । ವಿಡಿಯಿಂ
ದೆಸೆವಕುಮಾರರ್ಗೆಮುನಿಪತಿಚೌಲಕರ್ಮಂಗಳಂಮಾಡಿಸಿ ॥ ತೊಡಗಿಸಿದ
ನಕ್ಷರಾಭ್ಯಾಸಮಂಬಳಿಕನಡೆ । ನುಡಿಯುಜಾಣ್ಮೆಯುಕಲೆಯುರಾಜಲಕ್ಷಣದ
ಚೆ । ಲ್ವಿಡಿದಲಲಿತಾಂಗದಿಂಕುಶಲವರ್ಕುಶಲವರ್ಧನರಾಗಿರಂಜಿಸಿದರು ॥೫೧॥
ಶ್ರೀಮಾಧವನಮನೋಹರದಸೌಂದರ್ಯಮಂ । ಕಾಮಜನಕನಕಾಮನೀ
ಯಲಾವಣ್ಯಮಂ । ರಾಮಚಂದ್ರನರಾಮಣೀಯಕದರೂಪಮಂತಾಳ್ದೊಗೆ
ದಸುಕುಮಾರರ ॥ಕೋಮಲಾಂಗದಸೊಬಗನಭಿವರ್ಣಿಸುವರುಂಟೆ । ಭೂ

ಮಿಯೊಳ್ವಿಗೆವಸಂತನಂಮದನನಂ । ಸೋಮನಂಪಡಿಯಿಡಲ್ಬವರು ಕ್ತಮಪ್ಪುದನೆಕುಶಲವರ್ಕಣ್ಗೆಸೆದರು ॥೫೦॥ ದ್ವಾದಶಾಬ್ದದಮೇಲೆಮುನಿ ಪಂಕುಮಾರರ್ಗೆ । ವೇದೋಕ್ತದಿಂದಲುಪನಯನಂಗಳಂಮಾಡಿ । ಭೂದೇವನಿಕರಕೆವಸಿಷ್ಠನೋಳ್ವರೆಕಾಮಧೇನುವಂಬೇಡಿತಂದು ॥ ಆದರಿಸೆಭೋಜನಸುಗಂಧಾಕ್ಷತೆಗಳಿಂದ । ಲಾದುದತಿವಿಭವದಿಂದುತ್ಸವಂಬಳಿಕತರು । ಣಾದಿತ್ಯಸನ್ನಿಭರೊಗಿದರ್ಜ್ಞಾನಕಿಯಚಿತ್ತಕಾನಂದವಾಗೆ ॥೫೨॥ ಸರ್ವಕರ್ಮದವಿಧಿಯನಖಿಳನಿಗಮದಕಡೆಯ । ಸರ್ವಶಾಸ್ತ್ರದಬಗೆಯನುಡಿದಥರ್ವದನೆಲೆಯ । ಸರ್ವೇಶನೀತಿಗಳನಿಕ್ಷ್ವಯವನ್ಯದನಾಂಗೋಪಾಂಗವಾಗಿಬರಿಸಿ ॥ ತವಾರ್ಯಯೊಳಾಕುಮಾರರ್ಗೆಮುನಿನಾಥಂಥ । ಸರ್ವೇದಮಂಶಿಕ್ಷೆಗೈದುರಾಮಾಯಣವ । ನೀರ್ವರುಂಪಾಡುವಂತೋದಿಸಿದನತಿಮಧುರಭಾವದಿಂತುದಿವೊದಲ್ಗೆ ॥೫೪॥ ಸೀತೆನಲಿವಂತೆವಾಲ್ಮೀಕಿಮೆಚ್ಚುವತೆರದೊ । ಖಾತಪೋವನದಮುನಿಗಣವ್ಯದಕೊಂಡಾಡ । ಲಾತರುಣರೀರ್ವರುಂಮಧುರವೀಣೆಗಳಮೇಳಾಪದಾಲಾಪಂಗಳ ॥ ಗೀತದೊಳ್ಸಕೀರ್ಣಶುದ್ಧಸಾಳಂಗದಿಲ । ಯಾತಿಶಯಮನೆಪಾಡುವರ್ದೇವನಗರಿಯನಿ । ಕೇತನಶ್ರೀಪತಿಯಚಾರಿತ್ರಮಪ್ಪರಾಮಾಯಣದನನುದಿನದೊಳು ॥೫೫॥

ಸಂಧಿ ೧೯ಕ್ಕೆ ಪದ್ಯ೯೯ಕ್ಕೆ ಮಂಗಳಮಸ್ತು.

---

## ಇಪ್ಪತ್ತನೆಯ ಸಂಧಿ.

ಸೂ. ರಘುವರನತುರಗಮೇಧಾಧ್ವರದಕುದುರೆಯನ । ಲಘುಪರಾಕ್ರಮಿಲವಂತರಳತನದಿಂಕಟ್ಟಿ । ಲಘಟಿತಮನಿಸಿತುಶತ್ರುಘ್ನಲಕ್ಷ್ಮಣರತಳತಂತ್ರಕ್ಕೆಬಿಡಿಸಿಕೊಳಲು

ಹಿಮಕರಕುಲೇಂದ್ರಕೇಳ್ವಾಲ್ಮೀಕಿಮುನಿಪನಾ । ಶಮದೋಳ್ಸಮಸ್ತಕಲೆಗಳನರಿದುಕಾಕಪ । ಕ್ಷಮನಾಂತುಜಾನಕಿಯಶುಶ್ರೂಷೆಯೋಳ್ಸಂದುಮಿಷಿಯುಚಿತ್ತಕ್ಕೆಬಂದು ॥ ಯಮಳರಿರೆಕಂಡುಸಂಪ್ರೀತಿಯಿಂತಪಸೋ । ತ್ತಮನಿತ್ತನಿಷುಚಾಪಚರ್ಮಖಡ್ಗಂಗಳಂ । ರಮಣೀಯಕವಚಕುಂಡಲಕಿರೀಟಂಗಳಂತನ್ನಯತಪೋಬಲದೊಳು ॥೧॥ ಅವರ್ಗಳಂತಿರಲಯೋಧ್ಯಾಪುರದೊಳತ್ತಲಾ । ಭುವನಖಿಳಧರಣಿಯಂಪಾಲಿಸುತಸಾಖ್ಯನು । ಭವದೊಳಿಂದಿದರಾವಣನವಧೆಯೊಳಂದುಬಂದಾಬ್ರಹ್ಮಹತಿತನ್ನನು ॥ ಅವಘಡಿಸಲದಕೆನಿಷ್ಕೃತಿಯಾವುದೆಂದುನಾ । ರುವನಿಗಮದರ್ಥಮಂತಿಳಿದುಹಯಮೇಧಮಂ । ತವನೆಗಳ್ವನಾಗಿನಿಶ್ಚೈಸಿಕರೆಸಿದಂವರವಸಿ

Funding: Tattva Heritage Foundation,Kolkata. Digitization: eGangotri.



ಷ್ಠಾದಿಗಳನು ||೨|| ವಾಮದೇವಾತ್ರಿಗಾಲವಗುರುವಸಿಷ್ಠವಿ | ಶ್ವಾಮಿತ್ರ
ರಂಕರೆಸಿಹಯಮೇಧಲಕ್ಷಣವ | ನಾಮುನಿಗಳಂಕೇಳ್ದನುಜ್ಞೆಗೊಳಲವರಿ
ದಕೆನಿಜಪತ್ನಿವೇಳ್ಕುಮೆನಲು || ಹೇಮನಿರ್ಮಿತಮಾದಜಾನಕಿಯನಿರಿಸಿ
ಕೊಂ | ಡೀಮಹಾಯಜ್ಞಮಂನಡೆಸುವೆಂತಾನೆಂದು | ರಾಮಚಂದ್ರಂನಿಖಿ
ಳಋಷಿಗಣನೊಡಂಬಲಿಸಿಶಾಲೆಯುಂಮಾಡಿಸಿದನು ||೩|| ಬಳಿಕವೇದೋಕ್ತ
ಪ್ರಕಾರದಿಂದೀಕ್ಷೆಯಂ | ತಳೆದುರಘುನಾಥಂತುರಂಗಮಂಪೂಜೆಗೈ | ದಿ
ಳೆಯೊಳ್ತಿರಿಸಲದರಪಣೆಗೆತಂನಗ್ಗಳಿಕೆಯುಂಬರೆದಪತ್ರಿಕೆಯನು || ಅಳವ
ಡಿಸಿಕೊಡೆಮೂರಕ್ಷೋಹಿಣಿಯಮೂಲ | ಬಲಸಹಿತವೀರಶತ್ರುಘ್ನನಂ
ಕಾವಲ್ಗೆ | ಕಳುಹಿಬಿಡಲಾಹಯಂತಿರುಗುತಿರ್ದುದುಧರೆಯಮೇಲಖಿಳದೆ
ಸೆದೆಸೆಯೊಳು ||೪|| ಬಲ್ಗಯ್ಯನೃಪರಂಜಿತಡೆಯದರಘೂದ್ವಹನ | ಸೊ
ಲ್ಗೇಳಿನಮಿಸಲಿಳೆಯೊಳ್ತಿರಿಸುತಧ್ವರದ | ನಲ್ಗುದುರೆಬಂದುವಾಲ್ಮೀಕಿ
ಯನಿಜಾಶ್ರಮದವಿನಿಯೋಗದುಪವನದೊಳು || ಪುಲ್ಗಳಪಸುರ್ಗಳಸಪ್ಪೊ
ಕ್ಕಡಾತೋಟಗಾ | ವಲ್ಗೆತನ್ನೊಡನಾಡಿಗಳಕೂಡೆಲೀಲೆಮಿಗೆ | ಬಿಲ್ಗೊಂ
ಡುನಡೆತಂದವಂಕಂಡನರ್ಚಿಸಿದವಾಜಿಯಂವೀರಲವನು ||೫|| ಎತ್ತಣತು
ರಂಗಮಿದುಪೊಕ್ಕುಪೂದೋಟಮಂ | ತೊತ್ತುಳದುಳಿವುದೆವಾಲ್ಮೀಕಿಮು
ನಿನಾಥನೇ | ಪೊತ್ತುಮಾರ್ಯೆವುದೆಂದೆನಗೆನೇಮಿಸಿಪೋದನಬ್ಧಿಪಂಕರಸ
ಲಾಗಿ || ಮತ್ತೆವರುಣನಲೋಕದಿಂಬಂದುಮುಳಿದಪನೆ | ನುತ್ತೆಹಯದೆ
ಡೆಗೆನಡೆತಂದುನೋಡಲ್ಕದರ | ನೆತ್ತಿಯೊಳ್ಮೆರೆವಪಟ್ಟದಲಿಖಿತಮಂಕಂ
ಡುಲವನೋದಿಕೊಳುತಿರ್ದನು ||೬|| ಉರ್ವಿಯೊಳ್ಖ್ಯಾಸಲೆಪಡೆದಕ್ಷುವರಂ
ರಾಮ | ನೋರ್ವನೇವೀರನಾತನಯಜ್ಞತುರಗಮಿದು | ನಿರ್ವಹಿಸಲಾ
ರ್ಪರಾರಾದೊಡಂತಡೆಯಲೆಂದಿರ್ದಲೇಖನವನೋಡಿ || ಗರ್ವಮಂಬಿಡಿಸ
ದಿರ್ದೊಡೆತನ್ನಮಾತೆಯುಂ | ಸರ್ವಜನಮುಂಬಂಜೆಯನ್ನದಿರ್ದಪರೆತನ
ಗುರ್ವತೋಳ್ಗಳಿವೇತಕೆಂದುಸಲೆವಾಸೆಯುಂತೊಟ್ಟುಲವನುರಿದೆದ್ದನು ||೭||
ತೆಗೆದುತ್ತರೀಯಮಂಮುರಿದುಕುದುರೆಯಗಳಕೆ | ಬಿಗಿದುಕದಳಿದ್ರುಮಕೆ
ಕಟ್ಟಲ್ಕೆಮುನಿಸುತ | ರ್ಮಿಗೆನಡುಗಿಬೇಡಬೇಡರಸುಗಳವಾಜಿಯುಂಬಿಡುಬ
ಡಿವರೆಮ್ಮನೆನಲು || ನಗುತಪಾರ್ವರಮಕ್ಕಳಂಜಿದಡೆಜಾನಕಿಯ | ಮಗ
ನಿದಕೆಬೆದರುವನೆಪೋಗಿನೀವೆಂದುಲವ | ನಗಡುತನದಿಂದಬಿಲ್ದಿರುವನೇರಿ
ಸಿತೀಡಿಜೆಗೈದುನಿಂದಿರ್ದನು ||೮|| ಕುದುರೆಗಾವಲಸುಭಟರಸಿತರೊಳೊದ
ಗಿಬಂದು ! ಕದಳೀದ್ರುಮಕ್ಕೆಗಟ್ಟಿರ್ದತುರುಗಮಂಕಂಡು | ಸದಮಲ
ಬ್ರಹ್ಮಚಾರಿಗಳನಾರ್ಭಟಿಸಿವಾಜಿಯನೇಕೆಬಿಗಿದಿರೆನಲು || ಬೆದರಿನಾವಲ್ಲಿ

ವಂಬೇಡಬೇಡೆನೆಬಂಧಿ । ಸಿದನೆಂದುಲವನಂಕರಾಗ್ರದಿಂತೋಱಿಸಿದ । ರ
ಥಚರೀತಂತರಳನರಿಯದೆಸಗಿದನೆಂದುಬಿಡಹೇಳಿಘರ್ಜಿಸಿದರು ॥೯॥ ವಿಕ್ರ
ಮಮಿದೇಕೆಬಿಡೆನಶ್ವಮಂಮೋಣ್ಬಿಡಲು । ಪಕ್ರಮಿಸಿದವರ್ಗಳಕರವನರಿವೆ
ನೆನಲವರ । ತಿಕ್ರಮಿಸಿವಾಜಿಯಂಬಿಡಿಸಲ್ಕೈತರಲವರಕ್ಕೈಗಳಂಕೋಪದಿಂ
ದ ॥ ವಕ್ರಮಿಲ್ಲದಕೋಲ್ಗಳಿಂದೆಚ್ಚು ಕಡಿದೊಡನೆ ।ಶಕ್ರನದ್ರಿಯಮೇಲೆಮ
ಳೆಗರೆವೊಲಾಸೈನ್ಯ । ಚಕ್ರಮಂಮುಸುಕಿದಂವೀರಲವನಾಕ್ಷಣದೊಳೇನೆಂ
ಬೆನದ್ಭುತವನು ॥ ಬಾಲಕನಮೇಲೆಕವಿದುದುಬಳಿಕಮುಳಿದುಹಯ। ಪಾ
ಲಕಬಲಂಕರಿತುರಗರಥಪದಾತಿಗಳ । ಜಾಲಕವನೋರ್ವನೆನ್ನದೆಬಾಣಪ
ರಶುತೋಮರಶಕ್ತಿಸುರಗಿಗಳೊಳು ॥ ಕಾಲಕಬಳಪ್ರಾಣಿಗಳನೈದೆಸಂಹ
ರಿಸ । ಶೂಲಧರನೆನಲವಂಕೊಲುತಿರ್ದನನಿಬರಂ । ಕೋಲಕಡುಮಳೆಗರ
ದುಮುನಿಪನಿತ್ತಕ್ಷಯನಿಷಂಗಮರದಿರೆಚೆನ್ನೊಳು ॥ ಸಂಖ್ಯೆಯಿಲ್ಲದೆಮೋ
ಲೆಬೀಳ್ವಕೈದುಗಳೆಲ್ಲ । ಮಂಖಂಡಿಸುತ್ತೊಡನೆಮುತ್ತಿದರಿಚತುರಂಗ ।
ಮಂಖಾತಿಯಿಂದಸಂಹರಿಸುತೊಂದೊಂದುರಿಪುಬಾಣಕ್ಕೈದಂಬುಗಳನು ॥
ಪುಂಖಾನುಪುಂಖದಿಂದೆಸೆವಬಾಲಕನೆಸುಗೆ । ಯಿಂಖಿಲಪ್ರಾಯಮಾಗಿರ್ದ
ನಿಜಬಲಜಾಲ । ಮಂಖರಾಂತಕನನುಜನೀಕ್ಷಿಸಿಕನಲ್ದೇರಿದಂಮಹಾಮಣಿ
ರಥವನು ॥೧೦॥ ದುರಿತಗಣಮಿರ್ದಪುದೆಗೌತಮಿಯೊಳಾಳ್ದಂಗೆ । ಪರಮ
ಯೋಗಿಗೆಭವದಬಂಧನಂಬಂದಪುದೆ । ಪರಸೈನ್ಯದುರುಬೆರಘುಕುಲಜ
ಗೆ ತೋಱಪುದೆಕೇಳವನಿಪಾಲತಿಲಕ ॥ ತರಳನಾದೊಡೆಲವಂಬೆದರುವನೆ
ನಿಮಿಷದೋ । ಳ್ಪರಗಡಿದನನಿತುಚತುರಂಗಮಂಶತ್ರುಘ್ನ । ನುರುವಣೆ
ಸೆತತೆದನೆರಗುವಸಿಡಿಲಗರ್ಜನೆಗೆಮಲೆವಮರಿಸಿಂಗದಂತೆ ॥೧೧॥ ಒತ್ತಿಬ
ಬಹಿಶತ್ರುಘ್ನನುರುಬೆಗೆವಲಂತನ್ನ । ಚಿತ್ತದೊಳ್ಬ್ರಹ್ಮೇಶಮಂತ್ರಮಂಸ್ಮ
ರಿಸುತ್ತ । ಮತ್ತೆನಿರ್ಭಯನಾಗಿಮಾರಾಂತಡಾತನಲವಲವೋನೀಂಪಸುಳೆ
ನಿನಗೆ ॥ ಕೆತ್ತಿಗರದಾರಕಟನಾಯದಿರ್ಪೋಗೆನುತ । ಹತ್ತುಶರದಿಂದೆಚ್ಚಡ
ವನಬಾಣಂಗಳಂ । ಕತ್ತರಿಸಿಕೂಡೆಭರತಾನುಜಕಾರ್ಮುಕದಹೆದೆಯನಿಕ್ಕ
ಡಿಸೈದನು ॥೧೨॥ ತರಳನಪರಾಕ್ರಮಕೆಮೆಚ್ಚಿದಂಮತ್ತೊಂದು । ತಿರುವ
ನಳವಡಿಸಿದಂಕಾರ್ಮುಕಕೆಶತ್ರುಘ್ನ । ನಿರದೆಕಣೆಮೂರರಿಂಬಾಲಕನಪಣೆ
ನೆಚ್ಚಿಡೆನಗುತಪರಿಮಳಿಸಿದ ॥ ವಿರಹಿಗಳನಂಜಿಸುವಪೂಗೋಲ್ಗಳಾಯ್ತು
ನೀಂ । ನುರುವಣಿಯಬಾಣಗಳೆನುತಭರತಾನುಜನ । ತುರಗಸಾರಥಿವ
ರೂಥಧ್ವಜಶರಾಸನಂಗಳನನಂತಡೆಗಡಿದನು ॥೧೩॥ ಕೋಪದಿಂಪೊಸರ
ಥಕಡರ್ದುಶತ್ರುಘ್ನನುರು । ಚಾಪಮಂಕೊಂಡುದಿವ್ಯಾಸ್ತ್ರದಿಂದಸುತಬ

ರ । ಲಾಪಥದೊಳೆಣಿಕೆಗೈದಂಣನಂಪಾತೆಯುಂನೆನದುಮನದೋಳ್ಮರು
ಗುತ॥ ಆಪಸುಳೆಮತ್ತೆ ಕಡುಧೈರ್ಯಮಂತವೆತಾಳ್ದಿ । ನೋಪಮದೊಳ್ಕೈದು
ವಪಗೆಯುಶರವನೆಡೆಯೋಳ್ಪ್ರತಾಪದಿಂಕತ್ತರಿಸಿಕೆಡಹಲ್ಕೆಬಯಲಾಯ್ತು
ಕೂಟಸಾಕ್ಷಿಯುಸಿರಿನೊಳು ॥೧೬॥ ವಿಸ್ಮಯಾನ್ವಿತನಾದನೆಂದುಶತ್ರುಘ್ನ
ನಾ । ಕಸ್ಮಿಕದಶಿಶುವಿನಪರಾಕ್ರಮಕೆಬಳಕವಿಲ । ಯುಸ್ಮರಾಂತಕನಪಣೆ
ಗಂಣಿಂದಪೂರಮಡುವಘಳ್ಪರಿಯುತೆರದೊಳೆಸೆವ ॥ ರಶ್ಮಿಗಳನುಗುಳ್ವ
ಮೋಘದಬಾಣಮಂಪೂಳು ।ತಸ್ಮದಿಷುಘಾತಮಂನೋಡೆನುತೆಸಲ್ಕೆಮಂ
ದಸ್ಮಿತದೊಳಾಸರಳನೆಚ್ಚು ಲವನೆಡೆಯೊಳಿಕ್ಕಡಿಗೈದನೇವೇಳ್ವೆನಿನ್ನು ॥೧೭
ಅರಸಕೇಳಾಶರದೊಳರ್ಧಮವನಿಗೆಕೆಡೆದು । ದಿರದಮೋಘಾರ್ಧಮಿಾ
ಲವನಕಾರ್ಮುಕವ । ನರಿದುಕೊಂಡೆದೆಯನುಚ್ಚಳಿಸೆಮ್ಯುವುರದೂರಗಿ
ದಂಪಸುಳೆಮೂರ್ಛೆಯಿಂದ ॥ ಹರುಷದಿಂದಾರ್ದುಳಿದದರಿಬಲಂನಡೆತಂ
ದು ॥ ಕರುಣದಿಂತರಳನಂನೋಡಿರಾಪಾಕೃತಿಯೊ । ಲಿರೆಮೋಹದಿಂತ
ನ್ನರಥದಮೇಲಿರಿಸಿಕೊಂಡೈದಿದಂಶತ್ರುಘ್ನನು । ಕದಳಿಯೋಳ್ಕಟ್ಟಿರ್ದಕು
ದುರೆಯುಂಬಿಡಿಸಿನಗ । ರದಕಡೆಗೆಪಡೆವರಸಿತಿರುಗಿದಂಶತ್ರುಘ್ನನು । ರವಿ
ಘೋಷದೊಳಿತ್ತಲೋಡಿದರಾಪ್ತಸನಟುಗಳವನಿಸುತೆಯುಪ್ಪೊರೆಗೆ ॥ ಕದ
ನದೋಳ್ನಡೆದವೃತ್ತಾಂತಮಂಪೇಳಲ್ಕೆ। ರುದಿತದಿಂಕೈವರಳ್ಗಳನೊತ್ತಿಕೊ
ಳುತನಿಜ । ಸದನಮಂಪೊರವಟ್ಟುಹಲುಬಿದಳ್ಸುತನಶೀಲರೂಪ್ರಗಳನನ
ಸಿ ॥೧೯॥ ಬಸರಿದನುಕಂಬನಿಗಳಂಗಲತೆಕಂಪಿಸಿತು । ಪೊಸದಳೊಡಲಂ
ಕೊಡೆಕೂಡೆಸುತಮೋಹದಿಂ । ದಸವಳಿದುಕಂದನೆಲ್ಲಿರ್ದಪಂಕಾದಿದನೆ
ಪಗೆಯುಕೈಗೊಳಗಾದನೆ ॥ ಪಸುಳೆಗೇನಾಯ್ತೊಮಗನೆಂತುನೊಂದನೊತ
ರಳ । ನಸುವಿಡಿದಿಹನೊಬಾಲಕನಮುದ್ದುಮೊಗವನ್ನು । ದಸೆಗೆಸ್ಸೆರಿಸ
ದೊಜೀವಿಸಿಕೆಟ್ಟೆನೆಂದುಹಲುಬಿದಳಂಬುಜಾಕ್ಷಿಮರುಗಿ ॥೨೦॥ ಅನ್ನೆಗಂ
ಬಂದನಗ್ಗದಸಮಿತ್ಪುಷ್ಪಂಗೆ । ಳನ್ನೆತ್ತಿಯೋಳೊಪ್ಪುತ್ತುಕೊಂಡುಕುಶನ
ಳುತಿರ್ಪ ॥ ತನ್ನತಾತಂಕಂಡಿದೇನದ್ಭುತಪ್ರಳಾಪಂನಿನಗಪೇಳೆನಲ್ಕೆ ॥ ಬ
ನ್ನಮಂಕೇಳ್ಮಗನೆಹಯವೊಂದುಬರಲದಂ । ನಿನ್ನತಮ್ಮಂಕಟ್ಟಲರ
ಸುಗಳ್ಪಿಡಿದೊಯ್ದು । ರಿನ್ನೇವನೆಂದುಜಾನಕಿನುಡಿಯೆರೋಷದಿಂದಾಕು
ವರನಿಂತೆಂದನು ॥೨೧॥ ಶೋಕಮೇಕಿದಕೆಹರಣವನೊಯ್ದಡಂತನಕ ।
ಲೋಕಮಂಸುಡುವನಲ್ಲಹುದೆಂದೂಡಜಹರಿಪಿ। ನಾಕಿಗಳನುರುಪ್ರವೇಂಪಿ
ಕ್ಕರಸುಗಿರಸುಗಳಪಾಡಾವುದೀಗತನಗೆ ॥ ಆಕವಚಖಡ್ಗಧನುಶರಕಿರೀಟಂ
ಗಳಂ । ತಾಕಳವಳಿಸದಿರೆಂದವನಿಜೆಗೆನುಡಿದೊಡವ । ಳಾಕುಶಂಗೊಳಗ

ಣಿಂದಂಗಿಯುಂತಂದಳವಡಿಸಿಪರಸಿಬೀಳ್ಕೊಟ್ಟಳು ॥೨೨॥ ರಾಯಕೇಳ್ಕುಶನ
ವಿಕ್ರಮವನಭಿವರ್ಣಿಸಲ।ಜಾಯುಮುಳ್ಳನ್ನ ಗಂತನಗೆತ್ತೀಲದುಬಳಿಕ।ತಾ
ಯಂಘ್ರಿಗೆರಗಿಬೀಳ್ಕೊಂಡುತಾರಕನಪೋರ್ಬಡೆಗೆಗುಪ್ತನೈದುವಂತೆ ॥ ವಾ
ಯುವೇಗದೊಳೊದಗಿವೀರಭರತಾನುಜನ । ಪಾಯದಳವೆಂಪ್ರೋಗಬೇಡ
ಬೇಡೆನುತಸಲೆ । ಸಾಯಕದಮಳೆಗಳಂಕರೆಯುಲ್ಕೆತಿರುಗಿದುದುಮತ್ತಶತ್ರು
ಘ್ನಸೇನೆ॥೨೩॥ಪದ್ದರಗಿದುನೃಭಟರಮಂಡಗಳವೇಲುಡಿದು।ಬಿದ್ದುವಚಲ
ಧ್ವಜಪತಾಕೆಗಳ್ಕಡೆಘೂ । ಳಿದ್ದುಬಿರುಗಾಳಿಬೀಸಿದುದುಕಂಬನಿಗರದ
ವಂದಾನೆಕುದುರೆಗಳ್ಗೆ ॥ ಪೊದ್ದಿತುತ್ಪಾತಭಯಕಾಬಲಂಗಜಬಜಿಸು । ತಿ
ದ್ದುದೀಚೆಯೊಳೀಕುಶಂಪೋಗದಿರಿನಿಲ್ಲಿ।ಕದ್ದೈದುವರೆತುರಗಸಹಿತಲವನಂ
ಬಿಟ್ಟುನಡೆಯಿರೀವೆನುತೆಚ್ಚನು ॥೨೪॥ ಆಬಾಲಕನಬಾಣಘಾತದಿಂದಳವಳಿ
ದು । ದೀಬಲದಮುಂದಿಮತ್ತೀಗೆಳೆವನೋರ್ವನಿದ । ಕೋಬಂದನೆಂದೆಸುವ
ಬೆಸೆಗಳ್ಗೆದಸೆಗೆಟ್ಟುಸೇನೆಗಜಬಜಿಸೆಕಂಡು ॥ ಶಾಬಮೃಗಮಂಜಪ್ರದಗಣ
ಪ್ರುಶಿಯನೆನುತಾವು । ಹಾಬಾಹುಶತ್ರುಘ್ನನಾಗನಿಜದಳಪತಿಯು । ನೇಬೇ
ಗಕಳುಹಿದೊಡವಂಸಕಲಸೇನೆಸಹಿತೈದಿದಂಕುಶನಮೇಲೆ ॥೨೫॥ ಬಳಿಕಶ
ತ್ರುಘ್ನನನಿರೂಪದಿಂತಿರುಗಿದಂ।ದಳಪತಿಸಮಸ್ತಬಲಸಹಿತಾಕುಮಾರನಂ।
ಬಳಸಿದುದುತಮತಮಗೆವಿವಿಧಾಯುಧಂಗಳಂಝುಳಪಿಸುತವಹಿಲದಿಂದ ॥ಅ
ಳವಿಗೊಳ್ತೀವಿದಾಳ್ಕುದುರೆತೇರಾನೆಗ । ಳ್ಕೊಳುಗುಳದೊಳನಿತುಮಂಸ
ವರಿಸೇನಾನಿಯುಂ ।ಕಳುಹಿದಂಜವನೊಳಗ್ಗವನಸಾರಥಿರಥಾಶ್ವಂವರಸಿಪೀ
ರಕುಶನು ॥೨೬॥ ಆದಳಪತಿಯುತಮ್ಮನೋರ್ವನಗನೆಂಬವಂ । ಕಾದಿಮಡಿ
ದಣ್ಣನಂಕಾಣುತ್ತಖತಿಯಿಂವ ।ಹಾದಂತಿಯಂಕುಶನಮೇಲೆಯಂಕುಶದಿಂ
ದಿರಿದುನೂಕಿದಂಕುಶಲದ॥ ಜೋಧಗಾಳಗದಿಂದಬಳಿಕೆರಡುಸೀಳಾಗಿ।ಮೇ
ದಿನಿಗೆಬೀಳ್ವಂತಿಭವನೆಚ್ಚವನಥನು ।ಛೇದವಂಮಾಡಲಾತಂಪಲಗೆಖಡ್ಗ
ಮಂಕೊಂಡಿವಂಗಿದಿರಾದನು ॥೨೭॥ ಕಿತ್ತಡಾಯುಧದೊಳೈದುವನಗನಹ
ಸ್ತಮಂ । ಕತ್ತರಿಸಲಶಗ್ಯೆಯೊಳೊಂದುಗಷ್ಟೆಯಕೊಂಡು ।ಮೇಲ್ವಾಯ್ದ
ಡಾಕರವನುಂಕಡಿಯೆಬಾಹುಗಳಿಂದಪೊಯ್ವನೆಂದು ॥ಒತ್ತಿನಡೆತಂಲೆರಡ
ತೋಳ್ಗಳಂಕೊರ್ಗಣೆಯೊಳು । ತ್ತರಿಸೆಕಾಲ್ಗಳಿಂದೊದೆದುಕೆಡಪುವಭರ
ದೊಳೊತ್ತರಿಸಲಾಗತೊಡೆಜಾನುಪಾದಂಗಳಂಕುಶನೆಚ್ಚುತುಂಡಿಸಿದನು॥
ಬಾಹುಯುಗಮೂರುದ್ವಯಪೋದಕಾಯದಿಂ।ಸಾಹಸಂಗೈದವಂಮೇಲ್ವಾ
ಯ್ದುಚಂದ್ರಂಗೆ । ರಾಹುವಂಘೈಸುವಂತುರುವಣಿಸೆಕುಶನಳುಕದೆಚ್ಚವನ
ತಲೆಯನರಿಯೆ ॥ ವಾಹೇಶ್ವರಾಭರಣದೊಳ್ಮೆರೆದುದಾಶಿರಂ।ಕಾಹುರದ

ಕುವರನಧಟಂಕಂಡುಖಾತಿಯಿಂ । ದಾಹವಕೆಬಿಲ್ದುಡುಕಿತರಳನಂಕೆಣಕಿ
ದಂಬಂದುಕಲಿಶತ್ರುಘ್ನನು ॥೨೯॥ ಕಡುಮುಳಿದುಶತ್ರುಘ್ನನೊಂಭತ್ತುಬಾ
ಣದಿಂ । ಬಿಡದೆಚೆಲ್ಲಿಡಾಕುಶಂಕೋಪದಿಂದವನತೇ । ರ್ಪಡಿಯಾಗೆಸಾರ
ಥಿರಥಾಶ್ವಂಗಳೆಡೆಗಲೆಯೆಪೇರುರದೊಳು ॥ ನಿಡುಸರಳ್ಕೀಲಿಸಲ್ಕರದನಂ
ಬುಗಳನೊಡ । ನೊಡನೆಕೂರ್ಗಣೆಗಳಾರಂಮತ್ತೆವಕ್ಷದೋ । ಳೊತ್ತಿಡಿಸಿ
ದಂಕುಶನದರಘಾತಿಗೆವರೂಥದಿಂಭರತಾನುಜಂಬಿದ್ದನು ॥೩೦॥ ಗಿರಿತಟ
ದೊಳೊಂದೊಂದರೊಳ್ಪೆಣಗಿಸೋಲ್ದಮದ। ಕರಿಧರೆಗುರುಳ್ವಂತೆಪೂರಾ
ಯಘಾಯದಿಂ । ದಿರದೆಶತ್ರುಘ್ನಂಮಹೀತಳಕೆರಥದಿಂದಬೀಳ್ವನಿತರೊಳ್ಪ
ಡೆಯೊಳು ॥ ದೊರೆದೊರೆಗಳೆಲ್ಲರುಂಕೈಗೊಂಡುಕಾದಿಸಂ । ಗರದೊಳ್ಪತಿ
ತರಾದರಾಕುಶನಬಾಣದಿಂ । ಪಿರಿದುಕನ್ಯಾವಿಕ್ರಯಂಗೈದುಜೀವಿಸುವಮಾ
ನವನಪಿತೃಗಳಂತೆ ॥೩೧॥ ಬಹುದುರಿತಮಂಧರ್ಮದಿಂದೊರೆಸುವಂತೆಕು
ಶ । ನಹಿತರಂತನ್ನಭುಜಬಲದಿಂದಸವರಿದಂ । ಮಹದಾಹವದಮೂರ್ಛೆ
ತಿಳಿದನಿತರೊಳ್ಕಂಡನಣ್ಣನಂಬಳಿಕಲವನು ॥ ಸಹಜಾತರೀರ್ವರುಂಕೂ
ಡಿದರ್ಪವನಸುತ । ವಹರಂತೆಮತ್ತೆಹಯಮಂಕಟ್ಟಿಕೊಂಡುವಿ । ಗ್ರಹಕೆ
ನಿಲಲರಸನಲ್ಲಿಗೆದೂತರಂಕಳುಹಿದರ್ಬಲದೊಳುಳಿದಭಟರು ॥೩೨॥ ಚರು
ಪುರೋಡಾಶತಂಡುಲತಿಲವ್ರೀಹಿಘೃತ। ದುರುಹವಿರ್ಧೂಮದಿಂದರುಣಲೋ
ಚನನಾಗಿ। ಪರಿಮೇಖಲಾಶೃಂಗಮೃಗಚರ್ಮಧರನಾಗಿನವನೀತಲಿಪ್ತನಾಗಿ॥
ಪರಮಮುನಿಗಳ್ವೆರಸಿಕನಕಜಾನಕಿಸಹಿತ । ಭರತಲಕ್ಷ್ಮಣರೊಡನೆಕ್ರತ
ಯಜ್ಞಶಾಲೆಯೋ । ಳ್ವರದೀಕ್ಷೆಯಿಂದಕುಳ್ಳಿರ್ದೆಸೆವರಾಮನಂಕಂಡುಚರ
ರಿಂತೆಂದರು ॥೩೩॥ ಅವಧರಿಸುಜೀಯನಿನ್ನಧ್ವರದಚಾರುಹಯ। ಮವನಿಯೊ
ಳವಿಘ್ನದಿಂತಿರುಗಿಬಂದುದುಬಳಿಕ । ಲವನೆಂಬಬಾಲಕಂಕಟ್ಟಿದಂಕಡುಗಿ
ದೊಡೆಬಲಮೆಲ್ಲಮಂಕೊಂದನು ॥ ಬವರದೊಳ್ಶತ್ರುಘ್ನನಾತನಂಪಿಡಿತಂ
ದೊ । ಡವನಬಳಿವಿಡಿದೊರ್ವನೈತಂದುನಿನ್ನನುಜ । ನವಘಡಿಸೆಕೆಡೆವೆ
ಚ್ಚಿಬೀಳ್ಕೆದಂಪೇಳಲಂಜುವೆವೆಂದುಕೈಮುಗಿದರು ॥೩೪॥ ಕೇಳುತಕನಲ್ದ
ಲಘುಶತ್ರುಘ್ನನಂಪಡುಯಿಸು । ವಾಳುಂಟೆಲೋಕದೊಳ್ಪೋಗಿವರ್ಮರುಳ
ರೆಂ । ದಾಳವಾಡಲ್ಜೀಯನಿಮ್ಮಡಿಗಳಾಣೆಪುಸಿಯಲ್ಲೆಂದುಮತ್ತೆಚರರು ॥
ಪೇಳಲ್ಕೆಬೆರಗಾಗಿಮರುಗಿಲವಣಾಸುರಂ । ಕಾಳಗದೊಳೀತನಿಂದಳಿದನಾ
ಬಾಲಕರ। ತೋಳಬಲ್ಪೆಂತೊಲಕ್ಷ್ಮಣಸೇನೆಸಹಿತನಡೆಯೆಂದರಘುಪತಿನು
ಡಿದನು ॥೩೫॥ ಬಳಿಕರಾಘವನಂಘ್ರಿಗೆರಗಿಕಳುಹಿಸಿಕೊಂಡು । ತಳತಂತ್ರ
ಸನ್ನಾಹದಿಂಕಾಲಜಿತುವೆಂಬ । ದಳಪತಿಸಹಿತಸುಮಿತ್ರಾತ್ಮಜಂನಗರ

ಮುಂಪೊರಮಟ್ಟುನಡೆವಭರಕೆ ॥ ಇಳೆಸವೆದುದೇಳ್ವ ಕೆಂಧೂಳ್ಗಳಿಂದೆಂಬರ। ಸ್ಥಳವನ್ನೈದಲುತ್ಪತಾಕಾಧ್ವಜಂಗಳ್ಗೆ ದಿ। ಗ್ವಲಯಮಿಂಬಿಲ್ಲ ಘೀಳಿಡುವವಾದ್ಯ ಧ್ವನಿಗೆಪೊಸತಿದೆಂಬಂತಾಗಲು॥೩೬॥ ಪೊಡವಿಯಗಲದಲೈದುವಾನೆಗಳಸೇನೆಗಳ। ಕಡುಗಿಮುಂಬರಿವರಥರಾಜಿಗಳತೇಜಿಗಳ। ಬಿಡೆದಗಗನದೊಳಿಡಿದ ಸತ್ತಿಗೆಯಮುತ್ತಿಗೆಯಧಾಳಿಸುವಚಾಮರಗಳ ॥ ನಿಡುಪತಾಕೆಯವಿವಿಧ ಧಾತುಗಳಕೇತುಗಳ । ಜಡಿವಕೈದುಗಳಪೊಸರೋಚಿಗಳವೀಚಿಗಳ । ಪೊಡೆವತಂಬಟಪಟಹಭೇರಿಗಳಭೂರಿಗಳಸದಪಿಂದಪಡೆನಡೆದುದು ॥೩೭॥ ಪ್ರಾಣವಿಲ್ಲದೆಚೇತರಿಸಿಕೊಳಲ್ತನುವಿನೊಳ್ । ತ್ರಾಣವಿಲ್ಲದೆನೊಂದು ಗಾಯದಿಂಮರವೆಯಂ । ಕೇಣಗೊಂಡೊರಗಿಶತ್ರುಘ್ನನಳಿದುಳಿದಬಲದೊಡನೆರಾಹುಗ್ರಸ್ತದ ॥ ವೀಣಾಧರನಂತಿರಲ್ಪಡೆಸಹಿತಲಕ್ಷ್ಮಣಂ । ಕ್ಷೋಣಿಪತಿಕೇಳ್ಬಂದುಕಂಡುಸೈಪಿಟ್ಟನು । ಕಾಣಬಹುದೆನುತಕೈವೀಶಿದಂಕಾಲಜಿತುಮುಖ್ಯಸೇನಾನಿಗಳನು ॥೩೮॥ ಕಂಡರೀಚೆಯೊಳರಿಬಲವ್ಯೂಹಮಂಬರಲಿ। ಖಂಡಿಸುವೆನೆಂದೋರ್ವರೋರ್ವರೋಳ್ಮಾತ್ತಾಡಿ। ಕೊಂಡರದರೋಳ್ತನ್ನಬಿಲ್ಮುರಿದುದಾಹವದೊಳೆಂದುಲವನಗ್ರಜಂಗೆ ॥ ಚಂಡಮುನಿಪತಿಮಾಡಿದುಪದೇಶದಿಂದಕೋ। ದಂಡಮಂಪಡೆವನೀಕ್ಷಣದೊಳೆಂದೊರೆದುರವಿ। ಮಂಡಲವನೀಕ್ಷಿಸುತತರಣಿಯಂಪ್ರಾರ್ಥಿಸಿದನನುಪಮಸ್ತುತಿಗಳಿಂದ॥ ಮಿತ್ರಾಯಸೂರ್ಯಾಯಹಂಸಾಯಪೂಷ್ಣೇಸ। ವಿತ್ರೇಜಗಚ್ಚಕ್ಷುಷೇಚಂಡಘೃಣಯೇಪ । ವಿತ್ರಾಯಪಿಂಗಾಯಪುರುಷಾಯಭಾನವೇಜ್ಯೋತಿಷೇಭಾಸ್ಕರಾಯ॥ ಸತ್ರೈಕರೂಪಾಯವಿಮಲಾಯಸಾಕ್ಷಿಣೇ । ಕ್ಷೇತ್ರಿಣೇಸಹಸ್ರಕಿರಣಾಯರವಯೇಮಂದ । ಪಿತ್ರೇದಿವಾಕರಾಯಬ್ರಹ್ಮವಿಷ್ಣುರುದ್ರಾತ್ಮನೇತುಭ್ಯನಮಃ ॥೪೦॥ ಜಗಕೆನೀನೊಂದುಕಣ್ಣಾಗಿರ್ಪೆಮೋಣೆರಡು । ಬಗೆಯಪಥದೊಳ್ನಡವತಿಳಿಯಲ್ಕೆಮೂರುಮೂ। ರ್ತಿಗಳನೊಳಗೊಂಡಿರ್ಪೆಸಲೆಸಂದನಾಲ್ಕುವೇದಂಗಳೊಡಲಾಗಿತೋರ್ಪೆ ॥ ಆಗಲದೈದಂಗದೊಳ್ಕಾಣಿಸುವೆಪರಿಪರಿಯೊ । ಳೊಗೆದಾರುಋತುಗಳೊಳ್ವರ್ತಿಸುವಸಂತತಂ । ಗಗನಕೇಳಶ್ವಮಂಕೊಂಡೇಳ್ವಿದೇವಬಿಲ್ಗೊಟ್ಟುಳುಹಬೇಕೆಂದನು ॥೪೧॥ ಪತ್ತುದೆಸೆಯುಂಬೆಳಗಿಸುವಪನ್ನೆರಡುರಾಶಿ। ಗೊತ್ತಾಶೆಯಾಗಿರ್ಪೆಶಿತಪತ್ರಮಿತ್ರನಹೆ । ಮತ್ತೆ ಸಾಸಿರಕಿರಣದಿಂದೆಸೆವಲಕ್ಷಯೋಜನದಳತೆಯೊಳೊತ್ತಳಗುವೆ ॥ ಬಿತ್ತರದನಂತದೊಳ್ಸಂಚರಿಪೆದೇವನಿಂ । ನುತ್ತಮಗುಣಾವಳಿಯನೆಣಿಸಲೆನ್ನಳವೆಬಿಲ್ಲಿತ್ತುಳುಹಬೇಕೆಂದುದಿನಮಣಿಯನಾಲವಂನುತಿಸಿದಂಭಕ್ತಿಯಿಂದ ॥೪೨॥ ಅವನೀಶಕೇಳ್ಬಳಿಕಲವನವಿಮಲಸ್ತುತಿಗೆ

ರವಿನುಷಿ ಕೊಟ್ಟನಾತನಕ್ಕೈಗೆದಿವ್ಯಚಾಪ । ಪವನದಂಕೊಂಡಗ್ರಜಂಗೆ
ತೋರಿಸಿಮುನಿಪವಾಲ್ಮೀಕಿಬಾಳುಗೆನುತ ॥ ಪವಣನಾರೈದುಬಿಲ್ಟಿರುವ
ನೊದರಿಸಿದನು । ತ್ಸವದಿಂದಕುಶನುಗ್ರಕೋದಂಡಮಂಪಿಡಿದ । ರವರೀ
ರ್ವರುಂಮತ್ತೆ ಪವನಪಾವಕರಂತೆಪೊಕ್ಕರರಿಬಲವನೆಸುತ ॥೪೩॥ ನೂರಾ
ಳಿಗೊಂದುಹೆಮ್ಮಿರುತಿರ್ಪ್ಪದಾಹಯಂ । ನೂರಕಿರುತಿಹುದುಮೇಣೊಂ
ದುರೆಥವಾರಥಂ । ನೂರಕಿಭವೊಂದಿರ್ಪ್ಪದಿಂತಿಭಸಹಸ್ರಮಿರೆಭ್ರಮಿಯೆಂ
ದೆನಿಸಿಕೊಂಬುದು ॥ ಮಾರಿಯೋಜನದಳತೆಯೊಳ್ ಭ್ರಮಿಗಳೀರೈದು ।
ನೂರಿಟ್ಟಣಿಸಿನಡೆದುಬಂದೊಡಾಸೇನೆಯುಂ । ತಾರುತಟ್ಟಾಗಿಕೆಡಹಿದರೊಂ
ದುನಿಮಿಷದೊಳ್ಕುಶಲವರದೇವೇಳ್ವೆನು ॥೪೪॥ ಹೂಣೆಹೊಕ್ಕೆಸುತಬಾ
ಲಕರೈದಲಕ್ಷ್ಮಣಂ । ಕಾಣುತಿದಿರಾದಂಕುಶಂಗಖಿಳವಾಹಿನೀ । ಶ್ರೇಣಿಸ
ಹಿತುರುಬಿದಂಕಾಲಜೆತುವಾಲವನವೇಲೆವಡಬಾಗ್ನಿಯೆಡೆಗೆ ॥ ಮಾಣದೆ
ರಗುವಕಡಲದಲದಂತೆಕವಿದುದುಕೃ । ಪಾಣತೋಮರಪರಶುಕುಂತಮು
ದ್ಗರಚಕ್ರ । ಬಾಣಶಕ್ತಿಗಳಘೋರಪ್ರಹಾರಂಗಳಿಂದಾಸಕಲಸೇನೆಮುಳಿ
ದು ॥೪೫॥ ಏಸುಭಟರಂಬುಗಳನೆಸುವರೈಸಂಬುಗಳ । ನೇಸುಭಟರಂಗ
ದೊಳ್ಕಾಣಿಸಿದನಾಬಲದೊ । ಳೇಸುಕೈದುಗಳೊಳೊದಗಿದವೈಸುಕೈದು
ಗಳನೆಲ್ಲಮಂತಡೆಗಡಿದನು ॥ ಏನಾನೆಕುದುರೆಗಳ್ಕವಿಯಲೈಸಂಸೀಳ್ದ । ನೇ
ಸುತೇರುರವಣಿಸಲೈಸರಥಟಂಮುರಿದ । ನೇಸುಮಂದಿಗಳುರುಬಿತ್ತೈಸು
ನುಂಕೊಂವನಿನ್ನೇಸುಸಾಹಸಿಯೊಲವನು ॥೪೬॥ ಜಾನಕಿಯಸುತನಬಾ
ಣಾವಳಿಯಹಾವಳಿಯ । ನೇನೆಂಬೆನಹಿತರಂಕವಿದುವುಸವಿದುವು । ಬಾನೆ
ಡೆಯೊಳಿಟ್ಟಣಿಸಿಹಾರಿದುವುತೂರಿದುವುಕೊಂದುವರಿದುವುಪರಿದುವು ॥ ಆ
ನೆಕುದುದುರೆಗಳನುರೆಸೀಳಿದುವುತೂಳಿದುವು । ನಾನಾಪ್ರಕಾರದಿಂಕೆಡಹಿ
ದವುಕೊಡಹಿದುವು । ಸೇನೆಯೊಳೊಡಲ್ಗಳಂಹೆಚ್ಚಿದುವುಕೊಚ್ಚಿದುವುತಲೆ
ಗಳಂತರ್ಕ್ಷಣದೊಳು ॥೪೭॥ ಭೂರಿಬಾಣದೊಳಹಿತಸೇನೆಯೊಳ್ಮುಳಿ
ದುಚ । ತ್ವಾರಿಂಶದನುಪಮಭ್ರಮಿಗಳಂತಡಗಡಿದು । ವೀರಲವನಲ್ಲಿಕುಶ
ನಂಕಾಣದೆಡಬಲದೊಳರಸಸೆರುಧರಾಕ್ಷಸನೆಂಬ । ಶೂರಾಸುರಂಲವಣದಾ
ನವನಮಾತುಲಂ । ಶ್ರೀರಾಮಚರಣಶರಣಾಗತಂಸೀತಾಕು । ಮಾರಕನಕ
ರದಕೋದಂಡಮಂತುಡುಕಿದಂಮೇಲ್ವಾಯ್ದು ರೋಷದಿಂದಕರದಬಿಲ್ಲಂಕಿ
ತ್ತುಕೊಂಡೋಡುವಸುರನಂ । ಭರದಿಂದಬೆಂಬತ್ತಿಪೋಗದಿರ್ಪ್ಪೋಗದಿ ।
ರ್ತಿರುಗೆನುತವಾಲ್ಮೀಕಿಮುನಿಪನಿತ್ತಗ್ನಿಮಂತ್ರಧ್ಯಾನವಂಮಾಡಲು ॥
ದೊರೆಕೊಂಡುದೊಂದುಚಕ್ರಂಬಳಿಕಲವನದಂ । ಧರಿಸಿಚಕ್ರಾಯುಧಂ

ತಾನೆನಲ್ಕಂಗೊಳಿಸು । ತುರವಣಿಸಿರುಧಿರಾಕ್ಷನಂಗಗನದೋಳ್ಪಿಡಿಯೆ
ಕಂಡವನಪಡೆಕವಿದುದು ॥೪೯॥ ಮತ್ತುರುಬಿದನಿತುಬಲಮಂಕರದಚಕ್ರ
ದಿಂ । ಕತ್ತರಿದರಿದುರಾಕ್ಷಸೇಂದ್ರನಂಬಿಡದೆಲವ । ನೊತ್ತಾಯಮಂಮಾ
ಡುತಿರೆಕಂಡುದಶರಥನೃಪತಿಯಮಂತ್ರಿಯುತಸುಜರು ॥ ಹತ್ತುಮಂದಿಪ್ರ
ಸಿದ್ಧಪ್ರಧಾನಿಗಳಾಗ । ಹತ್ತುಹತ್ತಂಬುಗಳನೋರೋರ್ವರೆಚ್ಚುಕಡಿ । ಹ
ತ್ತುಹತ್ತಾಗೆಬಾಲಕನಪಾರುಂಬಳಿಯುಸಾಕ್ಷಣಂಖಂಡಿಸಿದರು ॥೫೦॥ ಕರದ
ಚಕ್ರಂಪೋಗೆಪರಿಘಮಂಕೊಂಡುಲವ । ನುರುವಣಿಸಿಹೊಯ್ದುನಿಬರಂಕೆ
ಡಪೆಮತ್ತೆಬಂ । ದುರುಗದಾದಂಡಮಂಕೊಂಡುರುಧಿರಾಕ್ಷನೀತನಪಣೆ
ಯನಪ್ಪಳಿಸಲು ॥ ಆರದೆಮೂರ್ಛಿತನಾಗಿಬಾಲಕಂಕೂಡೆಚೇ । ತರಿಸಿ
ಕೊಂಡೆದ್ದುಕುಂತದೊಳಾಮಹಾಸುರನ । ಶಿರವನರಿದಾದಿತ್ಯನಿತ್ತನಿಜಚಾ
ಪಮಂತೆಗೆದುಕೊಂಡಂಘುರದೊಳು ॥ ಬಿಡದೆರುಧಿರಾಕ್ಷರಾಕ್ಷಸನಂರಣಾ
ಗ್ರದೊಳ್ಕೆಡಹಿನಿಜಶರಾಪಚಾಪಲಹಸ್ತನಾಗಿಲವ । ನಡಿಸಿದರಿಚತುರಚತು
ರಂಗಮಂಸಂಹರಿಸತೊಡಗಿದಂಮತ್ತೆಮುಳಿದು ॥ ತೊಡವುಗಳಕಾಯಕಾ
ಯುತವಾದಜೋಡುಗ । ಳ್ಕಡಿಯೆಕುಣಪಕ್ಕೆಪಕ್ಕೆಗಳಾಗೆಪಟುಭಟ । ಪ್ಪೊರ್
ಡೆಗೆಡದರಾಗರಾಗದೊಳಮರನಾರಿಯರ್ತಕ್ಕೈಸಲಂಬರದೊಳು ॥೫೧॥
ಪಚೆಮಡಿವುತಿರ್ದುದುಲವಾಸ್ತ್ರದಿಂದಿತ್ತಕುಶ । ನೊಡನೆಸೌಮಿತ್ರಿಗಾದು
ದುಯುದ್ಧವಾಗಕಿವಿ । ಯೆಡೆಗೆತೆಗೆದೆಚ್ಚನೈದಂಬುಗಳನಿದಿರಾಗಿಭೂಮಿ
ಜೆಯಸುತನವೋಲೆ ॥ ಕಡುಗಿಖಾತಿಯೊಳೀತನೊಂದುಸರಳಂಪೂಡಿ । ಬಿ
ಡಲೂರ್ಮಿಳಾವಲ್ಲಭನತೇರೆರಡುಘಳಿಗೆ । ಬಿಡದೆತಿರುಗಿತುಭವಣಿಗೊಂ
ಡುರಥವಾಜಿಗಳ್ಪೊಡೆಗೆಡೆದವೇನೆಂಬೆನು ॥೫೨॥ ಮೆಚ್ಚಿದಂಬಾಲಕನವಿ
ಕ್ರಮಕೆಲಕ್ಷ್ಮಣಂ । ಪೆಚ್ಚಿದತಿರೋಷದಿಂಮತ್ತೊಂದುರಥಕಡ । ರ್ದೆ
ಚ್ಚನೆರಡಂಬಿನಿಂದೀತನಕಿರೀಟಮಂಕವಚಮಂಮೂರರಿಂದ ॥ ಕೊಚ್ಚಿಕೆ
ಡಹಿದನಾಗಜಾನಕಿಯಸೂನುಪೆರೆ । ಯುಚ್ಚಿದಹಿಪತಿಯಂತೆಶೌರ್ಯದಿಂ
ಮಡಿಸಿನಗು । ತುಚ್ಚರಿಸಿದಂವಿನಯಪೂರ್ವಕದೊಳರಸಕೇಳಾರಾಘವಾನು
ಜಂಗೆ ॥೫೩॥ ಘುರದೊಳ್ಕಿರೀಟಕವಚದಪೊರೆಯಿದೇಕೆಂದು । ಪರಿಹರಿಸಿ
ದುಪಕಾರಕಪಕಾರಮಂಮಾಡೆ । ನುರುಸೈನ್ಯಘಾತಮಂನಿನಗೆಬಿಡಿಸುವೆ
ನೀಗನೋಡಾದೊಡೆನುತಕುಶನು ॥ ವರವಹ್ನಿಸೂಕ್ತದೊಳಥರ್ವಣಮಂ
ತ್ರದಪುನ । ಶ್ಚರಣೆಯಿಂದನಲಾಸ್ತ್ರಮಂಪೂಡಿತೆಗೆದೆಸ । ಲ್ಕುರಿದುದುಚತು
ರ್ಬಲಮುಕಾಲದೊಳ್ಪುರಹರಂಪಣೆಗಣ್ದೆರೆದನೆನಲ್ಕೆ ॥೫೪॥ ಬಲಮೆಲ್ಲ

21

Funding: Tattva Heritage Foundation,Kolkata. Digitization: eGangotri.



ಪುಂಸುಡುವಪಾವಕಜ್ವಾಲೆಯಂ। ಕಲಿಲಕ್ಷ್ಮಣಂಕಂಡುವರುಣಾಸ್ತ್ರದಿಂ
ದದಂ। ನಿಲಿಸಲೆ ಬಾಲಕಂಮತ್ತೆ ನಸುನಗುತವಾಯುವ್ಯಮಾರ್ಗಣವನೆಸ
ಲು ॥ ಕುಲಶೈಲ್ಯಮಂಕಿತ್ತು ಬಿಸುಡುವಂದದಿಗಾಳಿ । ಸಲೆಬಡಿದುಪಡೆಗ
ಳಂಕೆಡಹುತಿರೆನಡೆತಂದು । ಸೆಳೆವುಗೊಂಡೂರ್ಮಿಳಾಕಾಂತನಂಪೆರೆಗಿಕ್ಕಿ
ಕಾಲಜಿತುವಿದಿರಾದನು ... ... ||೫೬||
ಭುಜಬಲಕೆಪಾಡಲ್ಲತರಳೆನೆಂದುಳುಹಿದರೆ। ವಿಜಯನಾದಪೆಬೇಡಹೋಗೆಲ
ವೊ ಕಾರುಣ್ಯ । ರುಜುವಲ್ಲತಾನೆನುತಕಾಲಜಿತುವೆಚ್ಚಡಾತನಬಾಣಮಂ
ಖಂಡಿಸಿ॥ಅಜಗಳಸ್ತನದಂತೆಸವನಿನ್ನ ಪೌರುಷಂ। ನಿಜವಾದೊಡಾಂಸೈರಿಸು
ವೆನಲ್ಲದಿರ್ದೊಡಾ । ರಜದಿಂದಪುಸಿವೇಳ್ದ ನಾಲಿಗೆಯನರಿವೆನೆಂದಾಕುಶಂ
ಕೋಲ್ಗಳೆದನು ||೫೭|| ಎಸುಗೆಯೆಂತುಟೊಕುಶನಕಣೆರಣದೊಳಾರ್ದ್ದುಗ
ರ್ಜಿಸುವನಾಲಿಗೆಯನರಿದುದುಬಳಿಕವಮೌನದಿಂ। ಮುಸಗಿರೋಷದೊಳುಬ್ಬಿ
ಕಾಲಜಿತುವೆಚ್ಚಡಾಜಾನಕಿಯಸೂನುನಗುತ ॥ ನಿಶಿತಾಸ್ತ್ರದಿಂದಕೈಕಾ
ಲ್ತಲೆಗಳಂಕೂಡೆ। ಕುಸುರಿದರಿಯಲ್ಕಂಡುಖತಿಯಿಂದಲಕ್ಷ್ಮಣಂ । ಮುಸು
ಕಿದಂಕೋಲ್ಗಳಂಬಾಲಕನಮೇಲೆಮೂಲೋಕದಾಲೋಕಮಡಗೆ ||೫೮||
ವೀರಲಕ್ಷ್ಮಣನೆಸೆವಕೂರಂಬನೆಲ್ಲಮಂ। ವಾರುವಂನಾಲ್ಕನುಂತೇರಂಸುಕೇ
ತುವಂ । ನಾರಿಯಂಚಾಪತೂಣೀರಂಗಳಂಕೆಲದಚಾರರಂಸಾರಥಿಯನು ॥
ಚಾರುಕವಚವನೆಚ್ಚು ಧಾರುಣಿಗೆಕೆಡಹಲ್ಕೆ। ತೇರಗದೆಗೊಂಡೂರ್ಮಿಳಾ
ರಮಣನೈತರೆ ।ಲ್ಧೀರನಹಸೀತಾಕುಮಾರಕಂಸಾಯಕದಸಾರದಿಂಪುಡಿಗೈ
ದನು॥೫೯॥ಚರ್ಮಖಡ್ಗಂಗಳಿಂವಿವಿಧಾಯುಧಂಗಳಿಂ। ದೂರ್ಮಿಳಾಕಾಂತನೊ
ದಗಿದೊಡನಿತನೆಲ್ಲಮಂ । ನಿರ್ಮಲಾಸ್ತ್ರಂಗಳಿಂಕತ್ತರಿಸಿವಾಲ್ಮೀಕಿಮುನಿವ
ರಂತನಗೆಕೊಟ್ಟ ॥ ಮರ್ಮಭೇದಗಳಾದವೈದಂಬುಗಳನೆಸ । ಲ್ಸ್ವರ್ಮಣಿಧ
ರಾತಳಕೆನಭದಿಂದುರುಳ್ವಂತೆ । ಪೇರ್ಮರವೆಗೊಂಡುಬೀಳ್ವನಿತರೋಳೋ
ಳ್ವಾಯ್ದು ಕುಶನಾರ್ದುಬೊಬ್ಬಿರಿದನು ||೬೦|| ಆಘೋರತರರದಸಂಗ್ರಾಮ
ದೋಳ್ತಾನೆಚ್ಚ ।ಮೋಘಮಾಗಿರ್ದಮುನಿಕೊಟ್ಟದಿವ್ಯಾಸ್ತ್ರದಮು। ಹಾಘಾ
ತಿಯಿಂದಕಡುನೊಂದುಮೂರ್ಛಿತನಾಗಿಬಿದ್ದು ಭೂತಳದಮೇಲೆ ॥ ರಾಘ
ವಾನುಜನಿರೆಕುಶಂಬಳಿಕನಿಜಹಸ್ತ । ಲಾಘವದೊಳಲ್ಲಿರ್ದರಂಗದೆದುಲವ
ನಂಬ । ಲಾಘವೋತ್ತಾಯದಿಂಮುತ್ತಿಕೊಂಡಿರ್ದ ಕೋಲಾಹಲವನಾಲಿಸಿದ
ನು ||೬೧|| ಶರಚಾಪಚರ್ಮಖಡ್ಗಂಗಳಂಕೊಂಡುಕುಶ। ನಿರದೆಲವನಿದ್ದೆಡೆ
ಗೆಚಿಗಿದನಲ್ಲಿಂಖಗೇ । ಶ್ವರನಂತೆರಗಿದನದೇವೇಳ್ವೆನಳಿದರಿಪುವಾಹಿನಿಭ್ರ
ಮಿಗಳು ॥ ಪರೆದುದೇಣ್ವಸೆಗಳ್ಗೆ ಸೀತಾಕುಮಾರಕ । ರ್ತಿರುಗಿದರ್ತ್ತಗೆ

ವಿಹಬನಕಾಗಿದೇವಪುರ । ದರಸಲಕ್ಷ್ಮೀಶರಾಘವನಲ್ಲಿಗೈದಿದರ್ೂತ
ರತಿವೇಗದಿಂದ ... ... ||೬೨||

ಸಂಧಿ ೨೦ಕ್ಕೆ ಪದ್ಯ ೧೦೫೦ಕ್ಕೆ ಮಂಗಳಮಸ್ತು.

---

## ಇಪ್ಪತ್ತೊಂದನೆಯ ಸಂಧಿ.

ಸೂ. ತನಯರೊಳ್ಕಾದಿಮೂರ್ಛಿತನಾದರಾಮನಂ। ಮುನಿಮೌ
ಳಿವಾಲ್ಮೀಕಿಬಂದುಸಂತೈಸಲ್ಕೆ । ವಿನುತಾಶ್ವಮೇಧಮಂಪೂರೈಸಿಸೀ
ತೆಸಹಿತವನಿಯಂಪಾಲಿಸಿದನು ... ... ||

ಅರಸಕೇಳ್ಶಾಬ್ಜ ಹ್ನವಿಯತೀರದೊಳ್ದೀಕ್ಷೆಗೊಂ । ಡಿರುತಿರ್ದರಾಘವಂಚಿ
ತ್ತದನುತಾಪದಿಂ । ಭರತನಂಕರೆದುಶತ್ರುಘ್ನನೇಗೈದನೆಂಬುದನುಸುರ್ವ
ರಾರುಮೆನಗೆ ॥ ತರಳರಂಪಿಡಿದಪನೊಕೊಂದಪನೊಲಕ್ಷ್ಮಣಂ । ಧುರ
ದೊಳ್ಬಳಲ್ದಪನೊಗೆಲ್ದಪನೊಸೋಲ್ದಪನೊ । ತುರಗಮಂಬಿಡಿಸಿತಂದ
ಪನೊತಾನರಿಯೆನೆಂದಸುರಾರಿಚಿಂತಿಸಿದನು ||೧|| ಕನಸಿನೊಳ್ಪೋಲ್ದದಿ
ಲ್ಲಾರ್ಗೆಯಂಲಕ್ಷ್ಮಣಂ । ವನಚಾರಿಬಾಲಕರಪಾಡಾವುದೀಗಮುಳಿ । ದ
ನುವರದೊಳೀರ್ವರಂಘಾತಿಸದೆಸನ್ಮೋಹನಾಸ್ತ್ರದೊಳ್ಮರವೆಗೊಳಿಸಿ ॥ತ
ನಗೆತಂದೊಪ್ಪಿಸುವತೆರದೊಳತಿಬಲಚರರ । ನನುಜನೆಡೆಗಟ್ಟಿಂದುರಾಘ
ವಂಭರತನೊಡ । ನೆನಲವಂದೂತರಂಕಳುಹಲವರರಿದುಬಂದವನಿಪತಿ
ಗಿಂತೆಂದರು ||೨|| ದೇವಬಿಡುದೀಕ್ಷೆಯಂಕಾದುನಡೆಕುಶನೊಳ್ಮ । ಹಾ
ವೀರನಾತನಾಲವಗಿಂದಬಲ್ಲಿದಂ । ಜೀವಸಂದೇಹಮಾಗಿರ್ಪುದೈಶತ್ರುಘ್ನಲ
ಕ್ಷ್ಮಣರ್ಗಖಿಳಸೇನೆ ॥ ಭಾವಿಸೆತವಾಕೃತಿಯಬಾಲಕರದೆಸೆಯಿಂದ ।ಗೋ
ವರ್ಧನಂಗೆಮೊಲೆಗೊಟ್ಟಪೂತನಿಯೊಲಾ ।ಯ್ತೀವೇಳ್ವೆಯೆಂದುದೂತರ್ನು
ಡಿಯೆರಾಘವಂಕೇಳಿಮೂರ್ಛಿತನಾದನು ||೩|| ಬಳಿಕಶೈತ್ಯೋಪಚಾರಂಗ
ಳಿಂಭರತನಿನ । ಕುಲಸಾರ್ವಭೌಮನಂಸಂತೈಸುತಿರೆಮೂರ್ಛೆ।ತಿಳಿದೆದ್ದು
ಲಕ್ಷ್ಮಣನದಾವೆಡೆಯೊಳೆಂನಸೋಲ್ಸಲಿಸುವನದಾವೆಡೆಯೊಳು ॥ ಹಳುವ
ದೊಳ್ತಸಗಾಗಿನವದನುಜನಾವೆಡೆಯೊ । ಳಿಳಿದನೇಸೌಮಿತ್ರಿಹಾತಂಮ
ಹಾಯೆನುತ ।ಹಳವಳಿಸಿಬಿಸುಸುಯ್ದುಳಲ್ದುಮರುಗಿದನೆಂದುರಾಘವಂಶೋ
ಕದಿಂದ ||೪|| ಜಾನಕಿಯನಂದುಪೊರಮಡಿಸಿದನ್ಯಾಯದಿಂ । ಭಾನುಕುಲ
ಸಂಭವಂಗಾದವಿಂತೀತೆರದ । ಹಾನಿಗಳ್ಸೌಮಿತ್ರಿಶತ್ರುಘ್ನರಂಜಯಿಸುವಗ್ಗ
ಳಿಯರಾರ್ಜಗದೊಳು ॥ಕಾನನದಮುನಿಸುತರ್ಗಘಟಿತ್ತಣದುರಾಮ। ಸೂ

ನುಗಳ್ತಪ್ಪದಾಕೃತಿಗಳಂನೋಡಲನು । ಮಾನವೇಕೆಂದುಪೊರೆಯಿಟ್ಟು
ದೆಲ್ಲಾ ಜನಂರಾಘವಂಕೇಳುವಂತೆ ॥೫॥ ಸೀತಾವದನಚಿಹ್ನಮನ್ನಂಗದಾ
ಕಾರ । ಮಾತಾಪನಾರ್ಭಕರೊಳಿರ್ದಪುದುಗಡಪಡೆದ । ಮಾತೆಯೆಲ್ಲಿರ್ದ
ಪಳೊಕುದುರೆಯುಂಕಟ್ಟುವಧಟೆತ್ತಣದಿವರ್ಗೆಂಬುದ ॥ ದೂತರಂಕರೆಕೇಳ್ವೆ
ವಿಂನೊಂಪುಶಿಶುಗಳಂ । ಘಾತಿಸದೆದಯೆಗೈದುತಾನೇರ್ಪಡದನೊಮೋ । ಜ್ಞಾ
ತರಳರತಿಬಲರೊಸೌಮಿತ್ರಿಬಿದ್ದನೇಕೆಂದುರಘುಪತಿಸುಯ್ದನು ॥೬॥ ಇಂತಿಂ
ತಳಲ್ದಾಗಬಿಸುಸುಯ್ದೊಡನೆರಾಘ । ವಂತಂನಸೋದರರಗುಣಗಳಂನೆನೆನೆ
ನೆದು । ಚಿಂತಿಸುತಿರಲ್ಕತ್ತೆಕುಶನಶರಘಾತಿಯಿಂದುರೆನೊಂದುಭೀತಿಗೊಂ
ಡು ॥ ಸಂತಪ್ತರಾಗಿಪರಿತಂದುಲಕ್ಷ್ಮಣನೊಡಲೊ । ಳಂತರಿಸಲರಿಯದಸು
ವಡಗೆಮಡಿದುದುಸೈನ್ಯ । ಮಂತಿಹನೊಶತ್ರುಘ್ನನೇಕೆದೀಕ್ಷೆಯಿದೆಂದುಚ
ರರೈದೆಪೊರೆಯಿಟ್ಟರು ॥೭॥ ಮೊರೆವೇಳ್ವದೂತರಂಗರ್ಜಿಸ ತರಾಘವಂ।
ಗೆರಗಿಕೈಮುಗಿದುಭಯವಿಹ್ವಲಚರರಿವ । ರರಿದಪರೆಸೌಮಿತ್ರಿಶತ್ರುಘ್ನ
ರಾಪವಶ್ರಮದಿಂದತನುಮನವನು ॥ ಮರೆದರಲ್ಲದೆಮರಣಮೆತ್ತಣದುಸಾಕಿ
ನ್ನು । ಬರಿದೆಕಂಪಿಸಬೇಡಸಾಂಪ್ರೋಗಿಬಾಲಕರ । ಮರುಕಮಂಬಿಡಿಸಿತ
ಹೆನಶ್ವಮಂಕಳುಹೆನ್ನನೆಂದುಭರತಂನುಡಿದನು ॥೮॥ ಬಳಿಕಜಾಂಬವಸು
ಷೇಣಾಂಗದರ್ಹನುಮಂತ । ನಳನೀಲಕುಮುದಶತಬಸಗವಯರೆಂಬಕಪಿ। ಗ
ಳಪಡೆಯುನೆಲ್ಲಮಂಬಲದೊಳುಳಿದಖಿಳಚತುರಂಗಮಂಕೂಡಿಕೊಟ್ಟು ॥ ಕ
ಳುಹಲಿನಕುಲಸಾರ್ವಭೌಮನಂಬೀಳ್ಕೊಂಡು । ತಳೆದುಸುರನದಿಯತೀರದೊ
ಳಾಂದನೇಮನಂ । ಕೊಳುಗುಳದವೃತ್ತಾಂತಮಂಕಂಡುಬಂದೂರೆನ್ವುದೆಂ
ದುಭರತಂಪೇಳ್ದನು … … ॥೯॥
ಧಂಕಿಟ್ಟನಲ್ಲಿಂದಕೀಹನುಮನಾರಣದೊ । ಳಂಕಿತದಕುಶನಬಾಣಂಗಳಿಂ
ಮಡಿದಬಲ । ಸಂಕುಲವನಿಕ್ಷ್ವಾಕುನಂದನಂನಿಂನಸುತೆಗೀತೆಯುಂಟಿಟ್ಟನೆಂ
ದು ॥ ಕೊಂಕದಿರುಸೈರಿಸುವುದೆಂದೈದಭೂದೇವಿ । ಯುಂಕೋಪಮಂಪಾಣಿ
ಸ್ಪೃಡಿಕೊಂಬತೆರ । ದಿಂಕೆಡೆದುಮ್ಮೈಮರೆದುಮಲಗಿರ್ದ ಸೌಮಿತ್ರಿಶತ್ರು
ಘ್ನರಂಕಂಡನು ॥೧೦॥ ಕಂಡುಕಪಿವೀರನವರೀರ್ವರಂತೆಗದತ್ತಿ । ಕೊಂಡು
ಭರತನಪೊರೆಗೆಕರಲವಂಬಳಿಕಮಣಿ । ಮಂಡಿತವರೂಥದೊಳವರ್ಗಳಂಪ
ಟ್ಟರಿಸಿಹಯುಮಂಕದಳ್ಕೆಕಟ್ಟ ॥ ಚಂಡಶರಚಾಪಪಾಣಿಗಳಾಗಿತೊಳಗುವು ।
ದ್ದಂಡಕುಶಲವರೀರ್ವರಿಪ್ಪರ್ದಂಕೇಳ್ದಕೋ । ದಂಡಮಂಜೇಗೈದುಪಡೆವ
ರಸನೊಕಿದಂಮುಳಿದುಬಾಲಕರಮೇಲೆ ॥೧೧॥ ಅಂಣತಮ್ಮಂದಿರೀರ್ವರು
ಮರಿಚತುರ್ಬಲಂ । ಪಂಣಿಬರೆಕಂಡುಬಿಲ್ಗೊಂಡೆದ್ದುಕೋಪದಿಂ । ದಂಣಕ

ಲ್ಲಾಡಿದರ್ಸ್ವೆಸುಭಟರತಲೆಗಳಂಬಾಣಪ್ರಯೋಗದಿಂದ || ಬಣ್ಣಿಸಲ್ಪವಣೆ
ಯೋಜನದಗಲಮಲ್ಲಿಯುಂ । ಕಂಡವೆಯುಟುಗುವನಿತರೋಳ್ಸರಳಿಮಯ
ಮಾಗೆ । ಬಣ್ಣರಂಗದಮೇಲೆಮುಚ್ಚಿ ಪೂಮಳೆಗಳಂಕರೆದರಮರಪ್ರೌಗಳು
ತ ||೧೨|| ಚಾಪಟಂಕಾರಂಜಗತ್ರಯದೊಳೆಲ್ಲಿಯುಂ। ವ್ಯಾಪಿಸಲ್ಕಿನ್ನಡಾದ
ವಷ್ಟದಿಗ್ದಂತಿಗ । ಳಬ್ಧಿಪಯೋಧಿಗಳೊಡವೆರಸಿದುವುಕುಲಾದ್ರಿಗಳ್ಜರಿ
ದವೆಹುಕಂಪಿಸಿದನು || ತಾಪದಿಂಪೊಡೆಮರಳ್ದಂಕೂರ್ಮನೀರವಿಯ। ರೂಪ
ಡಗಿತೆಸುವಬಾಣಾಂಧಕಾರದೊಳಂದು। ದೀಪವಿಲ್ಲದಮನೆಯೊಳಾದುದು
ರಣಾಂಕಣಂಕಾದವರದೆಂತೊಭಟರು ||೧೩||ಕೋಲ್ಗರೆಯಲಾನೆಗಳಸುಂ
ಡಿಲ್ಗಳುಂಹರಿದ। ಕಾಲ್ಗಳುಂರಾವುತರಜೋಧರಶಿರಂಗಳುಂ । ಮೇಲ್ಗೈ
ಯ್ಯರಥಿಕರಳೆನುರ್ದಂಡಮುಂಕೈದುವಿಡಿದವಾಣಿಗಳುಮಿಳೆಗೆ|| ಸಾಲ್ಗೊಂ
ಡುರುಳ್ದವೊದಗಿದಕಪಿಗಳಂಗದೋ। ಳ್ಕೋಲ್ಗಳಂಬಲಿದಂತೆಸಾಂಟದುವುಪ
ರಬಲಂ । ಸೋಲ್ಗಮಲ್ಲದಕುಶಲವರಮುಂದೆಗೆಲ್ವಭಟರಂಕಾಣೆನಾಹವ
ದೊಳು ||೧೪|| ಸೇನೆಯುಂನಿಮಿಷದೊಳ್ತಡೆಗಡಿಯೆಕಂಡುಸವ। ಮಾನಜಂ
ನಶೆತಂದುಬಾಲಕರವಿಗ್ರಹಂ। ಭಾನುಕುಲತಿಲಕನಾಕೃತಿಯೊಳಿದೆನೋ
ಡೆಂದುಭರತಂಗೆತೋರಿಸಲ್ಕೆ || ಸಾನುರಾಗದೊಳತುಲಚಾಪಮಂಪಿಡಿದು
ರಾ। ಮಾನುಜಂಕುಶನಸಂಮುಖಕ್ಕೈದಿನುಡಿಸಿದಂ। ಸೂನುಗಳಮೊಗಮಂ
ನಿರೀಕ್ಷಿಸಿಘನಸ್ನೇಹದಿಂದಪ್ರುಳಕಂಪ್ರೋಣ್ಮಲು ||೧೫|| ವತ್ಸನೀನಾರವಂನಿ
ನಗೀತನೇನಹಂ। ಮತ್ಸಹೋದರರನುರೆಘಾತಿಸಿದಿರೆಂಮಯುಮ। ಹತ್ಸೈನ್ಯ
ಮಂಕೊಂದಿರಿನ್ನಾದೊಡಂಕುದುರೆಯುಂಬಿಟ್ಟುಪೋಗಿಬರಿದೆ || ಮತ್ಸರಿಸ
ಬೇಡನಿಮ್ಮಂಪಡೆದತಾಯಿಬಳಿಗು। ತ್ಸವದೊಳೈದಿಸುಖಮಿಹುದೆಂದುಭರ
ತನೆನ। ಲುತ್ಸುಕದೊಳಾಕುಶಂನಸುನಗುತನುಡಿದನಿಂತಾರಾಘವಾನುಜಂ
ಗೆ||೧೬||ಕಟ್ಟದತುರಂಗಮಂಬಿಡುವದಿಲ್ಲೀತನೊಡ । ಹುಟ್ಟದಂತನಗೆವಾ
ಲ್ಮೀಕಿಮುನಿವರನವ । ರ್ಕೆಟ್ಟನೆರಣಾಗ್ರದೊಳ್ನಿನ್ನನುಂನಿಂನನುಜರಂತೆ
ಘಾತಿಸಿದಬಳಿಕ||ಮುಟ್ಟದುತ್ಸವದಿಂದತಾಯಿಬಳಿಗೈದಿಪೊಡ। ಮಟ್ಟಲ್ಲಿಸು
ಖದೊಳಿರ್ದಪೆವೆಂದುಕಣೆಗಳಂ। ತೊಟ್ಟುತಾನೀಗಕುಶನರಿದುಕೊಳ್ಳನು
ತಚ್ಚಿನಾಭರತನಂಘುರದೊಳು ||೧೭|| ಭರತನಂಗಣೆಸದೆಸುತಿರೆಕಂಡುಮ
ತ್ತೆಭಕರಿ। ತುರಗರಥಮಾಯದಳಮುತ್ತಿದುದುಕೂಡೆವಾ। ನರಸಿಂಗಳೀಕಮು
ಸುಕರಡಿಗಳಬಲಮೈದೆಮುತ್ತಿದುದುಬಳಿಕಕುಶನು||ಕರೆದುಕಾದುರೆಯಬ
ಳಿಗೆತಮ್ಮನಂಕಳುಹಿಬಿ। ಲ್ದಿರುವಿಂದುರುಳ್ಪದಂಕಣೆಗಳಂವೈರಿವೊ। ಹರ
ದತಲೆವಣಿಗಳಂಪಗೆಗಟೆವಣಿಗಳಂಕಣೆಗಳಿಂತತ್ಕ್ಷಣದೊಳು ||೧೮||ಪ

ತ್ತು ಭರತನಮೇಲೆನಳನಮೇಲೆಂಟುಮೂ। ವತ್ತು ಹನುಮನಮೇಲೆಜಾಂಬವನಮೇಲೆನಾ। ಲ್ವತ್ತುಂಗವನಮೇಲೆತೊಂಭತ್ತು ನೀಲಕುಮುದರಮೇಲೆನೂರುನೂರು॥ ಉತ್ತುಂಗಗವಯಶತಬಲಿಸುಷೇಣರಮೇಲೆ। ಹತ್ತು ಹತ್ತಂಬೊಡಲ್ಪೊಗಲೆಚ್ಚನನಿಬರಂ। ಮತ್ತೆ ಘಾತಿಸಿಕೂಡೆರಾಮಾನುಜನಮೇಲೆಕೂರ್ಗಣೆಗಳಂಕರೆದಸು ॥೧೯॥ ಎಲ್ಲಿಕುಶನಂಬುಸೋಂಕಿದವಲ್ಲಿಮೂರ್ಛೆವೃತ್ತಿ। ಯುಲ್ಲದುಳಿವಿಲ್ಲಪಡೆಯೆಲ್ಲಮಂತಲ್ಲಣಿಸಿ। ಚೆಲ್ಲಿದುದುದೆಸೆದೆಸೆಗೆಬಲ್ಲಿದಕಪೀಶ್ವರರ್ಕೈಗೆಟ್ಟುವೈಮರೆದರು ॥ ನಿಲ್ಲದೋಡಿತುದೊದ್ದೆ ಫಲ್ಗುಣಿಯಸಾಂತುನಿಂ। ದಲ್ಲಿಸಾರಥಿಕುದುರೆಗಳ್ಮಡಿದುತೇರ್ಮುರಿದು। ಬಿಲ್ಲುಡಿದುಭರತನಂಗೋಪಾಂಗದಲ್ಲಿನಾಂಟಿದುವುಪೊಸಮಸೆಗಣೆಗಳು ॥೨೦॥ ಜಗದೊಳ್ಕುಶಾಸ್ತ್ರಪ್ರಕರಕೆವೈಗೊಟ್ಟವಂ। ಮಿಗೆಪತಿತನಾಗದಿರ್ದಪನೆಪೇಳೆಂಬಿನಿಂ। ವಿಗತಚೇತನನಾಗಿಭರತಂಮಹೀತಳಕೆಬಿದ್ದು ಮೂರ್ಛೆಯೊಳಿರಲ್ಕೆ ॥ ವಿಗಡಹನುಮಂಕಂಡುಕಿತ್ತು ಪೇರ್ಬೆಟ್ಟಮಂ। ನಗಪತಂದರ್ಭಕನಮೇಲಿಡಲ್ಕಣುವೆಂದು। ಬಗೆಯದೆವಿಭಾಡಿಸಿದನಾತನಂಕಣೆಯೆಚ್ಚು ನಗುತಜಾನಕಿಯಸೂನು ॥೨೧॥ ಕಡೆಯುವಾತೇನಖಿಳಸೇನೆಯುಂಭರತನಂ। ಕೆಡಹಿಂಕುಶನಲ್ಲಿಂದತುರಗಮಿರ್ದೆಡೆಗೆಬಂ। ದೊಡಹುಟ್ಟಿದಂವೆರಸಿನಿಲ್ವಿನಿಂದೂತರೀತೆರನಂರಘೂದ್ವಹಂಗೆ ॥ ಕಡುವೇಗದಿಂಪೋಗಿಬಿನ್ನೈಸೆಕೇಳ್ದಳ। ಲ್ವಿಡಿದಪರಿತಾಪದಿಂದುರೆನೊಂದುವಿಸ್ಮಯಂ। ಬಡುತೆದ್ದು ಸುಗ್ರೀವವರವಿಭೀಷಣರೆಡಬಲದೊಳ್ಬೈದೆಪೊರಮಟ್ಟನು ॥೨೨॥ ಬಂದಂರಥಾರೂಢನಾಗಿರಣರಂಗದೋ। ಳ್ನಿಂದುವೈಮರೆದೊರಗಿದನುಜರಂಮಡಿತಬಲ। ವೃಂದಮಂಕುದುರೆಯಂಕಟ್ಟಿಕೊಂಡಿದಿರಾಗಿಬಿಲ್ವಿಡಿದುಕಾಳಗಕ್ಕೆ ॥ ನಿಂದಿರ್ದಯುವಳರಂಕಂಡುಚಿರಗಾಗ್ಗಿರಘು। ನಂದನಂವಿನಯದಿಂತಾನೆಬೆಸಗೊಂಡನಿಂ। ತೆಂದುಘನಗಂಭೀರವಾಕ್ಯದಿಂ। ಧತಿಮನೋಹರವಾದಸುಸ್ವರದೊಳು ॥೨೩॥ ಎಳೆಪಸುಳೆಗಳಿರನಿಮಗೀಧನುರ್ವೇದಮಂ। ಕಲಿಸಿದವನಾವನಾವುದುನಿವಾಸಸ್ಥಳಂ। ಸಲಹಿದವನಾವನಾವಂತಂದೆತಾಯಾವಳಶ್ವಮಂಕಟ್ಟಿವಿನಿತು ॥ ಛಲಮಿದೇತಕೆನಂಮಸೇನೆಯುಂಜಯಿಸುಮೀ। ಬಲಪೋತರಿಂದಾದುದೆಂಮನಯದಿಂದರಘು। ಕುಲಲಲಾಮಂಕೇಳ್ದೊಡಾಕುಶಂನಸುನಗುತಮಾರುತ್ತರಂಗೊಟ್ಟನು ॥೨೪॥ ರಾಜೇಂದ್ರನೀನೆಮ್ಮೊಳಾಹವಕೆಬಿಲ್ಗೊಂಡು। ವಾಜಿಯಂಬಿಡಿಸಿಕೊಳಲೊಲ್ಲದೊಡೆಮರುಳಪ್ರ। ಯೋಜಕದಮಾತಿದೇತಕೆನಿರುಪಮಕ್ಷಾತ್ರಪೌರುಷವನುಳಿದುಬರಿದೆ॥ ಸೋಜಿಗದೊಳೆಮ್ಮಜನನಸ್ಥಿತಿಗಳಂಕೇಳ್ದು। ಡೀಜಗಂಮೆಚ್ಚೆ ದೆಚ್ಚಡಿನೋಡೆನುತಕುಶ। ನಾ

ಜಲಜಮಿತ್ರಕುಲತಿಲಕನೆಂಬಗೆಯುದನುಡಿದೊಡಾತನಿಂತೆಂದನು ||೨೫|| ಶಿ
ಶುಗಳಾಗಿಹನಿಮ್ಮೊಳೆಸೆಗೆಕಾಳಗವೆಪರ | ವಶರಾಗಿಬಿದ್ದನುಜರಂಕಂಡು
ಖತಿಯೆಗೊಳಾಂ | ವಿಶಿಖಮಂತೊಡುವೆನೊಂದೊಡೆಮನವೊಡಂಬಡದುನಿ
ಮ್ಮ ಜನನಸ್ಥಿತಿಗಳವಿಶದವಿಸ್ತರವನೊರೆದೊಡೆಸೋಡಿಕೊಂಬೆನೆನೆ | ಕು
ಶನೆಂದನಿಂತುಲೋಕಾನಂದಕರವಾದ |ನಿಶಿತವಾಕ್ಯಂಗಳಂಜನಮೇಜಯ
ಕ್ಷಿತಿಪಕೇಳಾರಘೂದ್ವಹಂಗೆ ... ... ||೨೬||
ಈತಪೋವನದೊಳೆಮ್ಮಿರ್ವರನವಳಿಯಾಗಿ| ಸೀತೆಯೋರ್ವಳೆಪಡೆದಳನು
ದಿನದೊಳಾರೈದು|ಜಾತೋಪನಯನಾದಿಕರ್ಮಂಗಳಂಮಾಡಿನಿಗಮಾಗಮ
ಸ್ಮೃತಿಗಳ||ವ್ರಾತಮಂಬರಸಿಕಾರ್ಮುಕವೇದಮಂಕಲಿಸಿ | ನೀತಿಗಳನರುಪಿ
ರಾಮಾಯಣವನೋದಿಸಿದ | ಹಾತಿಬಲರೆನಿಸಿದಂವಾಲ್ಮೀಕಿಮುನಿಪನೆಂ
ದೊರೆದುಮಗುಳಿಂತೆಂದನು ||೨೭|| ರಾಮಚಾರಿತ್ರಪಠನಾಭ್ಯಾಸಯೋ
ಗದಿಂ|ಷೇಮಂಸುಪುಷ್ಟಿನಿಷ್ಠಲಮತಿನಿರಾಲಸ್ಯ| ಮೀಮಹಾಸ್ತ್ರೈನ್ಯಮಂಗೆ
ಲ್ವ ಘಟಿತಮಗಾದುದೆಂದುಕುಶನುಸುರೆಕೇಳ್ದು || ಪ್ರೇಮದಿಂತನ್ನಸುತರೆಂ
ದರಿದುಸೀತೆಯಂ|ಬೀಮಾತುಕಿವಿದಾಗಿದೊಡೆಬಿದ್ದು ಮೂರ್ಛೆವ| ತ್ತಾಮ
ಹೀಶಂಕೊಡೆಚೇತನಂಗೈದುಸುಗ್ರೀವನೊಡನಿಂತೆಂದನು ||೨೮|| ಕಪಿರಾ
ಜಕೇಳ್ಕೈಕುಮಾರಕರನುಡಿಗಳಂ|ನಿಪ್ರುಣರಿವರಾಪಪುರುಷಂಗೆಸಂಭವಿಸಿದ|
ವಿಪಿನಚಾರಿಗಳನಿಂನೊಂದುಮೀಂಬೆಸಗೊಳೆನೆಸನುನಗುತಸುಗ್ರೀವನು||
ತಪನಕುಲಜಾತರ್ಪುರಾಣಪುರುಷೋತ್ತಮನ|ವಿಮಲಸಂತತಿಗಳಿವರೀಕ್ಷಿ
ಪೊಡೆದೇವನಿಂ|ನುಪರೂಪಮಾಗಿರ್ಪ್ಪದಲ್ಲದೊಡಿವರ್ಗಿನಿತುಸತ್ವಮೆತ್ತಣ
ದೆಂದನು ||೨೯|| ಸುಗ್ರೀವರಾಘವರ್ಮಾತಾಡುವನಿತರೋ | ಳ್ನಿಗ್ರಹಿಸಿ
ಕೊಂಡಿರ್ದಕುದುರೆಯುಂಬಿಡುವಡ| ಛ್ಯಗ್ರಮುಳ್ಳವನಾಗಿನೀಲನ್ಸೃತರೆಕು
ಶಂಕೋಪದಿಂದಾಕಪಿಗಳ || ಅಗ್ರಣಿಯನೆಚ್ಚು ಕೆಡಪಿದೊಡವನರುಧಿರದಿಂ
ದುಗ್ರರೂಪದೊಳಿದ್ದು ದಾನೀಲಕೋಟಿಗ|ಳ್ವಿಗ್ರಹಕೆಕಡುಮುಳಿದುಮರ
ಗೊಂಬೆಬೆಟ್ಟಕಲ್ಗುಂಡುಗೊಂಡಲ್ಲೆಡೆಯೊಳು ||೩೦|| ನೀಲವಾನರಸೈನ್ಯ
ದೊತ್ತಾಯಮಂಕಂಡು|ಮೇಲೆಸೆವರವಿಯನಾರಾಧಿಸಿಕುಶಂಮಹಾ| ಸ್ಥೂ
ಲಕಾಯದಕಪಿಗಳಂಗೆಲಲ್ಕೊಂದುವರೆಯೋಜನದಳತೆಯುಗಲದ || ಕೋ
ಲಘಾಯದನೆತ್ತರೊಸರಲೀಯದವೊಲಾ| ಬಾಲಕಂತೊಡುವಡಳವಡುವ
ತೆರನಾದರಿಪು|ಜಾಲಕಸದಳಮೆನಿಸಿಪೂಡಲಕ್ಷಯವಾದಬಾಣಂಗಳಂಪಡೆ
ದನು||ಆಮಹಾಬಾಣಂಗಳಂಪೂಡಿತೆಗೆದೆಚ್ಚು |ಭೀಮವಿಕ್ರಮಕುಶಂಕೆಡಹಿ
ದನಹಿತಕಪಿ|ಸ್ತೋಮಮಂಬಳಿಕುರುಳ್ಚಿದನಾದಿನೀಲನಂಸುಗ್ರೀವಮುಖ್ಯ

ರಾದ॥ಕಾಮರೂಪದಸಕಲವಾನರಚಮೂಪರಂ।ಭೂಮಿಯೋಳ್ಮೂರ್ಛೆ
ಗೊಂಡೊರಗಿಸಿವಿಭೀಷಣನ । ಸಾಮರ್ಥ್ಯಮಂನಿಲಿಸಿಮತ್ತವನಬಲಮಂ
ಪೊರೆಳ್ದಿ ದಂಸಂಗರದೊಳು ॥೩೦॥ ನರವಾಜಿದಂತಿಮುಸುಕರಡಿಸಿಂಗಣಿಕ
ವಾ । ನರದಾನವರೊಳಿಡಿದಸೇನೆಯೋಳ್ನೋಡಲೋ । ರ್ವರುಮಿಲ್ಲದೆಲ್ಲ
ರುಂಬಿದ್ದು ತಾನೋರ್ವನಿರ್ಪುದಕಂಡುಖಾತಿಗೊಂಡು ॥ ಸರಳನರ್ಭಕ
ರಮೇಲೆಚ್ಚ ಂರ।ಪೊದ್ದ ಹಂಧರೆಯೊಳೀಕ್ಷತ್ರಿಯರಮನವಾಸಿಗಳದಂತೊ।
ತರಹರಿಸಬಾರದಿಹರಾಮಬಾಣಂಗೈದಿದುನ್ರುಕಾಲಾಗ್ನಿಯಂತೆ॥೩೩॥ಬಚ್ಚ
ವೋಗದರಾಮಬಾಣಂಗಳಂನಡುವೆ । ನುಚ್ಚು ನೂರಾಗೆಕತ್ತರಿಸಿರಘುನಾ
ಥನಂ । ಮುಚ್ಚಿ ದರ್ಕಣೆಗಳಿಂಮತ್ತೆಕಾಕುತ್ಸ್ಥಂಕೆರಳ್ದು ಕುಶಲವರಮೇ
ಲೆ ॥ ಎಚ್ಚ ಡಾಕೋಲ್ಗಳಂಬಾಲಕರ್ಮಧ್ಯದೊಳ್ಕೊಚ್ಚಿ ರಾವಣರಿಪುವಿನಂ
ಗಮಂನೋಯಿಸಿದ । ರಚ್ಚರಿಯುಕಾಳಗಂತಂದೆಮಕ್ಕಳಿಗೆನಡೆದುದುಸು
ರರ್ಬೆರಗಾಗಲು ॥೩೪॥ ಕಕ್ಕಸದೊಳಂದುರಾವಣಕುಂಭಕರ್ಣಾದಿ।ರಕ್ಕ
ಸರತಲೆಗಳನರಿದುತಿರುಗಿಬಹಕಣೆಗ।ಳಿಕ್ಕಡಿಗಳಾಗಿಬಿದ್ದುವುಧರೆಗೆಕೂಡೆ
ಬಾಲಕರೆಸುಗೆತನ್ನೆಸುಗೆಗೆ ॥ ಮಿಕ್ಕುಬರೆಬೆರಗಾಗಿರಾಘವಂಸುಂಮನಿರೆ ।
ಪೊಕ್ಕವಂಬುಗಳೊಡಲೊಳಾತ್ಮಜರಮೇಲೆತನ । ಗಕ್ಕರುಂಟಿಲ್ಲೆಂಬುದಂ
ನೋಳ್ಪೆನೆಂಬವೋಲ್ಪೊಪಕೇಳ್ಕೌತುಕವನು ॥೩೫॥ ಪಲ್ಲವಿತನವಚೂ
ತತರುಬೇಸಗೆಯುರ್ಧುಳಕೆ।ನಿಲ್ಲದಸವಳಿದುಜೋಲ್ವಂತೆಕೋಮಲಕಾಯ।
ದೆಲ್ಲೆಡೆಯೊಳುಂನಾಂಟದಂಬುಗಳರುಧಿರಪ್ರವಾಹದಿಂದುರೆಬಳಲ್ದು ॥ಮಲ್ಲ
ನೆವರೂಥದೊಳ್ಸಾರಥಿವೆರಸಿಧರಾ।ವಲ್ಲಭಂಮೈಮರೆದುಪವಡಿಸಿದನನಿಮಿ
ಷ । ರ್ಬೆಲ್ಲಿದಪೂರ್ಮಳೆಗಳಂಮೊಳಗಿದುವುದೇವದುಂದುಭಿಗಳಂಬರದೊ
ಳು ॥೩೬॥ ಆಕುಮಾರರ್ಬಳಿಕಶರಹತಿಗೆಮೈಮರೆದ।ಕಾಕುತ್ಸ್ಥನಲ್ಲಿಗೈ
ತಂದುರಾಜೇಂದ್ರನಶು। ಭಾಕಾರಮಂನೋಡಿಸಿರಿಮೊಗದಮಣಿಕುಂಡಲಂ
ಗಳಂಕಂಬುಗಳದ॥ ಏಕಾವಳಿಯಹಾರಮಂತೆಗೆದುಕೊಂಡೂರ್ಮಿ । ಳಾ
ಕಾಂತಭರತಶತ್ರುಘ್ನರವಿಭೂಷಣಾ ।ನೀಕಮಂಕಳೆದೊಂದುವಸನದೋ
ಳ್ಕಟ್ಟಕುಶನೊಡನೆಲವನಿಂತೆಂದನು ॥ ಅಗ್ರಭವಕೇಳವರೊಳೊಂದುರಥ
ಮಂಪತ್ತಿ । ವಿಗ್ರಹದೊಳೆಚ್ಚ ರಾಗಿರ್ದವೀರರ್ಕಳಕ ।ಚಗ್ರಹಣಮಂಮಾ
ಡಿಕೊಂಡುಬಹೆನೆನುತಲಕ್ಷ್ಮಣನಪೊಂದೇರ್ಗಡರ್ದು ॥ ವ್ಯಗ್ರದಿಂಲವನೈ
ತರಲ್ಕುಶನಶರಹತಿಯ । ನಿಗ್ರಹಕ್ಕೊಳಗಾಗಿಮೂರ್ಛೆಯಿಲ್ಲದೆಕಪಿಗ ।ಳಾ
ಗ್ರಣಿಗಳುಳಿದಿರ್ದರೀರ್ವರದರೊಳ್ಜಾಂಬವನೊಳೆಂದನಾಹನುಮನು ॥೩೭॥
ಕಂಡಿರೇಜಾಂಬವರೆರಾವಣಾದಿವೀರರಂ । ದಿಂಡುಗೆಡಪಿದಬಳಿಕರಣದೊಳು

ಸುರಿರ್ದರಂ! ಮುಂಡೆವಿಡಿದೆಳದೊಯ್ವೆನೆಂದುಸೀತಾಸುತಂಬಂದಪಂನಾವಿ
ವನೊಳು ॥ ದಂಡಿಗಾರೆನ್ನನಮ್ಮನೀಬಾಲಕಂಪಿಡಿದು । ಕೊಂಡುಪೋಗಲಿ
ಜಾನಕಿಯಪೊರೆಗೆದೇವಿಕೃಪೆ।ಯಿಂಡಿಂಗರಿಗರೆಂದುಪಾಲಿಸಲಿಮೇಣುಳಿಯ
ಲೆಂದನಾಹನುಮಂತನು ॥೩೯॥ ಕೆಡದಿರ್ದರಿಲ್ಲರಂನೋಡಿರಣರಂಗದೋ।
ಳ್ಮಿಡುಕಿಪಾತಾಡುವಿವರಂಕಂಡುಲೀಲೆಯಿಂ । ಪಿಡಿದುಲವನೆಳತಂದುಕಾ
ತುಕದಕಪಿಗಳೆಂದಣಂಗೆತೋರಿಸಲ್ಕೆ ॥ ಕಡುಮೆಚ್ಚಿತಮ್ಮನಂಕುಶನಪ್ಪಿ
ದಂಬಳಿಕ।ಪಡೆದತಾಯಂಕಾಣಲಾಸ್ಸವಗಪತಿಗಳಂ।ಬಿಡದನಿಬರಾಭರಣ
ಮನಿತವಂಕೊಂಡೀರ್ವರುಂಬಂದರಾಶ್ರಮಕ್ಕೆ ॥೪೦॥ ಏನಾದಪರೊತನ
ಯರೆಂದುಚಿಂತಿಸುತಿರ್ಪ।ಜಾನಕಿಗೆರಾಮಾದಿಗಳಭೂಷಣಂಗಳಂ। ಕಾನ
ನದಬೇಂಟೆಯೊಳ್ಸಿಕ್ಕಿಸೀಕರಿಗೊಂಬಮೃಗಪೋತಕಂಗಳಂತೆ॥ಮೌನದಿಂ
ಮೃಯುಡಿಗಿನೊಂದಿಳಿತಟಕೆಬಿದ್ದ । ವಾನರಶ್ರೇಷ್ಠರಂತಂದಿತ್ತುಭರಣ
ದೋ।ಳ್ಸೂನುಗಳ್ಪೊಡಮಡಲ್ಕಾಸೀತೆನಡನಡುಗಿನಂದನರ್ಗಿಂತೆಂದಳು॥
ಆರುಮರಿಯದವೋಲೀಕಾನನದೊಳಿರ್ದೆನಾಂ। ಧಾರುಣೀಶರಭೂಷಣಂಗ
ಳೀತಕೆನಮಗೆ।ವೀರಕಪಿವರರಿವರ್ಜಗದೊಳಭಿಮಾನಿಗಳ್ಭಂಗಮೇಕಿಂತಿವ
ರ್ಗೆ॥ಘೋರಕರ್ಮಂಗಳಿಂಮಾಡಿದಿರಿಮಕ್ಕಳಿರ । ದಾರಿದಪ್ಪಿದಿರಿನ್ನುವಾ
ಲ್ಮೀಕಿಮುನಿವರಂ। ಬಾರದಿರನೀಗಳಿರಣದೊಳಿವರನಿರಿಸಿಬಹುದೆಂದಳವನಿ
ಜೆಲವಂಗೆ ॥೪೧॥ ವೈದೇಹಿನುಡಿದುದಂಕೈಕೊಂಡುಲವನವರ।ನೊಯ್ದುರ
ಣಮಧ್ಯದೊಳ್ಮಗುಳಿರಿಸಿಬಂದನಿದ। ನೈದೆನಾರದನಿಂದಕೇಳ್ದುವಾಲ್ಮೀಕಿ
ಮುನಿಪಾತಾಳಲೋಕದಿಂದ ॥ ಮೈದೋರಲಾಶ್ರಮದ್ವಾರದೊಳ್ಕಂಡು
ಮೇ।ಲ್ವೈದುಕ್ಕುವಾನಂದರಸದಿಂದವಂದನಂ। ಗೈದಳವನಿಜೆಮಣಿದರೆಲ್ಲ
ರುಂಜಾನಕಿಯಸುತರೆರಗಿದರ್ಪದದೊಳು ॥೪೨॥ ಶರವೇದಮೂರ್ತಿಗಳತೆ
ರದಿಂದರಾಜಿಸುವ।ತರಳರಂಮಣಿದೆತ್ತಿಮಕ್ಕಳಿರನಿಮಗೆರಘು। ವರೆನಸೇನೆ
ಯೊಳಾಯ್ತುಗಡಕಲಹಮೇಕೆತೊಡರ್ಗಿತುತೋಟನಿಮ್ಮಕೂಡೆ ॥ ಧುರಕೆ
ಬಂದೆಚ್ಚಾಡಿಬಿದ್ದರಾರಾರ್ಮೈರ್ಯೆ। ಳರಿಗಳಂಬಿನಘಾಯಮಿಲ್ಲದೆತ್ತಣಬ
ಲೋ । ತ್ಕರದೇಳ್ಗೆಪೇಳ್ವುದೆನೆವಾಲ್ಮೀಕಿಮುನಿಪುಂಗವಂಗೆಕುಶನಿಂತೆಂದ
ನು ॥೪೪॥ತಂದೆನೀನಿರಲೆಮಗೆಸುಕ್ಷೇಮಕರಮಪ್ಪು।ದೆಂದೆಂದುನಿಜಮಿದೇಂ
ನಿಮ್ಮಡಿಗಳುಪದೇಶ । ದಿಂದರಿಗಳಂಗೆಲ್ದೆವೀನಿಮ್ಮಪುಣ್ಯಾಶ್ರಮದೊಳಾ
ಯ್ತುಭೂತಹಿಂಸೆ॥ಬಂದುದೊಂದಶ್ವಮದನೀಲವಂಕಟ್ಟಿದಂ। ಮುಂದಿಕವಿ
ದುದುಮೇಲೆಶತ್ರುಘ್ನನುರುಬಿದಂ । ಸಂಧಿಸಿದೆನಾಂಬಳಿಕಸೌಮಿತ್ರಿಭರತ
ರಾಮಾದಿಗಳ್ನಡೆತಂದರು ॥೪೫॥ ಕಡೆಯಮಾತೇನಿನ್ನುದೊರೆದೊರೆಗಳೆಲ್ಲ

ರಂ।ಪಡೆಯೊಳ್ಳಿ ಕಾಟಕಪಿನರಚಾತುರಂಗಮಂ।ಕೆಡಹಿದವೆನಲ್ಕು ಶನನು
ಡಿಗೆಸ್ಯೆವೆರಗಾಗಿವಾಲ್ಮೀಕಿಮುನಿಮನದೊಳು ॥ ಕಡುನೊಂದನಕಟಕಟ
ತಪ್ಪಾದುದೆನುತನಡ।ನಡುಗುತಿಹಸೀತೆಯುಂಸಂತೈಸಿವೆಹಿಲದಿಂ। ನಡೆತಂ
ದನೊಡನಿರ್ದ ತಾಪಸವಿತತಿಸಹಿತಸಂಗ್ರಾಮಭೂಮಿಗಾಗಿ ॥೪೬॥ ಶರಧಿ
ಯುಂಕಟ್ಟುವೆಂದಾರಾಘವೇಶ್ವರಂ।ಧರೆಯೊಳಿಟ್ಟಣಿಸಿರ್ದಬೆಟ್ಟಂಗಳೆಲ್ಲಮಂ
ತರಿಸಿದಂಭೂಮಿಗಾಧಾರಮಿಲ್ಲದಪ್ಪೋಪ್ರದೆಂಪವನತನುಜಾತರು ॥ ಗಿರಿಗ
ಳಂಪ್ರತಿಯಾಗಿತಂದಿಳೆಯುಮೇಲಿನ್ನು । ಪರಪಿದರೊಪೇಳೆನಲ್ಪೊಡೆಗೆಡೆದು
ಬಿದ್ದಿರ್ದ । ಕರಿಘಟೆಗಳಟ್ಟಗಳ್ಕಣಿಸಿದುವಾರಣದೊಳಾತಪೋನಿಧಿಯಕ
ಣ್ಗೆ ॥೪೭॥ ಘಟ್ಟುಗೆಡಹಿದವಾಜಿವಾರಣವರೂಥದಿಂ।ದಿಟ್ಟಣಿಸಿಬಿದ್ದ ರಾಕ್ಷ
ಸಮನುಜಕಪಿಗಳಿಂ। ಘಟ್ಟನಗಸಕೆಚೆಲ್ಲಿರುವಛತ್ರಚಾಮರಪತಾಕೆಗಳಮ
ದೆಗಳಿಂದ ॥ ಒಟ್ಟೊಟ್ಟಲಾಗಿಸೂಸಿದಪಲವುಕೈದುಗಳ । ಬೆಟ್ಟಂಗಳಿಂಮಿ
ದುಳ್ಳಿನವಸೆಕರುಳ್ಗಳಿಂ। ಕಟ್ಟುಗ್ರಮಾದರಣರಂಗದೊಳ್ವಾಲ್ಮೀಕಿಮುನಿ
ರಾಮನಂಕಂಡನು ॥೪೮॥ಅಂದುಪುರಹೂತವೈರಿಯುಸರ್ಪಶರದಿಂದ।ಲೊಂ
ದಿದಸಮಸ್ತಬಲಸಹಿತಬಿದ್ದಚ್ಚರಳಿ । ದಂದದಿಂನಸುಮಸುಳ್ದನನದನಿಶಿ
ಯತಾವರೆಯೊಲಾಗಿಹಕಣ್ಗಳ ॥ಕಂದಿದವಯುವದಕಾಂತಿಗಳಕರಪಂಕರು
ಹ।ದಿಂದಕೆಲಕೋಸರಿಸಿಟಿದ್ದಬಿಲ್ಲಂಬುಗಳ ॥೪೯॥ ಈಕ್ಷಿಸಿಕಮಂಡಲೋ
ದಕದಿಂದಮುನಿವರಂ । ಪ್ರೋಕ್ಷಿಸಿದೊಡುರಗತಲ್ಪದೊಳುಪ್ಪವಡಿಸುವ ।
ಬ್ಜಾಕ್ಷನೇತಪ್ಪದೆಂಬಂತೆಕಣ್ದೆರೆದುವಾಲ್ಮೀಕಿಮುನಿಗಭಿನಮಿಸಲು ॥ ಸಾ
ಷ್ಟಾಙ್ಗಗನ್ನಾಥಸರ್ವಕಾರಣರಕ್ಷ । ರಾಕ್ಷಸಾಂತಕಭಕ್ತವತ್ಸಲಕ್ಷ್ಮಾಪಾಳು
ನಿರ।ಪೇಕ್ಷರಾಘವರಾಮಚಿತ್ತಾವಧಾನವೆಂದಾಮುನಿಪ್ರೌಗಳುತಿರ್ದನು ॥
ಬಳಿಕರಾಘವನಸಿರಿಮುಡಿಗೆನಭದಿಂದಪ್ರು।ಮಳೆಗರೆದುದುತ್ಸವದೊಳಮರ
ದುಂದುಭಿಗಳುರೆ । ವೊಳಗಿದುವುಋಷಿಮಂತ್ರಪೂತಜಲದಿಂದಭರತಾದಿಗ
ಳ್ಜೀವಿಸಿದರು॥ತಳಿದರನಿಮಿಷರಮೃತಮಂಬಿದ್ದಪಡೆಯುಮೇ । ಲುಳಿಯು
ದೆಸಮಸ್ತಸೈನಿಕಮೆದ್ದುದಾದಪರೆ। ಗಳೆದಫಣಿಕುಲದಂತೆನಲಿದುದುಚತು
ರ್ಬಲಂಪೇಳಲೇನಚ್ಚರಿಯುನು ॥೫೦॥ ಬರಿಸಿದಂನೆನೆದುಸುರಧೇನುವಂವಾ
ಲ್ಮೀಕಿ।ಪರಮಸಂಪ್ರೀತಿಯಿಂಬೇಡಿದಪದಾರ್ಥಮಂ । ತರಿಸಿದಂದುಗ್ಧಾಭಿ
ಷೇಕಮಂಮಾಡಿಸಿದನಾರಾಘವೇಶ್ವರಂಗೆ॥ ಭರತಾದಿಗಳ್ವೆರಗಿಕುಳ್ಳಿರ್ದಬ
ಳಿಕಪತಿ।ಕರಿಸಿಕಾಕುತ್ಸ್ಥನಂಕೊಂಡಾಡಿನೇಮದಿಂ । ಕರೆಸಿಕುಶಲವರಂ
ಪದಾಬ್ಜದೊಳ್ಕೆಡಹಿಮುನಿವರನೊಯ್ಯನಿಂತೆಂದನು ॥೫೧॥ ರಾಜೇಂದ್ರ
ಕೋಪಮಂಮಾಡದಿರ್ನಿನ್ನಂಕ್ರ।ವಾಜಲಧಿಯುಂದುವೂರೆಯೊಕ್ಕರಂಕಾ

ವನೆಂ। ದೀಜಗಂಬಣ್ಣಿಪುದುನಿನ್ನತನುಸಂಭವಜಾನಕಿಯುಮಕ್ಕಳಿವರು॥
ಓಜೆದಪ್ಪಿದರಾಶ್ರಮದೊಳಿದ್ದುದಿಲ್ಲಮಲು। ಯೋಜನಕೆವರುಣಂಕರೆಸಲಾಗಿ
ಪೋದೆನೀ। ವ್ಯಾಜಮುಂತಾನರಿಯೆನಪರಾಧಮೆನಿತುಳ್ಳೊಡಂಸೈರಿಸುವುದೆಂ
ದನು ॥೫೩॥ ಜಾತಂವಿನೀತನಾಗಲಿಧೂರ್ತನಾಗಿರಲಿ। ತಾತಂಗೆವಿರಹಿತವ
ಮಾಡದೀಬಾಲಕರ। ತೀತಮುಂಕ್ಷಮಿಸೆಂದುವಾಲ್ಮೀಕಿನುಡಿಯೆರಾಜೀವನೂ
ರ್ಮಿಳಾಪತಿಯುನು॥ಸೀತೆಸುತರಂಪಡೆದಳೆಂತೆನೆತವಾಜ್ಞೆಯಿಂ । ಶ್ವೇತನದಿ
ಯುಂದಾಂಟಿಪೂರ್ಣಗರ್ಭಿಣಿಯಾದ । ಭೂತನುಜೆಯಂಕಾನನದೊಳಿರಿಸಿ
ಬಂದೆನಲ್ಲದೆಮುಂದರಿಯೆನೆಂದನು ॥೫೪॥ ಇಂತೆಂದುಲಕ್ಷ್ಮಣಂನುಡಿಯೆ
ವಾಲ್ಮೀಕಿಸಮ। ನಂತರದೊಳೇಕಾಕಿಯಾಗಿಜಾನಕಿವಿರಹ। ಸಂತಾಪದಿಂದ
ಡವಿಯೊಳ್ಪೊಳಲುತಿರ್ದುದಂಕಂಡುತನ್ನಾಶ್ರಮಕ್ಕೆ ॥ ಸಂತೈಸಿಕೊಡೆ
ಕೊಂಡೊಯ್ದುದಂಬಳಿಕಲ್ಲಿ। ಸಂತತಿಗಳಾದುದಂತಾನವರ್ಗಿಲ್ಲಿಪರಿ। ಯಂತ
ರಂಮಾಡಿಸಿದಕೃತ್ಯಂಗಳೆಲ್ಲಮಂಪೇಳ್ದಂರಘೂದ್ವಹಂಗೆ ।೫೫॥ ಬಳಿಕವಾ
ಲ್ಮೀಕಿನಿಜಶಿಷ್ಯರಂಸಗನಕ್ಕೆ। ಕಳುಹಿತರಿಸಿದನಮಲವಲ್ಲಕಿಗಳಂತನ್ನ। ಬ
ಳಿಯೊಳಭ್ಯಾಸಮಂಮಾಡಿಸಿದರಾಮಚಾರಿತ್ರಮಂತುದಿಪೊದಲ್ಗೆ ॥ ಲಲಿತ
ಸಾಳಂಗಸಾವೇರಿಗುರ್ಜರಿಗೌಳ। ಪಳಮಂಜರಿಗಳೆಂಬವಿವಿಧರಾಗಂಗಳಿಂ।
ಬಳಸಿಮಾಡಿಸಿದನೆರಡನೆಯತುಂಬುರನಾರದರತೆರದಿಕುಶಲವರನು ॥೫೬॥
ವೀಣೆಯಂಕೈಗಿತ್ತುಬಾಲಕರವದನದೊ। ಳ್ವಾಣಿತಾಂನೆಲಸಿದಳೊಗಾನ
ದೇವತೆಯುಕ್ಕೆ। ಗಾಣಿಕೆಯೊಮೋಹನದತನಿಸವೋಸೊಗಯಿಸುವಕರ್ಣಾ
ಮೃತವೊಪೇಳೆನೆ॥ಜಾಣಣ್ಮೆಜೋಕೆಯಿಂಚರರೀತಿತಾಳಪ್ರ। ಮಾಣಕಂ
ಪಿತಮೂರ್ಛೆಸ್ವರಮಾಡುಚೆದಗುಬಿ । ಸ್ಥಾಣಲಯಮಾಹತಪ್ರತ್ಯಾಹತ
ವ್ಯಾಪ್ತಿಗಳನರಿದುಮಾಡ್ದರವರು ।೫೭॥ ಸ್ಥಾಯಿಸಂಚಾರಿಗಳಸರಿಗಮಪ
ದನಿಸಪದ। ದಾಯುತದಶುದ್ಧಸಂಕೀರ್ಣಸಾಳಗದಪ್ರೌ। ರಾಯುತಸುತಾನಂಗ
ಳಂತಾರಮಧ್ಯಮಂದರದಿಂದಸೊಗಸುಗೊಳಿಸಿ॥ಗೇಯರಸಮೊಸರೆಮಾಡಿದ
ರಮರ್ತ್ಯನುತರಾ। ಮಾಯಣದಸುಶ್ಲೋಕಮಾಲೆಯಂಕೇಳ್ದರಘು। ರಾಯನು
ರೆಮೆಚ್ಚಿಕೊಂಡಾಡಿನಸುನಗೆಯಿಂದಸೌಮಿತ್ರಿಗಿಂತೆಂದನು ॥೫೮॥ ಭಾವಿ
ಸೆಲೆಸೌಮಿತ್ರಿಬಾಲಕರಸುಲಲಿತವ। ಚೋವಿಲಾಸಂಗಳಂಸ್ವರದಿಂದರೂ
ಪಿಂದ। ಲಾವಣ್ಯದಿಂದಗತಿಯಿಂದಚೇಷ್ಟೆಗಳಿಂದಸೀತೆಯುಂನೆನಯಿಸುವವು
ದೇವಿಯನಗಲ್ದವಿರಹಾಗ್ನಿಸುತದರುಶನದ। ಜೀವನದೊಳುರೆನಂದಿತಾವುದಿ
ನಕುಲವೇಳ್ಗೆ। ಭೂವಲಯದೊಳ್ತಂನಬಾಣಮಂಬಂಜೆಗೈದಪರೆಪೌರಬಿ
ಗರೆಂದನು ॥೫೯॥ ರಾಯನಾಡಿದನುಡಿಗೆನಸುನಗುತಲಕ್ಷ್ಮಣಂ। ಪೇಯ್ಯ

ನಿಂನಂಬುಗಳುನೋಘವಾದಪುವಪರ। ಸಾಯಕದೊಳೀತಗಳ್ಕಿನ್ನ ಸುತ
ರದರಿಂದನೆಲೆಗೊಂಡುದಾತ್ಮ ಶಕ್ತಿ ॥ ಈಯುವಮೆಳರಂಪರಿಗ್ರಹಿಸೆಂದೊಡಾ
ಕೌಸಲೇಯನತಿಧನ್ಯರಾವೆಂದುವಾಲ್ಮೀಕಿಯುಂ । ಪ್ರೀಯೋಕ್ತಿಯಿಂದ
ಕೊಂಡಾಡಿಸುಕುಮಾರರಂಕರೆದಾಗಳಿಂತೆಂದನು ।೬೦॥ ಆತತನುಜಾತರ
ಲೆಮಕ್ಕಳಿರನಿಮಗಿನಿತು । ವೀರತ್ವಮೆತ್ತಣದುಪೇಳ್ವುದೆಂದಾತ್ಮಜರ ।
ನಾರಾಘವಂಕೇಳ್ದೊಡವರಾಪುಜಾನಕಿಯುಗರ್ಭಸಂಭವರೆವ್ಮನು ॥ ಆ
ರೈದುವಾಲ್ಮೀಕಿಮುನಿಸಲಹಿಸಕಲವಿ । ದ್ಯಾರಾಜೆಯುಂಕಲಿಸಿದಂದೇವನಿ
ಷ್ನಪದ ।ವಾರಿಜಕೆದ್ರೋಹಮಂಮಾಡಿದನ್ವಸ್ಯರಿಸುವುದೆಂದೆರಗಿದರ್ಸದಡೊ
ಳು ॥೬೧॥ ತನಯರಂತೆಗೆದೊಡನೆಮುಂಡಾಡಿಬಿಗಿಯುಪ್ಪಿ । ಘನತರದಸ್ನೇ
ಹದಿಂಶಿರವನಾಘ್ರಾಣಿಸಿವ ।ದನವನೊಡನೊಡನೆಚುಂಬಿಸಿಮತ್ತೆಮತ್ತೆ ವಾ
ಲ್ಮೀಕಿಯುಂಮಿಗೆಪೊಗಳುತ ॥ ಅನುಜರಿಂದೊಡಗೂಡಿರಘುವರಂಸಂತೋ
ಷ ।ವನಧಿಯೋಳ್ಮುಳುಗಿದಂಸುಕುಮಾರರಂಕಂಡು । ಕೊನರಿತುಸಮಸ್ತ
ಪರಿವಾರಮುತ್ಸವದಿಂದಮೊಳಗಿದುವುವಾದ್ಯಂಗಳು ॥೬೨॥ ಬಳಿಕವಾಲ್ಮೀ
ಕಿಯುಂಸಂತೈಸಿಸೀತೆಭೂ । ತಳವರಿಯೆಪರಿಶುದ್ಧೆಲೋಕಾಪವಾದಕ್ಕೆ ।ಕ
ಳದೆನೆಂತಾದೊಡಂಪುತ್ರರಂಪಡೆದಳಿನ್ನರವರಿಸದನ್ನಬಳಿಗೆ ॥ ಕಳುಹೆಂದು
ಬೀಳ್ಕೊಂಡುಸುತಸಹೋದರರೊಡನೆ । ದಳಸಹಿತಹಯವರಂವೆರಸಿನಿಜ
ಪುರಕೆಬಂ। ದುಳಿದಿರ್ದಯಜ್ಞಮಂನಡೆಸಿದಂಮೂಜಗಂಪ್ರೇಗೆಳಲ್ಕೆರಘು
ನಾಥನು ॥೬೩॥ ಇತ್ತನಿಜತನುಜರಂಕಳುಹಿವಾಲ್ಮೀಕಿಮುನಿ।ಪೋತ್ತಮಂ
ಬರಲಾಶ್ರಮದ್ವಾರದೋಳ್ಕಂಡು । ಚಿತ್ತದೋಳ್ಮರುಗುತೇನಾದರೆಲೆತಾತ
ಕುಶಲವರೊಡಲ್ವಿಡಿವೆನೆಂತೊ ॥ ಪೆತ್ತಂದುವೊದಲಾಗಿಪತಿವಿರಹಮಂಮ
ರೆದು। ಪೋತ್ತಿರ್ದನೀದೇಹಮಂತನ್ನಸುತರನಾ । ಗಿತ್ತುನೀನೈತಂದೆತಂದೆ
ಹೇಳೆಂದುಜಾನಕಿಬಿದ್ದಳಂಘ್ರಿಗಳ್ಗೆ ॥೬೪॥ ಮಣಿದೆತ್ತಿಸೀತೆಯುಂಸಂತೈಸಿ
ಮಗಳೆನಿಂ । ನಣುಗರಂತಂಪುತಾತಂಕೂಡಿಕೊಂಡೊಯ್ದು । ನೆಣಿಕೆಚೇಡಿ
ದಕಿಂನುನಿನ್ನನುಂಕಾಂತನಲ್ಲಿಗೆಕಳುಹಿಬಪ್ಪೆನೆಂದು ॥ ಗುಣದಿಂದೊಡಂ
ಬಡಿಸಿವಾಲ್ಮೀಕಿಮುನಿವರಂ । ಮಣಿರಥವನೇರಿಸಿಸಮಸ್ತವೈಭವದಿಂಧ।ರ
ಣಿಜೆಯುತಂದಯೋಧ್ಯಾಪುರದೊಳಿರಿಸಿರಘುನಾಥನಂಕಾಣಿಸಿದನು ।೬೫॥
ಮೇಲೆಜಾನಕಿಸಹಿತರಾಘವಂಸಾಮ್ರಾಜ್ಯ ।ಲೋಲನಾಗಿರ್ದನೆಲೆಜನಮೇ
ಜಯಕ್ಷಿತೀ।ಪಾಲಕೇಳ್ದೈಕುಶಲವರೊಡನೆರಾಮಂಗೆಬಂದಕದನದಕಥೆಯ
ನು ॥ ಮೂಲೋಕಕಿದುಪುಣ್ಯಮತಿರಮ್ಯಮಾಗಿರ್ಪ । ದಾಲಿಪರ್ಗಾಯು
ರಾರೋಗ್ಯಮೈಶ್ವರ್ಯಂವಿ ।ಶಾಲಮತಿಸತ್ಕೀರ್ತಿವಿಮಲಸಂತತಿಸುಗತಿದೊರೆ

ಕೊಂಬುದಿಹಪರದೊಳು ॥೬೭॥ ಅರಸನೀಂಬೆಸಗೊಳಲ್ಪೇಳ್ದ ನಾಂಕುಶರಾಘ । ವರಯುದ್ಧಮಂಕರ್ಣಫಲುಗುಣರಕಾಳಗವ । ನೊರೆಯಲೇಕಿಂನು ಕೇಳ್ದರಿವಲ್ಬೈಬಭ್ರುವಾಹನಪಾರ್ಥರಾಹವವನು ॥ ವಿರಚಿಸುವೆನೋಲಿದಾಲಿಸೆಂದುಜೈಮಿನಿಮುನೀ । ಶ್ವರನಿಂದುಕುಲತಿಲಕಜನಮೇಜಯಂಗೆವಿ । ಸ್ತರಿಸಿದಂದೇವಪುರನಿಲಯಲಕ್ಷ್ಮೀಶನಂಚಿತ್ತದೊಳ್ಳಾಘ್ಯನಿಸುತಲು ॥೬೭॥

ಸಂಧಿ೨೧ಕ್ಕೆ ಪದ್ಯ ೧೧೧೭ಕ್ಕೆ ಮಂಗಳಮಸ್ತು.

---

## ಇಪ್ಪತ್ತೆರಡನೆಯ ಸಂಧಿ.

ಸೂ. ಸತ್ವದಿಂದೊದಗಿದರ್ತ್ತಮತಮಗೆರಣಸಾಹ । ಸತ್ವದಿಂಪ್ರದ್ಯುಮ್ನಮೊದಲಾದಪಟುಭಟ । ರ್ಸತ್ವರದೊಳೆಚ್ಚಾಡಿಹರ್ಬಭ್ರುವಾಹನಧನಂಜಯುತ್ಸಂಗೆರದೊಳು

ಅರಸಕೇಳರ್ಜ್ಜುನಂಬೈದುನೂಕಿದಬಳಿಕ । ತರಿಸಿದಸುವಸ್ತುಗಳನಧ್ವರದತುರಗವಂ । ತಿರುಗಿನಿಜನಗರಿಗಕಳುಹಿಬಭ್ರುವಾಹನಂಸಮರಕನುವಾಗಿನಿಲಲು ॥ ಧರಣಿಮಂಡಲಮಂಚತುರ್ಬಲಂಗೀರ್ವಾಣ । ಸರಣಿಮಂಡಲಮಂಧ್ವಜಛತ್ರಚಾಮರಂ । ತರಣಿಮಂಡಲಮಂಚಮೂಪದಹತೋದ್ಧತರೇಣುವ್ರಜಂಮುಸುಕಲು ॥೧॥ ಅರ್ಬುದಗಜಂಪತ್ತುಕೋಟಿಸುವರೂಥಮೆರ । ಡರ್ಬುದತುರಂಗಮುಂಕೂಡಿದಪದಾತಿಮೂ । ರರ್ಬುದಂಜೋಡಿಸಿದುದಾಹವಪ್ರಾರ್ಥರ್ಸುಬುದ್ಧಿಮೊದಲಾದಭಟರು ॥ ಸರ್ಬಸನ್ನಾಹದಿಂದೊತ್ತರಿಸಿತೆತ್ತಣ। ಚತುರ್ಬಲಮೊಕಮಲಜನಸೃಷ್ಟಿಯೊಳಗೃಪ್ಟಮನೆ। ಪರ್ಬಿದುದುನೆಲದಗಲ್ಕಾಬಭ್ರುವಾಹನಂತರಿಸಿದಂಮಣಿರಥವನು ॥೨॥ ಚಿತ್ರಶೋಭಿತವಾದಮಣಿಮಯವರೂಥಮಂ । ಚಿತ್ರಾಂಗದೆಯತನೂಭವನಡರ್ದಂಕೂಡೆ । ಚಿತ್ರವಾದುದುಸಮರಮೆರಡುಥಟ್ಟನಚೂಣಿಸಂದಣಿಸಿತುರುವಣಿಯೊಳು ॥ ಮಿತ್ರಮಂಡಲವನೊಡದೈದುವತಿಭರದಿಂದ । ಮಿತ್ರಭಟರಂತಾಗಿದರ್ಕಡುಗಲಿಗಳಾಗ । ಮಿತ್ರಭಾವದನೇಹದಿಂದಮರುಗದೆಮಾಣದಂಭೋರುಹಂಗಳೆನಲು ॥೩॥ ತೇರವಂಗಡದಜರ್ಝರಪಂಗಜದಘಂ । ಟಾರವಂಹಯದಹೇಷಾರವಂಪುದಿದನಾನಾರವಂವಾದ್ಯದಮಹಾರವಂಬಹಳಕಹಳಾರವಂಸಂಗಡಿಸಿದ ॥ ಜ್ಯಾರವಂಭಟರಬಾಹಾರವಂದಳದಬಂ । ಭಾರವಂರಣಕಿಲಿಕಿಲಾರವಂಪಟಹಥ । ಕ್ಕಾರವಂಪುದಿದನಾನಾರವಂಕಿವಿಗತಿಕಠೋರವಂತೀವಿತಂದು ॥೪॥ ಸಿಂಧಸೀಗುರಿಛತ್ರಚಾಮರಪತಾಕೆಗ । ಳ್ಸಂದಣಿಸಿಗಗನಮುಂಮುಸುಕಲ್ಕೆತನಮೂಡಿ । ದಂಧಕಾರಂಗ

ಳಂಕೆಡಿಸಿದುವುರತ್ನಾಭರಣಕಾಂತಿಗಳ್ಭೂಪರ ॥ ಕೆಂಧೂಳಡರ್ದ್ದನೆಳ
ಮಂಮುಸುಕಿತಾಗಸುರ । ಸಿಂಧುಪ್ರವಾಹಮುತ್ತುಂಗಶೋಣಾಚಲದ ।
ಬಂಧುರತಟಪ್ರದೇಶದೊಳೊಪ್ಪುವಜ್ರರದನಿಧಿಯೆಂಬತೆರನಾಗಲು ॥ ೫ ॥
ಚೂಣಿಯೊಳ್ಬರೆಸಿಪ್ಪೊಯ್ದಾಡಿದರ್ತಮತಮಗೆ । ಬಾಣತೋಮರಪರಶು
ಚಕ್ರಮುಸಿಮುದ್ಗರಕ್ಕ । ಪಾಣಡೊಂಕಣಿಕುಂತಸುರಗಿಶಲ್ಯಹಳಿಕ್ಕೆಮೊದ
ಲಾದಕೈದುಗಳೊಳು ॥ ಕೇಣಮಿಲ್ಲದೆಚಾರಿಚಳಕಚಾಳಿಯುಚದುರ್ವಾಣಿ
ಲಾಘವಸಂಘಮಾಡುಗಳನರಿದುಬಿಂ । ನಾಣದಿಂಘಾಯಗೊಳಿಸಿದರತಿಬಲ
ರಲ್ಲಿನಾನಾಪ್ರಹಾರದಿಂದ ॥೬॥ ತೂಳಿಸಿದರಾನೆಯುಂಬೋಧರರುರುವಣಿಸಿ
ದುವಾಳಿಸಿದರುಬ್ಬಿದ್ದ ಲಾವ್ರತರ್ತ್ತೇಜಿಯುಂ।ಕೇಳಿಸಿದರಾಹವದನಾಟ್ಯಮಂ
ರಂಗದೊಳ್ಬಿಟುಲಪಟುಭಟರಥಿಕರು ॥ ಏಳಿಸಿದರಾಳ್ತನದಪಂಥಮಂಕಾ
ಲವ ।ಬೀಳಿಸಿದರಹಿತರಂಪೊಯ್ದಾಡಿತಲೆಯುಂನಿವಾಳಿಸಿದರಾಳ್ಬಂಗಕೈದು
ಗಳಹೋರಟೆಯುಬಣಿಬಟಲರಭಸದಿಂದ ॥೭॥ ಕಾರ್ಮುಗಿಲಸಿಡಿಲರವದಂದ
ಮಾಗಿರೆಕರದ । ಕಾರ್ಮುಕಧ್ವನಿಮಿಂಚಿನಂತೆಪೊಳೆಪೊಳೆವಪೊಂ । ದೇರ್ಮೆರೆ
ಯೆಶರವರ್ಷಮಂಕರೆದ್ವ್ರತರ್ಜುನನಸಮ್ಮುಖಕೆಬಂಧುನಿಂದು ॥ ಮಾರ್ಮಲೆ
ಯುಬಾರದಯ್ಯನೊಳೆಂದುಕಂಡುನಾಂ । ಕೂರ್ಮೆಯಿಂದರಗಿದೊಡೆಜರಿಗೆ
ಲಾರಣದೊಳಿಂ । ನಾರೆರ್ಮ್ಮೆಗೆದೊಡಂಜ್ಯೆಸದೊಡೆನಿನ್ನ ಸುತನಲ್ಲೆ ನುತಪಾ
ರ್ಥಿತೆಗೆದೆಚ್ಚ ನು ॥೮॥ ಪಾರ್ಥನರಸಂಘಮಲ್ಲಿಂದುಪೇಳಲ್ಕೆವುರು ।ಪಾರ್ಥ
ಮಂನಾಪ್ವೆಲಾನಿಂನಪೌರುಷವನಸ । ಕೀರ್ತಿಗಂಜುವನಲ್ಪಿತನಂಪಚಾ
ರಿಸುವೆಮತ್ತೆ ಕಾಳಗಕೆಬಂದು ॥ ಧೂರ್ತನಹೆನೀನೆನುತನುಸುನಗೆಯೊಳಿ
ದಿರಾಗಿ । ಪಾರ್ಥನಕುಮಾರನಂಘಾತಿಸಿದನೊಂಭತ್ತು । ಕಾರ್ತಸ್ವರಾಂಕಿ
ತಸುಪುಂಖದಿಂದೆಸೆವಬಾಣಂಗಳಿಂನುಸಾಲ್ವನು ॥ ೯ ॥ ಕೃತವಕದೆಸುಗೆ
ಯೊಳಿಂನಸಾಹಸಮಿನಿತೊ । ಮೃತಲೆಗಳಸಿಬಂದುದಾಹವಕೆಪೊಸತೆನು
ತ । ಕೃತನಕದಿಂದೆಚ್ಚ ನನುಸಾಲ್ವನಂನೂರುಬಾಣದಿಂಪಾರ್ಥಸೂನು॥
ಏತರಲಪಂಮಥ್ರವಾರ್ಗದೊಳ್ತೆಗೆಡಿದು।ವೃತೇಯುರಾಜಂಕನಲ್ದಾಗ
ಬರಸಿಡಿಲ । ಹೊಯಿಗಿಂನುಡಿಯಾದಕಣಗಳಂಕವಿಸಿದಂಬಭ್ರುವಾಹನನ
ಮೇಲೆ ॥ ಉಬ್ಬಿದುದುಮ್ಯರೋಷದಿಂದಗಂಟಿಕ್ಕಿದುವು । ಪುಬ್ಬುಗಳ್ಬಭ್ರು
ವಾಹಂಗೆತೆಗೆತೆಗೆದೆಸುತ । ಬೊಬ್ಬಿರಿದನನುಸಾಲ್ವನಂಮುಸುಕಿದುವು
ಕೋಟಿಸಂಖ್ಯೆಯುಪೊಗರ್ಗಣೆಗಳು ॥ ಅಬ್ಬರಿಸಿದೃತ್ಯನದಕಿಂಮಡಿಸಿಕೊ
ಲ್ಗರೆದ।ನೊಬ್ಬೊಬ್ಬರಂಜಯಿಸುವಾತುರದೊಳಿಬ್ಬಡ। ಲಿಬ್ಬರಂಗದೊಳಿ
ಡಿದುವಂಬುಗಳ್ಪರಿದುವರುಣಾಂಬುಗಳ್ಸಂಗರದೊಳು ॥೧೧॥ ಬಾಣದೋ

ಳ್ಬಣಿತೆಯೊಳ್ಬಿಲ್ಲಾಗ್ರತನದಬಿಂ। ಸಾಣದೊಳ್ಬಿಂಕದೊಳ್ತಾಳಿಕೆಯೊಳು
ರುತರ । ತ್ರಾಣದೊಳ್ ಜಯದೊಳ್ಚಮತ್ಕೃತಿಯೊಳಧಟನೊಳ್ವೀರ
ರೊಳ್ಬಾರಣೆಯೊಳು ॥ ಪಾಣಿಲಾಘವದೊಳ್ಪರಾಕ್ರಮದಪಂಥದೊ ।
ಳ್ಕಾಣೆನವರೀರ್ವರ್ಗೆಸಮವಾದಕಲಿಗಳಂ । ಕ್ಷೋಣಿಯೊಳೆನಲ್ಬಭ್ರುವಾ
ಹಾನುಸಾಲ್ವರೆಚ್ಚಾಡಿದರ್ ಸಂಗರದೊಳು ॥೧೨॥ ಕಾಳಗಂಸಮವಾಗಿಬರೆ
ಕೆರಳ್ದನುಸಾಲ್ವ। ನೇಳಂಬಿನಿಂಪಾರ್ಥಸುತನಬತ್ತಳಿಕೆಯಂ। ಕೋಲೆಂಟ
ರಿಂದಕೆಕ್ಕೆಯುವನೀರೇಳುಮಾರ್ಗಣದಿಂದಕಾರ್ಮುಕವನು ॥ ಬೀಳಲಿಕ್ಕಡಿ
ಯಾಗಿಕತ್ತರಿಸಿಕವಚಮಂ। ಸೀಳಿದಂಕೈಯೊಡನೆಸಾವಿರಸರಳ್ಗಳಿಂ । ಪೂಳಿ
ದಂತುರಗಸಾರಥಿವರೂಥಗಳಂಶಿಲೀಮುಖವ್ರಾತದಿಂದ ॥೧೩॥ ಕ್ಷಣದೊ
ಳಾಗಲೆಬಭ್ರುವಾಹನಂಮತ್ತೊಂದು। ಮಣಿವರೂಥವನಡರ್ದೆಸುತಿರ್ದನಿ
ತ್ತಲುರು । ವಣಿಸುವನುಸಾಲ್ವಂವಿರಥನಾಗಿಕೊಂಡನುರುಗದೆಯನೀಪಾ
ರ್ಥಸುತನ॥ ರಣಚಮತ್ಕಾರಮೆಂತುಟೊತನ್ನಮೇಲಕಿ। ಟ್ಟಣಿಸಿಬಹದಾನ
ವನನೆಚ್ಚೆಡುಚ್ಚಳಿಸಿಕೂ। ರ್ಗಣೆಗಳಡಗಿದುವಿಳೆಯೊಳಸುರೇಂದ್ರನಸವಳಿ
ದುವಸುಧೆಯುಂಪಸೆಗೈದನು ॥೧೪॥ ಅನುಸಾಲ್ವನಳವಳಿಯೆಚಾಪಮಂಜೇ
ಗೈದು। ದನುಜಾರಿತನಯನಿದಿರಾಗಿನಿಲ್ಗಲವ್ರೊತ। ನ್ನನೆಮೊದಲೆವಂದಿಸದೆ
ಪಾರ್ಥನಂಕಂಡುಕೆಡಿಸಿದರಾಜಕಾರಿಯವನು॥ ತನುವನುರೆನೋಯಿಸೇಂ
ಮೈದುನನಲಾಸರಸ। ಕನುವರದೊಳೆಚ್ಚಾಡಿನೋಡುವೆವುಕಂಗೆಡದಿ। ರೆನು
ತನಾಲ್ಕೈದುಬಾಣಂಗಳಂಬೀರಿದಂಬಭ್ರುವಾಹನನಮೇಲೆ ॥೧೫॥ ಸರಸ
ಭಾವದೊಳೆಭಾವಿಸೆಭಾವನವರಿಗಿದು । ವಿರಸವಾಗದೆಮಾಣದೀಗಸಂಗ್ರಾ
ಮದೊ। ಳ್ಸರಸಕಾರ್ಮುಕಮಿಲ್ಲಸರಸಸಿಂಜಿನಿಯಿಲ್ಲಸರಸಬಾಣಂಗಳಿಲ್ಲ॥
ಸರಸಯುವತಿಯಕಟಾಕ್ಷದನೆಂಮುಗೆಗಳಿಲ್ಲ। ಪರುಷವಾಗದೆನೋಡುರಣ
ವೆನುತಪತ್ತ್ರಸಾ । ವಿಗಕೋಲ್ಗಳಂಮುಸುಕಿಹರಿತನಯನಂಧಿಟದನಂಗನೆ
ನಿಸಿದನರ್ಜುನಿ ॥೧೬॥ ಮುಸುಕಿದಸರಳ್ಗಳಂಕುಸಿರಿದರಿದಂಕೊಡೆ। ದಸೆಗ
ಳೇನಾದುವಾಗಸಮೆತ್ತಲಡಗಿದುದು। ವಸುಮತಿಯದೆಲ್ಲಿಹುದುಶಶಿರವಿಗಳೆಡೆ
ಯಾಟದೆಸಕಂಗಳಾವೆಡೆಯೊಳು ॥ ಅಸುರರೊಳ್ನಿರ್ಜರಪ್ರಸರದೊಳ್ಮ
ನುಜರೊ। ಳ್ಪೆಸರುಳ್ಳವರಸಮರದೆಸುಗೆಯೊಳ್ಕಾಣೆನಿದು। ಪೊಸತೆಂಬತೆ
ರನಾಗೆವಿಶಿಖಮುಂಕೆದರಿದಂಬಿಸರುಹಾಕ್ಷನತನಯನು॥೧೭॥ ಕರ್ಕಶದೊಳೆ
ಸೆವಕೃಷ್ಣಾತ್ಮಜನಬಾಣಸಂ। ಪರ್ಕದಿಂದಾದಕತ್ತಲೆಯಂಕೆಡಿಸಿದುವಮು। ರ
ಕರ್ಣಳಹುದೆನೆಸರ್ವಸಾಚಿಯತನುಜನಪೊಸಮಸೆಯಪಿಶಿಖಪ್ರಭೆಗಳು॥ ಅ
ರ್ಕರಶ್ಮಿಗಳಂಧಕಾರಂಗಳಡಿಗಡಿಗೆ। ತರ್ಕಮಂಮಾಳ್ಪಂತೆಕಂಗೊಳಿಸಲಾಗ

ವೀರರ್ಕಳೆಚ್ಚಾಡಿದರ್ಬಭ್ರುವಾಹನರುಕ್ಮಿಣೀಸುತರ್ಸಂಗರದೊಳು॥೧೮॥
ಅಚ್ಚರಿಯುನಿನ್ನುಜನಮೇಜಯನರೇಂದ್ರಕೇ। ಳಚ್ಯುತನಸುತನಬಾಣಂಗ
ಳಂನಡುವಮುರಿ। ಯೆಚ್ಚನಾತನಮಣಿವರೂಥಛತ್ರವನಂಬಿನಂಬುಧಿಯ
ವೀಚಿಯಿಂದ॥ಮುಚ್ಚಿದಂಕೂಡೆಸ್ಮರನಂಗದೊಳ್ಕಣೆಗಳಂ।ಕೊಚ್ಚಿದಂಕೆ
ಲಬಲದೊಳಿಡಿದರಿಪ್ರಸೇನೆಯಂ । ಪಚ್ಚಿದಂಕೊಂದನಗಣಿತಬಲವನಾಬ
ಭ್ರುವಾಹನಂಕೊಳುಗುಳದೊಳು ॥೧೯॥ ಕಂಡುರೆಕನಲ್ದುತನೆಸುವೆಸುವ
ಕೋಲ್ಗಳಂ।ಖಂಡಿಸುತಮಿಡುಕದಂತವನತೇರೊಡನೊಡನೆ । ಚಂಡಶರ
ಜಾಲಮಂಸೈಗರೆವುತುಚ್ಚಳಿಸಿಮತ್ತೆರಿಪುಬಲದಮೇಲೆ॥ಹಿಂಡುಗಣೆಯಂಕ
ವಿಸಿಮುಂದಿಯುಂಕೊಲುತಿರ್ದ। ನಂಡಲೆದುಮೂಜಗವನೈದೆಕುಸುಮಾಸ್ತ್ರ
ದಿಂ।ದಿಂಡುರುಳ್ಚುವಶಂಬರಾರಿಗಿದಿರಾರೆನಲ್ಪುಂಡರೀಕಾಕ್ಷಸೂನು ॥೨೦॥
ಕಡಿಯೆರಾವುತರತಲೆನೆಗೆಕುದುರೆಕುದುರೆಗ । ಳ್ಮಡಿಯೆಜೋಧರ್ಕೆಡೆಯ
ಲಾನೆಗಳ್ನೆಗಳ್ದರಣ। ದೆಡೆಯೊಳ್ಪೊರಳೆಶಿರಂಪರಿಯಲ್ಕೆಸಾರಥಿಯರಥಿಯ
ತನುಸೀಳ್ಗಳಾಗೆ॥ಕಡುಪಾಂತಕಾಲಾಳ್ಗಲೊಡಲಳಿಯೆಲಳಿಯೆದ್ದು । ಪಡೆ
ಯುನುರೆಕೊಂದುವುಶರಧಿಭವನಭವನಪೂಗ । ರಿಡಿದಂಬುಗಳ್ಪ್ರಳಯುಶತ
ಕೋಟಿಕೋಟಿಯುಂಪ್ರೋಲ್ದುದಾಸಂಗರದೊಳು ॥೨೧॥ ಧರಣಿತಳದಂತೆನ
ವಖಂಡಮಯುವಾಗೆಯುಮ।ಪುರದಂತೆಬಹುನರಕಪಾಲಮಯುವಾಗೆಸಾ।
ಗರದಂತೆಭೂರಿಜೀವನಭಂಗಮಯುವಾಗೆಸಂಸಾರಚಕ್ರದಂತೆ॥ ಭರಿತಪಾ
ತಕಭಂಗಮಯುವಾಗೆಕೈಲಾಸ।ಗಿರಿಯಂತೆಶಿವಗಣವಿಲಾಸಮಯುವಾಗೆವಿ।
ಸ್ತರದನೈಮಿಶದಂತೆಪ್ರಾವೃತವಿರಕ್ತಮಯುವಾಗೆರಣಮೆಸೆದಿರ್ದುದು ॥೨೨॥
ಪೆಣಮಯುಂಮಿಾರಿಮೆದೆಗೆಡೆದಿರ್ದವಾಜಿಪಾ ।ರಣಮಯುಂಬಿಡದೆಕುಣಿದಾ
ಡುವಟ್ಟೆಗಳರಿಂ । ಖಣಮಯುಂನಿಡುಗರುಳ್ಖಂಡಮಿದುಳಡಗುಸುಂಟಗೆ
ಮಜ್ಜೆಮಾಂಸಂಗಳ ॥ ನೆಣಮಯುಂಪರಿವನೆತ್ತರಬಸೆಯುಜೆಗಿಯುದಾ ।ರುಣ
ಮಯುಂಯಕ್ಷರಾಕ್ಷಸಭೂತಭೇತಾಳ ।ಗಣಮಯುಂಸಲೆಭಯಂಕರವಾದು
ದಂದುರಣರಂಗದೊಳ್ಪ್ರದ್ಯುಮ್ನನ ॥೨೩॥ ಅರಿದಸುಂಡಿಲಕಹಳೆವಿಡಿದೂ
ದಿದುವುಕೆಲವು । ಕರಿಯುರದನಂಗಳ್ಗೆತಲೆಯೋಡಸೂರೆಗಟ್ಟು । ನರದಜಂ
ತ್ರಂಪೂಡಿದಂಡಿಗೆವಿಡಿದುಪಾಡಿದುವುಕೆಲವುತುರಗಂಗಳ ॥ಖುರಮಂಪಿಡಿದು
ತಾಳವಿಕ್ಕಿದುವುಕೆಲವುಕುಂ । ಜರಶಿರದಮುರಜಂಗಳಂಬಾರಿಸಿದುವುಕೆಲ।
ವಿರದೆಕುಣಿದಾಡಿದುವುಮರುಳ್ಗಳಾರಣರಂಗದೊಳ್ನಾಟ್ಯರಚನೆಮೆರೆಯೆ॥
ಹರಿಸುತಂತನ್ನಮೋಹರವನಿಂತೈದೆಸಂ । ಹರಿಸುತಂತಕನೊಲಿರೆಕಾಣುತ
ವರೂಥವಮಂ । ಹರಿಸುತಂದಾಬಭ್ರುವಾಹನಂಬಾತಿಯುಂಕೈಕೊಂಡುಕಣೆ

ಗನೆ ವೃತ || ಪರದಳವನೊಳಪೊಕ್ಕು ಸುಭಟರಂ ಸದೆದುಸೊ | ಪ್ಪರದಳವಳಿ
ಸಲಾಗಭೀತಿಯಿಂದೆಸೆದಸೆಗೆ | ಪರದಳವಡಿಸಿದರ್ಪ್ಪಲಾಯನವನತಿಬಲರ್ಪ್ಪಾ
ರ್ಥನಪತಾಕಿನಿಯೊಳು ||೨೫|| ಕೆಡದಕರಿಗಳಚಟ್ಟವಳಿಯುಗುಂಡುಗಳೊ
ಳಗೆ| ಮಡಿದಕುದುರೆಗಳಪೊಡೆಗಲ್ಲಪೊರಳಿಗಳೊಳಗೆ| ಕಡಿದಕೈ ಕಾಲನರರ
ಟ್ಟೆಗಳತುಂಡುಗಳಮರಮಟ್ಟೆಗಳನೆಳನೃತ || ಒಡೆದತಲೆಯೋಡುಡೋಣಿ
ಗಳಿಂದತಡಿಗೈನ್ರ| ತಿಡಿದನೆಣಪಸೆವಿದುಳ್ಗ್ಗಳಕರ್ದಮಂಗಳಿಂ| ಬಿಡದೆರುಧಿ
ರಪ್ರವಾಹಂಪರಿಯೆಸವರಿದಂಪಾರ್ಥಜಂಪರಬಲವನು ||೨೬|| ಶಕ್ರತನಯ
ನಸಂಭವಂಬಳಿಕರೋಷದಿಂ | ಚಕ್ರಾಯುಧನಸುತನಸೂತನಂಕುದುರೆ
ಯುಂ| ನಕ್ರೃಷ್ಣಜನನತುಲಚಾಪಮುಂಕತ್ತರಿಸಿವಿರಥನಂಮಾಡುತಿರಲು || ವಿ
ಕ್ರಮದೊಳಾಗಮತ್ತೊಂದುಮಣಿರಥದಿಂದು | ಪಕ್ರಮಿಸ್ಸಿದಂಕಾಳಗಕೆ
ಕೃಷ್ಣನಂದನನ| ತಿಕ್ರಮಿಸಿಮುಗುಳಾವರೂಥಮಂತಡೆಗಡಿದನಾಪಾರ್ಥಿ
ಕೊಳುಗುಳದೊಳು ||೨೭|| ಪೊಸರಥವನಳವಡಿಸಿತಂದುಹರಿಸೂನುಬಂ|
ದೆಸೆವನಾತೇರನೊಡನೊಡನೆಪಾರ್ಥನಸುತಂ| ಕುಸುರಿದರಿದಂಧುರದೊಳಿಂ
ತುಬಯಲಾದುದುವರೂಥಮೆಪ್ಪತ್ತುಬಳಿಕ || ಆಸವಳಿದನಾಬಭ್ರುವಾಹ
ನನಬಾಣದಿಂ | ದಸುರಾರಿನಂದನಂಕೂಡೆಸಂತೈಸಿಕೊಂ | ಡಸಮಬಲ
ನೋಳ್ಪಳಂಚಿದನಾಗಳೀರ್ವರ್ಗೆಮಸೆದುದಂಕೆಂಬುತಿಯೊಳು||೨೮|| ಎದ್ದು
ನಭದೋಳ್ಪಳಂಚುವರೊಮ್ಮೆಭೂತಳದೊ| ಳಿದ್ದುಹೋಗುವರೊಂಮೆಬ
ಳಸಿಮಂಡಲದಿಂದ | ಹೊದ್ದಿಹೋರುವರೊಂಮೆತಗುಳುಮುಗುಳಾಗಿತಾಗು
ವರೊಮ್ಮೆಸರಿಬರಿಯನು|| ತಿದ್ದಿತುಡುಕುವರೊಂಮೆಬಾಣಾಂಬುಧಿಯತೆರೆ
ಯೊ| ಳದ್ದಿಪೊಣರುವರೊಮ್ಮೆಮೂರ್ಛೆಯಿಂಮೈಮರೆದು| ಬಿದ್ದುಚೇತರಿ
ಸಿಕಾದುವರೊಮ್ಮೆಕೃಷ್ಣಪಾರ್ಥರತನಯರಾಹವದೊಳು|| ಧೃತಚಾಪ
ಚಾಪಲರ್ಶಸ್ತ್ರಾಸ್ತ್ರನಿಪುಣರು| ನ್ನತಸತ್ವಸತ್ವರದುಸ್ಸಹರಜೇಯರ|
ಪ್ರತಿಸಮರಸಮರಥಸಾಹಸಿಗಳೀರ್ವ್ವರುಂಗಗನಗಮನಚವೀರರು|| ಧೃತಿ
ಮಾನಮಾನಸರ್ಪ್ಪಿತಮುಖಕರ್ಕಶ| ರ್ವಿತತರಣತರಣಕರ್ಚ್ಚಂಡಭುಜಬಲ
ಯುತ| ಕೃತಕಾಷ್ಣಿಕಾಷ್ಣಿಗಳ್ಕಡುಪಿಂದಕಾದಿದರ್ಚ್ಚೇಸರದಸಂಗರ
ದೊಳು ||೩೦|| ಏಳುವಬೀಳುವಮಾರ್ದಲೆಯನುಡಿಗಳಿಂ| ಪೇಳುವಕೇ
ಳುವನಾಂಟಿದಶರಂಗಳಿಂ| ಕೀಳುವರ್ಮತ್ತುಳುವಗಾಯಮುಂವಿಕ್ರಮಾಗ್ನಿಗೆ
ಪಗೆಯೊಡಲಹವಿಯನು|| ಬೀಳುವಬಾಳುವರ್ವೀರಸಿರಿಯಂತಳೆದು| ಸೀಳು
ವರೊತ್ತುಳುವರ್ಕಣಯಿಂದರುಣಜಲದೊ| ಳಾಳುವರ್ಪ್ಪೊಳುವರ್ಕ್ಕೀಲ್ಗಳಿಂ
ದಹಿತರಂಪ್ರದ್ಯುಮ್ನಪಾರ್ಥಸುತರು ||೩೧|| ಇಂತೋರ್ವರೋರ್ವರ್ಗೆ

ಸೋಲದೆಸುಪರ್ಣಹನು|ಮಂತರಕದನದಂತೆಧರೆಯೊಳೊಪ್ಪಿಣರ್ದುಮೇ|
ಣಂತರಿಕ್ಷವನಡರ್ದುರೆಪೆಣಗಿದರ್ಬ್ಬಳಿಕರುಕ್ಮಿಣೀಯುಸಚಿವಾಕದ || ತಂತ್ರ
ವಂಕತ್ತರಿಸಲರ್ಜುನಿಯುಮೇಲೆಗದೆ | ಯುಂತೆಗದಿಡಲ್ಕವನದಂನಡುವಕಡಿ
ಗಯ್ಯ|ಲೆಂತೊದಗಿದನೊವುತ್ತೆಬಿಲ್ವಿಡಿದುಕರಿಗೂನ್ಸಪಾರ್ಥಯುಂತೆಸದೆ
ಚ್ಚಿನು ||೩೦|| ಪೊಡವಿಗಧಿನಾಥಕೇಳ್ಬಳಿಕೀವರ್ತರುಂಗಗನ|ಕಡರಿನಿಜಸತ್ವ
ದಿಂದನ್ಯೋನ್ಯಮಾರ್ದಿಸ| ಲ್ಸಿಡಿಲರಭಸದೊಳಂಬುಗಳ್ತಾಗಲುಭಯವೀರ
ಕೋಳ್ಶವಾತ್ರಕಾಗಿ||ಸಿಡಿದಂತರಿಕ್ಷದಿಂಧಾರುಣೀತಳಕೆಪೊಡೆ | ಗೆಡೆದರಾ
ಕ್ಷಣದೊಳ್ಪುರಂದರನವಜ್ರದಿಂ| ಕಡಿವಡೆದುಮೇದಿನಿಗೆಬೀಳ್ವಕುಲಗಿರಿಗ
ಳಂತೊಬ್ಬೊಬ್ಬರೊಂದುಕಡೆಗೆ |೩೧|| ಸಾಹಸಮದೆಂತೊಭೂತಳಕೆಬೀ
ಳುತಬಭ್ರು | ವಾಹನಂತರಹರಿಸುತೆಚ್ಚರಿಕೆಗುಂದದೆಮ | ಹಾಹವಕೆಬೇ
ರೊಂದುಮಣಿವರೂಥವನಡರ್ದಾಗತನ್ನಭಿಮುಖದೊಳು ||ಆಹರಿಕುಮಾ
ರನಂಕಾಣದೆಧನಂಜಯನ|ಮೋಹರವನೈದಿದಂಪಸಿದಪೇರ್ಬುಲಿಮೃಗನ|
ಮೂಹಮಂಪೊಗುವಂತೆಕಾಡಾನೆಕದಳಿಗಳತುರುಗಲಂತುಡುಕುವಂತೆ ||
ಕವಿದರಾಂತರ್ನಿಂದರುರುಬಿದರ್ತರುಬಿದ| ರ್ತಿವಿದರೆಚ್ಚರ್ಪೊಯ್ದರೊತ್ತಿದ
ರ್ಕ್ಕುತ್ತಿದ|ರ್ವಿವಿಧಾಯುಧಂಗಳಂಬೀರಿದರ್ವೀರಿದರ್ವಿಗ್ರಹಾವೇಶದಿಂದ|| ತ
ವೆತಾಗಿದರ್ತಡದರಡರಿದರ್ತೊಡರಿದ|ರ್ತಪಕದಿಂತವುತಮುಗೆಕಾದಿದರ್ಮ್ಮೋ
ದಿದ|ರ್ಬ್ಬವರದೊಳ್ಪಾರ್ಥಿಯುಂಬಳಸಿದರ್ಸ್ಸೆಳಸಿದರ್ಸ್ಸರನಸೇನೆಯಸುಭಟರು ||
ಒತ್ತರಿಸಿಫಲುಗುಣನಸೂನುಸಂಭಾನುವಂ| ಮುತ್ತಿದುದುಚಾತುರಂಗಾಳಿ
ಯಿಂಧೂಳಿಯಿಂ | ಚಿತ್ತರದಮಣಿಪುರಸ್ವಾಮಿಯುಂಭೂಮಿಯುಂಗಲೆಮು
ಸುಕಿತಾಕ್ಷಣದೊಳು || ಮೊತ್ತದಶರಾವಳಿಯುಸೋನೆಯಿಂಸೇನೆಯಿಂ |
ಮತ್ತೆಚಿತ್ರಾಂಗದೆಯುಜಾತನಂಘಾತನಂ|ಕತ್ತಿಹರಿದುದುಬಲಮಶೇಷಮಂ
ಘೋಷಮಂಘೋರತರಸಂಗರದೊಳು |೩೨|| ರಿಪುಬಲದಮುತ್ತಿಗೆಯ
ಕೋಲಾಹಲಂಗಳಂ|ವಿಪುಳಶಸ್ತ್ರಾಸ್ತ್ರಪ್ರಯೋಗಂಗಳುರುಬೆಯಂ|ಸಪ
ದಿಪ್ರಹಾರದಾಯುಧಸಮೂಹಂಗಳಂಕಂಡುಫಲುಗುಣನಸೂನು || ಕುಪಿ
ತಬದ್ಧಭ್ರುಕುಟೀಮುಖನಾಗಿವಹಿಲದಿಂ|ದ್ವಿಪಹಯವರೂಥಪತ್ತಿಗಳನಿತು
ಕವಿದವನಿ | ತಪರಿಮಿತಬಾಣಮಂಸುರಿದನರಿದಂಪೊರೆದನಂತಕಪುರದಸಿರಿ
ಯನು ||೩೩|| ಅರಸಕೇಳಾಶ್ಚರ್ಯಮಂಬಳಿಕಪಾರ್ಥಜನ | ಶರವರ್ಷದೊ
ಳ್ಸೆನೆಯುದವರಿಲ್ಲಪಾಂಡವನ | ಪರಿವಾರದೊಳ್ಕರಿತುರಗರಥದಪಾಳಿಯ
ದೊಳಿರ್ದಜನಪಂಗುಳಿದೊಳು || ಅರರೆಬಿಲ್ಗಾರತನದೇಳ್ಗೆಯುಂತುಟೊಜ
ಗ|ದ್ಭರಿತನಾಗಿಹವಿಷ್ಣುಮಾಯಾಪ್ರಭಾವದಂ|ತಿರೆಬಭ್ರುವಾಹನನಬಾಣಂ

ಗಳೆಲ್ಲರಂಮುಸುಕಿಮೋಹಿಸುತಿರ್ದುವು ॥೩೮॥ ರಂಭಾದಿಗಳಕುಚದಕುಂ
ಕುಮದೊಳಾಳ್ದಹಾ।ರಂಭಾರಿಯುಂಕದೋಳ್ಮಡಿದವೀರಾಂಗಪರಿ। ರಂಭಾ
ತಿಶಯದಸಂಮರ್ದನದೊಳಾಕ್ರಣಂಪರಿದುಸೂಸುವತೆರದೊಳು ॥ ಕುಂಭಿ
ಕುಂಭದಸುಮುಕ್ತಾಫಲಂಗಳ್ಕೌತ।ಕುಂಭಚಿತ್ರಿತಮಾರ್ಗಣದರುಚಿಗಳೊ
ಡನೆರಣ । ಕುಂಭಿನಿಗೆಬೀಳುತಿರ್ದುವುಬಭ್ರುವಾಹನನತೀವ್ರತರದೆಸುಗೆ
ಯಿಂದ ॥೩೯॥ ಮುರಿದವಗಣಿತರಥದರಾಜಿಗಳ್ತೇಜಿಗ।ಳೊತ್ತರೆದವಸುವಂ
ಮುಡಿದುವಾನೆಗಳ್ಸೇನೆಗ। ಳ್ಕಾದಿದರಿಯೊಲಾಯ್ತಖಿಳವೀರರೋಳ್ಧೀರರೋ
ಳ್ಪಾರ್ಥನಂದನನಮುಂದೆ॥ ಇರಿದುಮೆರೆಯಲ್ಕಾಣೆನೋರ್ವ್ವರಂಸರ್ವರಂ।
ನೆರೆಗೆಲ್ದನತುಳಮಾರ್ಗಣದಿಂದರಣದಿಂದ।ಹೆರೆದೆಗೆದುಕಂಡಕಡೆಗೋಡಿದ
ರೆಳ್ನೀಡಿದರ್ಜೀವದುಳಿವಂಸುಭಟರು ।೪೦॥ ತಾಗಿದಂದುಗಸೊಂಡನನು
ಸಾಲ್ವನಂಜೈಸಿ।ಬೀಗಿದಂಕರ್ನಜಂಹಂಸಧ್ವಜಂಕೆಣಕಿ । ನೀಗಿದಂಮಾನ
ವಂಯೌವನಾಶ್ವಂತಡೆದುಸೋಲ್ಬುಸುವೇಗಸಾಂತು ॥ ಸಾಗಿದಂಘುರದಿಂ
ದಸಿತಕೇತುಸೇಣಸಿತಲೆ।ದೂಗಿದಂಪರಿಭವಕ್ಕನಿರುದ್ಧನಿರಜಿಳೆಗೆ । ಬಾಗಿದಂ
ಮ್ಮೈಮರೆದುಕೃತವರ್ಮಸಾತ್ಯಕಿಗಳಿದಿರಾಗಿದಸೆಟ್ಟರು ॥೪೧॥

ಏನೆಂಬೆಸಾರಣಪಸಂತದೋಳ್ಸೆರೆದಜಂಘ। ಮಾನಿನಿವಿಮುಖಮಾದಪಿರ
ಹದಿಂತಪಿಸುವಿಭ।ಟಾನೀಕಮುಂಚೆದರಿಸದೆಮಾಣದೆಂಬಿನಿಂಪಾರ್ಥಿಯುಶಿಳೀ
ಮುಖಾಳಿ ॥ ದಾನವಮಾತಂಗಘಟೆಗೆರಗಿದವುಸ್ಯಂದನವಿ । ತಾನಮುಂಡೋ
ರುಗಳಿದುವುಗರಿಯುಗಾಳಿಯಿಂ। ಬಾನೆಡೆಗೆತೀಡಿದುವುಶತಪತ್ರದಳದಮೋಲ್ಪೈ
ದಿವಿಸುಟಂಬರಿದುವು ॥೪೨॥ ಜೋದರಾವುತರಥಿಕರಳಿದಾನೆಕುದುರೆತೇ ।
ರ್ಪ್ಪೋದುವೇಣ್ಧಸೆತಮ್ಮಿಚ್ಛೆಯಿಂಪಟ್ಟಣದ ।ಬೀದಿಗೆಕರ್ಣಡಿದಲಾಯ
ದೋಳ್ಪೊರೆಗೊಂಡರ್ಭುಪಕ್ಷಾದಿಗಳನು ॥ ಕಾದುವಕಲಿಗಳೆಲ್ಲಪಡೆಯೋ
ಳ್ಪಲಾಯನವ । ಸಾದರಿಸಿವರ್ಭಟರಪ್ರದ್ಯುಮ್ನಮೊದಲಾದ । ರಾದಿಯೋ
ಳಿದ್ದುಮೋಹಿತರಾದರಾಬಭ್ರುವಾಹನನಕೋಲ್ಗಳಿಂದ ॥೪೩॥ ಪಡೆಪಡೆ
ವುಗೆಟ್ಟುದಸೆದಸೆಗೋಡುತಿರ್ಪ್ಪುದಂ। ತಡೆತಡೆದುಕಡುಗಲಿಗಳಿಡೆಗೆಡೆವುತಿರ್ಪ್ಪ
ದಂ । ಹೊಡೆಹೊಡೆದುಪುರಕಾನೆಕುದುರೆಯುಂಕೂಡಿಕೊಳುತಿರ್ಪ್ಪುದಂ
ದೊರೆದೊರೆಗಳು ॥ ನಿಡುನಿಡುಸರಳ್ಮಾಂಟಿಮೂರ್ಛೆವಡೆದಿರ್ಪ್ಪುದಂ । ನಡ
ನಡಗುತತಿಬಲಕ್ಕೈಮರೆವುತಿರ್ಪ್ಪುದಂ। ಬಿಡಬಿಡದಫಲುಗುಣಂನೋಡಿಖ
ತಿಯಿಂದಘುಡಿಘುಡಿಸಿಕಿಡಿಕಿಡಿಯಾದನು ॥೪೪॥ ಗಾಂಡೀವಮಂತುಡುಕಿತಂ
ಕಾರಮಂಬುಜಭ । ವಾಂಡಮುಂತುಂಬಿದಿರದೆಂಬಿನಿಂಜೇಗೈದು। ತಾಂಡವ
ದಮೃಡನಸಾರೂಪ್ಯಮುಂಕೈಗೊಂಡುರೋಷತಾಮ್ರಾಕ್ಷನಾಗಿ ॥ ಪಾಂಡ

ವಂಮಣಿರಥದೊಳೆಸೆವನಡುವಗಲಪೂ ।ತರ್ಾಂಡನಂತುಜ್ವಲಿಸುತ್ತೈದಿದಂ
ಕಾಳಗಕೆ । ಕಾಂಡವದಹನದಂದುತನ್ನಮೇಲಮರಪತಿಮುಳಿದುಕದನಕೆ
ಬಪ್ಪೊಲು ॥೪೫॥ ಆನರಂಕೋಪಮಂತಾಳ್ದು ನಿಜಚಾಪಮಂ । ಜ್ಯಾನಾ
ದಮಂಮಾಡೆಹಂಸಧ್ವಜಂಕೂಡೆ ।ಸೇನೆಸಹಿತುರುಬಿದಂಪಾರ್ಥಿಯಂತರು
ಬಿದಂಕೂರ್ಗಣೆಗಳಂಕರೆವುತ ॥ಬಾನೆಡೆಯೊಳೆತ್ತಲುಂದೆಸೆದೆಸೆಯುಸುತ್ತ
ಲುಂ । ನೂನಶರಜಾಲಮಯಮಾಗಿದುರ್ದಾಸನುಂ ।ಕೇನೆಂಬೆನೆಚ್ಚರಿಯ
ಕಾಳಗದಹೊಸಗತಿಯನತಿಭಯಂಕರಮಾಗಲು ॥೪೬॥ಬಳಿಕಹಂಸಧ್ವಜಂ
ಗಾಬಭ್ರುವಾಹನಂ।ಗಳವಿಯೊಳ್ಕಾಳಗಂಪೂಣ್ದುದುಕಠೋರಮನೆ ।ದಳ
ಕೆದಳಮುಗ್ಗಳಿಕೆಗಗ್ಗಳಿಕೆಧೃತಿಗೆಧೃತಿಕೊಲೆಗೆಕೊಲೆಕೋಲ್ಗೆಕೋಲು ॥
ಮುನಿಸಿಂಗೆಮುಳಿಸುಘಾಯಕೆಘಾಯಮುಘಟಗಘ। ಟಳವಡಿಕೆಗಳವಡಿಕೆಸ
ಮಮಾಗೆದೇವಪುರ। ನಿಲಯಲಕ್ಷ್ಮೀವರನಮೈದುನಂತಲೆದೂಗೆಮೆಚ್ಚಿ ಸುರ
ರುಲಿಯೆಮೇಲೆ ... ... ॥೪೭॥

ಸಂಧಿ ೨೨ಕ್ಕೆ ಪದ್ಯ ೧೧೬೮ಕ್ಕೆ ಮಂಗಳಮಸ್ತು.

——:*:——

## ಇಪ್ಪತ್ತಮೂರನೆಯಸಂಧಿ.

ಸೂ. ಆಹವಸಮರ್ಥಕರ್ಣಜನಂಕೆಡಹಿಬಭ್ರು। ವಾಹನಂಸುರ
ನದಿಯಶಾಪದಿಂದರಿಯಲ್ಕೆ । ರಾಹುತುಡಿಕಿರ್ದಮೃತಕರಬಿಂಬದಂ
ತಿರುತಿರ್ದುದರ್ಜುನನತಲೆರಣದೊಳು ॥

ಜನಪಕೇಳರ್ಜುನನಸೈನ್ಯದೊಳ್ಬಭ್ರುವಾ।ಹನನಖಿಳವೀರರರಂಕೆಡಹಿ
ಹಂಸಧ್ವಜನೊ।ಡನೆರಣದೊಳೆಚ್ಚಾಡಿಸ್ಯಂದನಸಹಸ್ರಮಂತಡೆಗಡಿದನವ
ಪಡೆಯೊಳು ॥ ತನಿಗಲಿಗಳಾರುಸಾವಿರಮಂಪೊರಳ್ಚಿವಾ । ಹಿನಿಯನೈದ
ಕ್ಷೋಹಿಣಿಯನೊಕ್ಕಲಿಕ್ಕಿಮೇ । ದಿನಿಗವಂಮೈಮರೆದುಬೀಳ್ವಂತೆಸಿಕ್ಕಿ
ದಂಕಾಯದೊಳ್ಸಾಯಕವನು॥೧॥ ಆಸದಳದೊಳವನಸುತರೀರ್ವರುಂಮ
ಡಿದಬಳಿ । ಕಸುರಾರಿತನ್ನೊಳಾಡಿದಬಲ್ಮೆಯಂನೆನೆದು ।ದಸೆಗೆಟ್ಟುಬಿದ್ದನ
ಕಟೆಂದುಹಂಸಧ್ವಜಂಗರ್ಜುನಂಮರುಗುತಿರಲು ॥ ಮುಸುಕಿದಂಪಡೆಸ
ಹಿತಬಂದುಪಾರ್ಥಿಯರಥವ ।ನಸಮಭುಜಬಲಸುವೇಗಂಬಳಿಕಸಂಗರಂ।
ಪೊಸತಾದುದೀರ್ವರ್ಗೆಕೊಂದನರ್ಜುನಿಮತ್ತೆವೀರರಿಚ್ಚಾಡಿಸಿರವನು ॥೨॥
ಸಾಹಸವೊಳೀರ್ವರುಂಸರಿಯೆನೆಸುವೇಗಂಮ। ಹಾಹವದೊಳೆಚ್ಚಾಡಿವಿರ
ಥನಾಗಿಯೆಬಭ್ರು। ವಾಹನನಬಾಣದಿಂದುರೆನೊಂದುಬಿದ್ದನವನಿಗೆಬಳಿಕ
ಪಾರ್ಥಿನರನ ॥ ಮೋಹರವನೈದಿದಂಪ್ರಳಯಭೈರವನಕೋ । ಲಾಹಲ

ಮಿದೆಂಬಂತೆಕೊಂದನೆಲ್ಲಾ ಬಲವ । ದೇಶದೊಳಿಸೆವರ್ಜೇಪರರೊಲುಳಿದಿ ರ್ದರಿರ್ವ್ವರೆಪಾರ್ಥಕರ್ಣಸುತರು ।೩॥ ರಣದೊಳಿಂತಿವರಿರ್ಪ್ಪತ್ತ ಮುಂ ನೊಂದುಕಾ । ರಣಕೆಗುರುಶಾಪಮುಂಕೊಡಲದಂಬಿಡಿ ಫಲು । ಗುಣನ ಮಲತೀರ್ಥಯಾತ್ರಾಪ್ರಸಂಗದೊಳಂದುತಾಂಪರಿಗ್ರಹಿಸಿನರದ ॥ ಫಣಿರಾ ಜನಂದನೆಯುಲೂಪಿಪಾತಾಳದಿಂ । ಮಣಿಪುರಕೆಬಂದುಮೂರ್ಛಿತರಾಗಿ ಸಮರಥಾ ।ರುಣಿಯೊಳಿಹಧೊರೆಗಳಂತರಿಸಿಮಂತ್ರೌಷಧಿಗಳಿಂದಪಾಲಿಸು ತಿರ್ದಳು ॥೪॥ ನೃಪಕೇಳುಲೂಪಿಚಿತ್ರಾಂಗದೆಗೆಪೇಳ್ದಸುರ । ರಿಪುಸುತಂ ತನಯುಂವರಸಿಬಳಿಕಪಾರ್ಥಜನ । ವಿಪುಲಾಸ್ತ್ರದಿಂದಮೂರ್ಛತರಾಗಿರ ಣದೊಳಿರಲಿರ್ವರಂತರಿಸಿಕೊಂಡು ॥ ಅಪಗತಶ್ರಮರಪ್ಪತೆರದಿಂದಮುಂದಿ ರದೊ । ಳುಪಚರಿಸಿಮಣಿಮಂತ್ರಮೂಲಿಕಾತತಿಗಳಿಂ । ತಪಿಸಿಂತಿರ್ಪ್ಪೆ ನ್ನುತಿರ್ದಳರ್ಜುನನಿತ್ತವೃಷಕೇತುಗಿಂತೆಂದನು ॥ ೫ ॥ ಮಗನಪಡಿಗು ಸ್ಸೈನ್ಯಮನುಸಾಲ್ವಮುಖರಾದ । ಪಿಗಡರೆರ್ವ್ವಡೆದುಸ್ಸೈಗಡೆದರಿಳೆಯೋಳ್ತ ಮ್ಮ । ನಗರಿಗೆವಿರುದ್ಧಪ್ರದ್ಯುಮ್ನರಂಕೊಂಡೊಯ್ದು ರಹಿತರಿಪನಂಜಯಿ ಸುವ ॥ ಬಗೆಗಾಣೆನಾದೂಡಂನಿಲ್ವೆನಾನಿಲ್ಲಿಕಾ ।ಳಗಕನೀನಿರದಹಸ್ತಿನಪು ರಿಗೆಪೋಗಿಪೇ । ಳಗೆಧರೆಯುಧಿಷ್ಠಿರಗಿೀಸ್ಥಿತಿಯನೆಂಬಿನಿಂತೋದಿತುತ್ತಾ ತಂಗಳು ॥೬॥ ಪದ್ದುಕುಳ್ಳಿರ್ದ್ದದರ್ಜುನನಮುಕುಟಾಗ್ರದೊಳ । ಡರ್ದುಗೂ ಡಿಕ್ಕಿದುವುರಥದೊಳ್ಕಪೋತಂಗ । ಳಿರ್ದುದುತನುಚಿಹ್ನಯೆತಲೆಯಿಳ್ದನಿ ತುಮಂಕಂಡುಬೆರಗಾಗಿನರನು ॥ ಪೊದ್ದಿದರದಪಜಯಂತನಗಿನ್ನುಧರ್ಮ ಜಂ । ನಿರ್ದ್ದೈವನಹನಲಾಶಿವಮಹಾದೇವಮುರ । ಮರ್ದಸಂತುರಗಮೇಧ ವನೆಂತುಮಾಡಿಸುವಕರ್ನೆಸುತಹೇಳೆಂದನು ॥೭॥ ವಾಜಿಸಹಿತಾಂಪೋಗಿಸ ಕಲಪರಿಕರದಿಂದ । ತೇಜದಿಂದೊಪ್ಪುವಗ್ನಿಗಳಿಂದಭೂಸುರಸ । ಮಾಜ ದಿಂದಖಿಳಋತ್ವಿಕ್ಕುಗಳಬಹುವಿಧದಮಂತ್ರಘೋಷಂಗಳಿಂದ ॥ ರಾಜಿ ಸುವನುತಯಜ್ಞಶಾಲೆಯೋಳ್ಭೂವರಂ । ಯಾಜಮಾನದೊಳಿಸವಿಸಿರಿಯುಂ ವೃಕೋದರನ । ರೋಜಾಂಬಕಾದಿಬಾಂಧವರೊಳಾವ್ಯತನಾಗಿರಲ್ಕಾಣಿನ ಕಟೆಂದನು ॥೮॥ ಪೇಳಲೇನಹುದಿನ್ನುಬಭ್ರುವಾಹನನೂಡನೆ । ಕಾಳಗಂ ಗೊಡುವೆನಾಂಕುಲಕೆಮಗನೀನೋರ್ವ । ಬಾಳುವೆಗೆಡಿಸಬೇಡಗಜಪುರ ಕೆಪೋಗಿಮುರಹರಧರ್ಮನಂದನರ್ಗೆ॥ಕಾಳಾದರಾಜಕಾರ್ಯಸ್ಥಿತಿಯನೆ ಚ್ಚರಿಸು । ಕೇಳೆಂನಮಾತನೆಂದರ್ಜುನಂನುಡಿಯಲ್ಕೆ । ತಾಳದವೃಷಧ್ವ ಜಂಕೋಪದಿಂಪಾರ್ಥಂಗೆಕೈಮುಗಿವುತಿಂತೆಂದನು ॥ ೯ ॥ ಬಳ್ಳಿತಿದುತಾ ತನಿಂನಂಬಿಟ್ಟುನಾಂಪೋಗ । ಉಳ್ಳವನೆಗೆಜನಗೆಗಕಟರಣದೋಳ್ಪ್ರೀ

ವ। ಗಳ್ಳಸಾದೊತೆಸುತ್ತಿಕಾವಮಹಂಬೀಳವಿರ್ದಪನೆಗಗಸಾಗ್ರದಿಂದ॥ಹೊ
ಳ್ಳೆನೆಯುಹೊರಬಿಗರೆಳಂಬುಮೀನುಡಿಗಳಂ।ತಳ್ಳಂಕದಿಂದನೀಸಾಹವದೊ
ಳಂತೆಣಿಕೆ । ಗೊಳ್ಳಲೇಕಿವನಬಿಂಕವನೀಗಮುರಿವೆನೆಂನಂಕಳುಹಿನೋ
ಡೆಂದನು ॥೧೧॥ ತಂದೆಗೋಸುಗವೂಳ್ಪವಸರಕೆಗೋನಿಮಿತ್ತಂದೇವ
ವಿಪ್ರಾರ್ಥಕಸುದೊರೆದೊಡಾತಂಗೆ । ಸಂದೇಹವಿಲ್ಲದಾದಪುದುಗಡಕ್ಕೈ
ವಲ್ಯಮಾಗಳಾಸೆಂತುರಣಕೆ ॥ಹಿಂದುಗಳದಪನೇಕಪತ್ನಿಯಾಗಹಸತಿಯು।
ಮುಂದಕ್ಕೈದುವೆನೆಂತುಭಾನುಸಂಭವನಸುತ । ನೆಂದೆನಿಸಿಕೊಂಬೆನೆಂತ
ನೃತನುಂನುಡಿವನಲ್ಲಾಹವಕೆಕಳುಹೆಂದನು ॥೧೧॥ ಮಂದಿಸಹಿತೀಬಭ್ರು
ವಾಹನಂಬರಲಿಸಾ । ನಿಂದುರಣದೋಳ್ನಿಸ್ಸ ಕೇಣ್ಗಳ್ಗೆಹಬ್ಬಮುಂ । ತಂದಲ್ಲ
ದಿರೆನೆಂದುವೃಷಕೇತುಬಲ್ಸಿಂಧನಂಜಯುಂಗೆರಗಿಬಳಿಕ ॥ ಪೊಂದೇರ್ಗಡರ್ದು
ನಿಜಚಾಪವಮಂತುಡುಕಿನರ । ನಂದನನಸಮ್ಮುಖಕೆನಡೆತಂದುನುಡಿದನೆ
ಲೆ ।ಮಂದಮತಿಪಾರ್ಥಸುತನಹಡೆನಿಲ್ಕರ್ಣಜಂತಾನೆನುತತೆಗೆದಜ ನು॥
ಲೇಸನಾಡಿದೆಕರ್ಣಸುತಸಾದೊಡಿಳ್ಳಿತ್ತೆ ।ವಾಸಿಯುಳ್ಳವನಪ್ಪೆಫಲುಗುಣಂ
ಕೊಂದನ । ಲ್ಲಾಸಮರದೋಳ್ಳಿಂನತಾತನಂತನಗೆಸೀನಿದಿರಪ್ಪದುಚಿತ
ಮೆನುತ ॥ ಸೂಸಿದಂಕಣೆಗಳಂಬಭ್ರುವಾಹನನದಂ । ನೇಸರಣುಗನಸು
ತಂಬರಿಕೈದುಸಾಥಿ-ಯುಂ । ಘಾಸಿಮಾಡಿದನಂಬುಗಳಮಳೆಯೊಳವನೀತ
ನಂಮುಸುಕಿದಂಶರದೊಳು ॥೧೩॥ ಎಸುವರೆಚ್ಚಂಬುಗಳನೆಡೆಯೊಳಿಕ್ಕಡಿ
ಗೈವ । ರೆಸುವರೋರೋರ್ವರಂಘಾಯಗಾಣಿಸಕರ । ಳ್ದಿಸುವರಶ್ವಧ್ವಜ
ವರೂಥಸಾರಥಿಗಳಂತರಿದಿಳೆಗುರುಳ್ಚಿ ಕೂಡೆ ॥ ಎಸುವರೊವ್ಮೊರ್ವ್ವೃಮರೆ
ದುಚೇತರಿಸಿಕೊಂ । ಡೆಸುವರಾಗ್ನೇಯಾದಿದಿವ್ಯಾಸ್ತ್ರನಿಕರದಿಂ । ದಸುವ
ರಿಂತವರವರಸರಿಯುಬಾಣಂಗಳಂಕರ್ಣಸುತಪಾರ್ಥಸುತರು ॥೧೪॥
ಅಂದಾದರ್ಕಣ್ಮಾರ್ಜುನರಕಾಳಗವನವರ । ನಂದನರ್ನಿಣ್ಕೈಸುತಿರ್ದರೆ
ನೆಶಸ್ತ್ರಾಸ್ತ್ರ । ದಿಂದಶರಸಂಧಾನಸತ್ವಸಾಹಸಲಘ್ವಲಿಲಾಘವಂಗಳಿಂ
ದ॥ ಮುಂದುವರಿವಗ್ಗಳಿಕೆಮುಳಿಸುಮೂದಲೆವೋಡಿ । ಬಂದಿಭಾರಣೆಬಿಂ
ಕಬಿಸಿಚಮತ್ಕಾರಂಗೆ । ಳಿಂದಸಮನಾಗೆಕ್ಕೈದೋರಿದಂವೃಷಕೇತುಬಭ್ರು
ವಾಹನನಮೇಲೆ ॥೧೫॥ ಬಳಿಕಜಿಳದಿವ್ಯಾಸ್ತ್ರದಿಂದವೃಷಕೇತುವೆ । ಗ್ಗ
ಳಿಸೆವಾಡಬವೃಷ್ಣವದೊಳದಂಪರಿಹರಿಸಿ । ಕೊಳುತರ್ಜುನಾತ್ಮಜಂಕೆರ
ಳಿವನನೆಚ್ಚಡುಚ್ಚಳಿಸಿತಚ್ಛೋಣಿತವನು ॥ ತೊಳೆಯುಲಿಳದುವುಭೋಗವ
ತಿಯುಜಲಕಂಬುಗ । ಳ್ಮಳಿದುಕರ್ಣಜನೆಸಲ್ಕಾತನಂಸುತ್ತಿಸಿತು । ಸುಳಿ
ಗಾಳಿಯುಂದದಿಂಕಣೆಗಳರೆಗಳಿಗೆಸರ್ವಂತರಂಸಂಗರದೊಳು ॥೧೬॥ ಮತ್ತೆ

ಹೊಡಕರಿಸಿಪಾರ್ಥನಸೂನುರೋಷಾಗ್ನಿ । ಪ್ರೊತ್ತಿ ಕಿಡಿಗೆದರಿದಿವ್ಯಾಸ್ತ್ರ
ಮಂಪೂಡಿತೆಗೆ । ವೃತ್ತಲವೊಕರ್ಣಸುತನೀಸೆಬಿಲ್ಲಾಳಪ್ಪೆನಾಂಪ್ರೊಣಾರ್ದತಿ
ಬಲರೊಳು ॥ ಚಿತ್ತಚಂಚಲವಿಲ್ಲದೀಕ್ಷ್ರಿಸೆನುತೆಚೊಚ್ಚಡದ । ಗೆತ್ತಿಶಿರಮಂ
ಕೂಡಿಪಿಡಿದಾಗಸಕ್ಕೆಚಿಗಿ । ದತ್ತಕೊಂಡೊಯ್ದುವೃಷಕೇತುವಂತಿರುಗಿಸಿ
ತುದೆಸೆದೆಸೆಗಳಂನಭದೊಳು॥೧೭॥ ಭಾನುಸುತಸೂನುವಂನಭಕೆತ್ತಿಕೊಂ
ಡೊಯ್ದು । ನಾಸಾದೆಸೆಗೆತಿರುಗಿಸಿತುಮುಹೂರ್ತತ್ರಿತಯ । ಮೀನೆಲಕೆಕೆ
ಡಹದೆಮಹಾಶರಂಕೆಳಗೆಬಿಲ್ವಿಡಿದುಸನ್ನದ್ಧರಾಗೆ ॥ ಈನರನುಮಾಬಭ್ರು
ವಾಹನನುಮೊಡನೈದೆ ।ಬಾನೆಡೆಯೊಳಾತನಪಿತಾಮಹಂಗಭಿನಮಿಸಿ।ಕಾ
ನನಸರಿತ್ಸಾಗರಂಗಳೊಳ್ಬೀಳದಿಳಿದಂಮಣಿಪುರದಮಹಿಯೊಳು ॥ ೧೮ ॥
ನೊಗಮತ್ತಫಲುಗುಣಂನೋಡುತಿರೆಕರ್ಣಜಂ। ಗಗನದಿಂಬಿದ್ದಿಳೆಗೆಪೊತೆ
ಚೆಂಡಿನಂತೆಪುಟ । ನೆಗೆದೆದ್ದುರೋಷದಿಂಘುಡಿಘುಡಿಸಿಪಾರ್ಥಸುತನಂಪ
ಚಾರಿಸಿಕನಲ್ದು॥ ತೆಗೆದೆಸಲ್ಬಾಣಂಗಳಶ್ವಸಾರಥಿಸಹಿತ । ಕೆಗೆಳೆಂದಮ
ರ್ದರಥಸಹಿತಚಿತ್ರಾಂಗದೆಯ । ಮಗನಂನಭಸ್ಥಳಕೆಕೊಂಡಡರ್ದುನೃಸಾ
ಕಪರಿಯಂತಮಾಕ್ಷಣದೊಳು ॥೧೯॥ ನಭದೊಳತ್ಯುಗ್ರದಿಂತಪಿಸುವದಿವಾ
ಕರ । ಪ್ರಭೆಯಿಂದುರಿಯೆರಥಂಬಿದ್ದನುರ್ವಿಗೆಪಾರ್ಥಿ । ರಭಸದಿಂಪೂರ್ವ
ದೊಳಡರ್ದಸಂಪಾತಿಗರಿಸೀದಿಳೆಗೆಬೀಳುವಂತೆ ॥ ತ್ರಿಭುವನಕೆಪೊಸತಾಗಕ
ರ್ಣಜಂಮತ್ತೆರಿಪು। ಸುಭಟನಂಮೂರುಬಾಣದೊಳೆಚ್ಚುದಿವಸವ । ಲ್ಲಭ
ನಮಂಡಲಪಲ್ಲಿಗೈದಿಸಿಪಚಾರಿಸಿಚರೆದುಕೂಡೆಬೊಬ್ಬಿರಿದನು ॥೨೦॥ ಬೊ
ಬ್ಬಿರಿವಕರ್ಣಜನದನಿಗೇಳ್ದುರೋಷದಿಂ । ದಬ್ಬರಿಸಿಗಗನದೋಳ್ತನ್ನರಥ
ಮಂಬಿಟ್ಟು।ಹೆಬ್ಬೆಟ್ಟದಂತಿವನಮಸ್ತಕದಮೇಲೆಬೀಳಲ್ಕೆವಂಕನಲಿಕೂಡೆ॥
ಉಬ್ಬಿಪುಟನೆಗದೆದ್ದುನಾಯಕದೊಳೆಚ್ಚಪನ । ನೆಬ್ಬಿಸಿದನಾಗಸಕೆಮತ್ತೆ
ಬೀಭತ್ಸಕಂ । ಡೊಬ್ಬಳಿಳನಲ್ಲಾಡಿಪೊಗಳಲ್ಕೆವೃಷಕೇತುಫಲುಗುಣಂಗಿಂ
ತೆಂದನು ॥೨೧॥ ತಾತನೋಡಂದುರಣದೋಳ್ತೇರಗಾಲಿಪಸು । ಧಾತಳ
ದೊಳಾಳ್ದೊಡಾಯುತಮಾಗಿನಿಲ್ವಿನಿಂ । ಘಾತಿಸದಿರೆಂದುನಿನ್ನೊಡನೆನಮ್ಮ
ಯ್ಯಸಾಡಿದವೊಲಾಡದಸುಮ್ಮನೆ ॥ ಈತನೆನ್ನಸ್ತ್ರದಿಂಘಾಸಿಯಾದಪನಂ
ದು । ಮಾತಾಡುವನಿತರೊಳ್ಮತ್ತಿವನಮೇಲೆಬಂ। ದಾತಬೀಳಲ್ಕೊಂದರೀ
ರ್ಘ್ವರುಂಚೇತರಿಸಿಕೊಂಡುಘುರಕನುವಾದರು ॥೨೨॥ ಮಣಿವರೂಥಾರೂ
ಢರಾಗಿಬಳಿಕೀರ್ವರುಂ । ರಣರಂಗದೋಳ್ಕಡುಗಿಕಾದಿದರ್ಕಾಯದೋ ।
ಳ್ಕಣೆಗಳಿಡಿಯಲ್ ಖಂಡಮಂಕಚ್ಚಿಪಾರಲರುಣಾಂಬುಗಳ್ಕೋಡಿವರಿಯೆ ॥
ಪೊಣರ್ವರಂಬರಕಡರ್ದೊಮ್ಮೆಮೇದಿನಿಗಿಳಿದು। ಪೆಣಗುವರ್ಮತ್ತೊಮ್ಮೆನಭ

ದೊಳಿರ್ದೋರ್ವನಂಘ್ರಿ| ರಣಿತಳದೊಳಗೆಯೋರ್ವನಾಗಸದೊಳೋರ್ವನಿರೆ
ಸರಿಸಮಾದೊಳ್ಳಾಕೆಲಿಗಳು ॥೩೩॥ ಭೂಪಕೇಳಿಂತೈದುದಿನವೈದೆಕಾದಿದ|
ಚಾಪವಿದ್ಯಾಪ್ರವೀಣಂಫಳಿಕಪಾರ್ಥಜಂ | ಭಾಪುರೇವೃಷಕೇತುನೀನೆಪ
ಟುಭಟನಪ್ಪೆಲೋಕದೊಳ್ಳಾಸಕೆದೆಯೊಳು ॥ ಶ್ರೀಪತಿಧ್ಯಾನಮಂಮಾಡೆ
ನುತತೆಗೆದಸ | ಲ್ಕೋಪದಿಂದಾಕರ್ಣೆಯನಿವನರಿವನಿತರೋಳ್ಪ್ರ | ತಾಪ
ದಿಂಕವಲಂಬನೆಚ್ಚುಕತ್ತರಿಸಿದಂಕರ್ಣಜನಕಂಧರವನು ॥೩೪॥ ಕಡಿದುಕ
ವಲಂಬುಗಿಯೆಕರ್ಣಜನತಲೆನಭಕೆ | ಸಿಡಿದುಕಂತುಕದಂತೆಬಂದುಬಿದ್ದು
ದುಪಾರ್ಥ | ನಡಿಗೆನಾರಾಯಣಾಮುಕುಂದಮಾಧವಯೆನುತಮುಂಡವತಿ
ವೇಗದಿಂದ ॥ ಸತೆದುರಣದೊಳ್ಕ್ಮಣಿಪುರೇಂದ್ರನಂಪೊಯ್ವಳಿಗೆ | ಕೆಡಹಿ
ಪಡೆಯುಲ್ಲಮಂಸದೆದುರುಳ್ದುದುನರಂ | ಪಿಡಿದರಡುಕೈಗಳಿಂದಾಶಿರವನೆತ್ತಿ
ಕೊಂಡೀಕ್ಷಿಸುತಳಲ್ದನಂದು ॥೩೫॥ ಬಿಟ್ಟಕಂಗಳಬಿಗಿದಪುರ್ಬ್ಬುಗಳಪರೆ
ನೊಸಲ | ಬೊಟ್ಟುಸೂಸಿದಕುರುಳ್ಥಳಥಳಿಪಕುಂಡಲಂ | ಪೃಟ್ಟಧು
ಪ್ಪುಳ್ಕೈಸೆಪೊಳೆವಲ್ಲುನಗೆಮೊಗಂಕಳಕಳಿಸೆಕಳೆಗಳಿಂದ ॥ ಕಟ್ಟುಗ್ರಮಾಗಿ
ರ್ದ್ದತನಿವೀರರಸದೊಂದು | ಗಟ್ಟಿಯೆನೆತೋರ್ಪಕರ್ಣಜನತಲೆಯಂನರಂ|
ಸಿಟ್ಟಿಸುತಪಣೆಯಂಪಣೆಯೊಳಿಟ್ಟುಪೊಸೆದುಚುಂಬಿಸಿಕಂಬನಿಯೊಳಾಳ್ದ
ನು ॥೩೬॥ ಮಗನೆನೀನಂತುಮಾಡಿದ್ಯಕೃಷ್ಣರಾಯಂಗೆ | ಸೊಗಸಾದುದೇ
ನಿಂನಳಿನೃಪಧರ್ಮತನಯಂಗೆ | ಮೊಗದೋರ್ವಸುತರುಂಟೆನೀನಿಲ್ಲದೇನೆಂದಳ
ಲ್ವೈಳ್ಕೆಕುಂತಿಮರುಗಿ ॥ ಪಗೆಯೆಂದುಕೊಂದೆಪಗ್ರಜನನೆಮಗಾತನಿಂ| ಮಿ
ಗಿಲೆಂದುಕಂಡಿಹೆವಲ್ಲೈನಿನ್ನನೈವರ್ಗೆ | ಸುಗತಿಗೊಡುವಾತ್ಮಭವರಿರ್ದ್ದ
ಪರೆವೇಳೆಂದುಹಳವಳಿಸಿದಂಪಾರ್ಥನು ... ... ॥೩೭॥
ಸಾಲದೆಮಹಾಹವದೊಳಭಿಮನ್ಯುಮಡಿದಳಿ| ಲ್ಬಾಲಕಂನೀನಿದಿರ್ದೋರ್ದೇನ
ಕಟಕಂಣಮುಂ| ಧಾಳಿಸೈತಂನಮಾತಂನುಡಿಸಲಾಗದೇನೋಡಿನ್ನಸಾದರ
ದೊಳು॥ಪಾಲಿಸೈತುರಗಮಂಮುಂದಿಯುಂನಡೆಸಿನ್ನು | ಮೇಲಣುದ್ಯೋಗ
ಮಾವುದುಕಂದನಿನ್ನಗುಣ| ಶೀಲಮಂಭೂಪನೋಳ್ಬಣಿಪವೃಕೋದರಂ
ಗೇನೆಂಬೆನುಸುರೆಂದನು ॥೩೮॥ ಮೂಗಿಲ್ಲದಾನನಂಲಿಂಗಮಿಲ್ಲದಪೀಠ|ಮಾ
ಗಿರದೆಪಾಂಡವರಸಿರಿಯಿನ್ನುನೀನಿಲ್ಲ|ದಾಗನಿಂನಘಟಿಂದಯೌವನಾಶ್ವನು
ನಾಲ್ವರಸಖ್ಯಮಾದುದೆಮಗೆ॥ಯಾಗಮಹುದರಸಂಗೆನಿಂನಿಂದನೀಂಪದ್ದು |
ಕಾಗೆಗೊಡಲಂಕೊಟ್ಟುರಣದೊಳೆಂನಂಬಿಟ್ಟು| ಪೋಗಲಪ್ಪುದೆತಂದೆವೃಷ
ಕೇತುಪೇಳೆಂದುಮರುಗಿದಂಸವ್ಯಸಾಚಿ ॥೩೯॥ ಈಪರಿಯೊಳಾವೃಷಧ್ವ
ಜನತಲೆವಿಡಿದವನ | ರೂಪುಗುಣಶೀಲಮಂನೆನೆನೆನೆದುಶೋಕಪ್ರ|ಳಾಪ

ಡಿಂನರರನಳುತ್ತಿರಲಿತ್ತ ಕರ್ನಸುತನಟ್ಟಿಬಂದಪ್ಪಳಿಸಲು॥ ಧೂಪಿಸಿಧರೆಗೆಬಿ
ದ್ದೊಡನೆಮೂರ್ಛೆತಿಳಿದೆದ್ದು। ಚಾಪದಕೊನೆಗೆಮೊಗವನಿಟ್ಟೊರೆಯಾಗಿ
ನಿಂ। ದಾಪಾರ್ಥನಂನೋಡಿನಸುನಗುತಚಿತ್ರಾಂಗದೆಯತನುಜನಿಂತೆಂದ
ನು ॥೨೦॥ ಎಲೆಪಾರ್ಥವೈಶ್ಯಸಂಭವರಾವಹೆವುನಿಮ್ಮ। ಬಲಸಮಾಜದೊ
ಳಂಬುಗಳಪೆಸರಪುಂಬಿಟ್ಟು। ಗೆಲವಿನಗ್ಗದಲಾಭಮಂಪಡೆದೆವಘಟರಶಿರಂ
ಗಳಂಕೊಂಡೆವರಸಿ॥ ಕಲಿಗಳ್ಗೆತಂದುಜೀವಕೆಸಂಚಕಾರವಮಂ। ಸಲೆಬೇಡಿ
ದೊಡೆಕೊಟ್ಟೆವಿಚ್ಛೆಯುಳ್ಳೊಡೆನಿಂನ। ತಲೆಯುಬೆಲೆಗಿದೆಸಾಹಸದ್ರವ್ಯಮಂ
ನೊಳಿಂದರ್ಜುನಿಪಚಾರಿಸಿದನು ॥೨೧॥ ಅವರೊಳೇನಹುದಿನ್ನುವೀರನೀ
ಕರ್ನಸುತ। ನಿಪನತಲೆಯುಂಸಮರ್ಪಿಸುಮಹಾದೇವಂಗೆ। ತವೆರುಂಡಮಾ
ಲೆಯೊಳ್ಪೂಜ್ಯವಾಗಿಹುದೀಶ್ವರಪ್ರೀತಿಯಹುದುನಿನಗೆ॥ ಶಿವನೆಂದುಪಾಶು
ಪತಬಾಣಮಂಕೊಟ್ಟುದಿ। ಲ್ಲವೆನಿಜಸ್ವಾಮಿಯುಂಮರದಪರೆಸಾಕಿದ
ರ। ಭವಣಿಯೇತಕೆಕಾದುವೆಯೊತುರಗಮಂಬಿಟ್ಟುಪೋದಪೆಯೆಂಪೇಳಿಂ
ದನು ॥೨೨॥ ನೋಡಿದಂತಿರುಗಿಕಣ್ಣಾಲಿಗಳ್ಕೆಂಪಡರೆ। ಮಾಡಿದಂಕೋ
ಪಮಂಧೈರ್ಯದಿಂದಳಲನೀ। ಡಾಡಿದಂಕರ್ನಜನಶಿರವನಲ್ಲಿರಿಸಿದಂಕೊಂಡ
ನುರುಕಾರ್ಮುಕವನು॥ ತೀಡಿದಂಜೇಗೈದು ತಿರುವಿನೊಳ್ಬಾಣಮಂ। ಪೂ
ಡಿದಂತೆಗೆಡಚ್ಚಿರುಧಿರಪ್ರವಾಹಮಂ। ತೋಡಿದಂಬಭ್ರುವಾಹನನಸ
ರ್ವಾಂಗದೊಳ್ಕಲಿಪಾರ್ಥನಾಕ್ಷಣದೊಳು ॥೨೩॥ ವೈಸಿರಿಯಳಲ್ಗಳಿವು
ಲೇಸಾಯ್ತುಪಗೆಯುಮಗ। ನೈಸಲೇಕರ್ನಜಂಪಾಕಿದೇತಕೆಬರಿದೆ। ವೈಸಿ
ಕದಬಾಣಪ್ರಯೋಗಂಗಳಿಂದಕೀಲದೊಳುಮಾಕಾಂತನಿಂದ॥ ಕೈಸಾರ್ದ
ಸಾಯಕವನುಗಿಯೆನುತಪಾರ್ಥನಂ। ಪೈಸರಿಸದೆಚ್ಚನೀಬಭ್ರುವಾಹನನ
ಕೈ। ಗೈಸಮನಭೋವಲಯಮನೆಕವಿದವಂಬುಗಳ್ದೀವತತಿ ಚಿರಗಾಗ
ಲು ॥೨೪॥ ಮತ್ತವುಮನುಸುಳ್ವಂತೆನರನಾರ್ದುತೆಗೆದೆಸ। ಲೈತ್ತವುಸರಳ್ಗ
ಳೊಂದೊಂದಯುತನಿಯುತಮಂ। ಪೊತ್ತವುನಭಸ್ಥಳಕೆಕೊಂಡುರಿಪು
ಸೇನೆಯಂತಾರೆಗಳನುದುರಿಸಿದುವು॥ ಕಿತ್ತುವುಕುಲಾದ್ರಿಗಳನಾಗಸದಬ
ಟ್ಟೆಯಂ। ಕೆತ್ತುವುದಿಗಂತಮಂತುಂಬಿದುವುಬಾಣಂಗ। ಳಿತ್ತುವುಜಗತ್ರ
ಯಕೆಕಂಪಮಂಪಿಂತೆಂದುವಿಲ್ಲಿದುವಿಚಿತ್ರಮೆನಲು ॥೨೫॥ ಕೊರೆದವಂ
ಗೋಪಾಂಗಮಂಪಾರ್ಥನಂಬುಗೆ। ಳ್ತರೆದಜಾಳಾಂದ್ರದಂತಾಯ್ತುಗಿದಬ
ಟ್ಟೆಗ।ಳ್ತರೆದಪೇರ್ಮಳೆಯಿಂದನನೆದಜಾಜನಗಿರಿಯೊಳಿಳಿವಕೆಂಬೊನೆನಲ್ಗ
ಳ ॥ ತೆರದಲೆಸೆದವುರಕ್ತಧಾರೆಗಳ್ಕಾಯದೋಳ್। ಳ್ಕರೆದನೊಡಲಂನಿಮಿಷ
ಕೊಡನೆತರಹರಿಸಿದಂ। ಜರೆದನರ್ಜುನನಂರಣಾಗ್ರದೋಳ್ಮದಲಿಸಿ ಬ

ಭ್ರುವಾಹಂಕನಲ್ಲ ‖೩೬‖ ಕರ್ಣಭೀಷ್ಮದ್ರೋಣರಂಗೆಲ್ದ ಕೌಟ್ಟಂಸು। ಪರ್ಣಧ್ವಜಂನಿನಗೆಕರುಣದಿಂಕಾದಿದನ । ಪರ್ಣಾದವಂನಿನ್ನೊಳಗ್ಗಳಿಕೆ ಪಿಂದೆಂದುಮೇದಿನಿಯೊಳರಿಯುದವರು ‖ ವರ್ಣಿಸುವರೆಂದುಬೆರತಿಹೆತನ್ನ ಸಮರವಂ । ನಿರ್ಣೈಸಿದೊಡೆವೀರನಹುದೆಂದುಬಾಣಮಯ । ದರ್ಣವಮಿದೆತ್ತಣಿಂಮೇರೆದಪ್ಪಿದುದೆನಲ್ಬಭ್ರುವಾಹನನೆಚ್ಚನು ‖೩೬‖ ಕೆತ್ತಿದುವು ದಿಕ್ತಟದಭಿತ್ತಿಗಳನದ್ರಿಗಳ । ನೆತ್ತಿದುವುಧರೆಯನುಚ್ಚಳಿಸಿಕೂರ್ಮನಬೆನ್ನ। ನೊತ್ತಿದುವುಕಲಕೆದುವುಸಾಗರವನಾದಿತ್ಯಮಂಡಲವನಂಡಲೆದುವು‖ ಮುತ್ತಿದುವುಬಾಂದಳವನೆಲ್ಲಮಂಕೆಲಕೆಲವು । ಪತ್ತಿದುವುಪರಿದವಿಳಿದುವು ಸಕಲಲೋಕಕ್ಕೆ । ಬಿತ್ತಿದುವುಭೀತಿಯಂಬಭ್ರುವಾಹನನಶರಜಾಲಮದನೇವೇಳ್ವೆನು‖ ಹಾರಿಸಿತುರಥಮಂತುರಗಮಂರುಧಿರಮಂ। ಕಾರಿಸಿತುಸಾರಥಿಯಜೀವಮಂಸುರಲೋಕ । ಕೇರಿಸಿತುಛತ್ರಚಾಮರಪತಾಕಾಳಿಯಂಕೆಂಗರಿಯುಗಾಳಿಯಿಂದ‖ತೂರಿಸಿತುರೆಕ್ಕೆಯುದಮೇಲೆಹನುಮಂತನಂ। ಬೀರಿಸಿತುಪಾರ್ಥನಶರೀರದೊಳ್ಬೆಟ್ಟೆಯಂ । ತೋರಿಸಿತುಬಭ್ರುವಾಹನನಶರಸಂಕುಲಂಫಲುಗುಣಂಕಂಪಿಸಲ್ಕೆ ‖೩೯‖ ಮತ್ತೆಸಂಗರದೊಳನ್ಯೋನ್ಯಮವರೀರ್ವರ್ಗೆ । ಚಿತ್ತದೊಳ್ಮುಸುಕಿತುಘನಷ್ಟಾತ್ರತಾಮಸಂ । ಪೊತ್ತಿತತಿರೋಷಾಗ್ನಿಬಳಿಕೋರ್ವರೋರ್ವರಂಜೈಸುವಭಿಲಾಷೆಯಿಂದ ‖ ತೆತ್ತಿಸಿದ ಕಣೆಗಳಿಂಮೈಗಳೈಮೊಗದೊಲಿರೆ। ನೆತ್ತರೊರತೆಗಳಿಂದತನುಗಳಿರೆ ಪೂತಮು । ಳ್ಮುತ್ತುಕದೊಲಿರೆತಂದೆಮಕ್ಕಳಿಬ್ಬಾಡಿದರ್ನಿಬ್ಬಟದೊಳಚ್ಚರಿಯೆನೆ ‖೪೦‖ ಜನಪಕೇಳಾಜ್ಞ್ನವಿಯಶಾಪದಿಂಬಳಿಕಪಾ । ರ್ಥನಸತ್ತ್ವಮಿಳದಾಗಿಬರೆಕಂಡುಬಭ್ರುವಾ।ಹನನಂದನೆಲೆಧನಂಜಯತನ್ನಜನನಿಬಿತ್ರಾಂಗದೆಪತಿವ್ರತೆಕಣಾ ‖ ಅನಿಮಿತ್ತಮಾತೆಯಂಪಳಿದಕಾರಣದಿಂದ । ನಿನಗೆ ಕೈಗುಂದುತಿದೆಸಾಕಿನ್ನುಕೃಷ್ಣನಂ । ನೆನೆಮುರುಳೆಮುರಹರನಸಾರಥ್ಯಮಿಲ್ಲದಾರಂಗೆಲ್ದೆಹೇಳೆಂದನು ‖೪೧‖ ಕ್ಷೋಣಿಗೋಸುಗಕೊಂದೆನೀನೆಂದು ಕರ್ಣನಂ । ಮೇಣವನತನಯನೆಳೆಲ್ಗೆಸೇರದೆಮನದ । ಕೇಣದಿಂದೆನ್ನಕೈಯುಂದಕೊಲಿಸಿದೆಸಾಕುಹಗೆಹರಿದುದಿಂನುನಿನಗೆ ‖ ಪ್ರಾಣಮಂಕಾಯ್ದು ಬಿಡುವೆಂಪೋಗುಬಿಲ್ಗಳೋಳ್ । ತ್ರಾಣಮುಳ್ಳಡೆನಿಂದುಚಿತ್ತದೊಳ್ನೆನೆಚಕ್ರ । ಪಾಣಿಯುಂಬಲದುಪ್ಪುದೆಂದು ಜರೆದಂಬಭ್ರುವಾಹನಂಫಲುಗುಣನನು ‖೪೨‖ ಹೂಣೆಹೊಕ್ಕಿಂದುತಾಂಪಗೆವನಂಗೆಲ್ದೊಡಂ । ಮಾಣದೆರಣಾಗ್ರದೊಳ್ಮಡಿದೊಡಂಕ್ಷತ್ರಿಯು । ಗೂರ್ಣಿಯುಮೆಕರ್ನನಂಕೊಂದಡೇನವನಸುತನಳಿದೊಡೇನಾಹವದೊಳು ‖ ಕ್ಷೀಣಬಲನೇತಾನಕಟನೀಂಸ

ಮರ್ಥನೇ । ಕಾಣಬಹುದೆನುತಭೀಮಾನುಜಂಕೋಪದಿಂ ।ಬಾಣಂಗಳಿಂ
ಮಗನಮೇಲೆಕರೆಯಲ್ಕವಂಪರೆಗಡಿವುತಿಂತೆಂದನು ॥೪೪॥ಪ್ರೀತಿಯಿಂದ್ರೋ
ಣನಿತ್ತಂಬುಗಳ್ಮನ್ಮಥಾ । ರಾತಿಮುಖ್ಯಾಮರಕೊಟ್ಟಬಾಣಂಗಳ ।
ಜ್ಞಾತಮಾದುವುನಿನಗೆಮರುಳೆನಿನ್ನೊಡನಾಡಿಕೃಷ್ಣನಂಮರದೆಯಾಗಿ॥ ಪಿ
ತ್ರಕಾಹವಮಿನ್ನುಸಾಕೆನಲ್ಫಲ್ಗುಣಂ।ಖಾತಿಯಿಂಮಗುಳೆಸಲ್ಕಾಬಭ್ರುವಾ
ಹನಂ । ಘಾತಿಸಿದನಡಿಗಡಿಗೆಪಾರ್ಥನಂಜಾಹ್ನವಿಯಶಾಪದಿಂಕೈಗೆಡಲ್ಕೆ ॥
ಸುರನದಿಯಶಾಪದಿಂಮೋಹಿಸಿನರಂಮುಳಿದು । ಧುರದೊಳಾವಾವಂಬನೆ
ಸುವನದನೆಲ್ಲಮಂ।ಪರೆಗಡಿದುಕೋಪದಿಂಪೂಡಿದಂಬಭ್ರುವಾಹಂತನ್ನಕಾ
ರ್ಮುಕದೊಳು॥ನಿರುಪಮಜ್ವಾಲಾಮುಖದಕಾಮರೂಪದುರು । ತರವಡ
ಬಶಿಖಿಯುಂದದರ್ಧಚಂದ್ರಾಕೃತಿಯ । ಶರವನುತ್ಕೀರ್ಣಸ್ಫುಲಿಂಗಪ್ರಕರವ
ನುಗ್ರಪ್ರಭಾಭೀಕರವನು ॥೪೫॥ ಅರ್ಕಾದಿಸರ್ವಗ್ರಹಂಗಳಿಂದಾಪ್ರದಿದೇ ।
ವರ್ಕಳಾಂಗಿರಸಾದಿಮುನಿಗಳೆಲ್ಲರ್ಮರುಗಿ । ದರ್ಕರದವರುಣಾಂಬುವಂಮೋ
ಘಮುದುರಿತುಲ್ಕಾಪಾತಮಿಳೆನಡುಗಿತು ॥ ಶರ್ಕರಾವರ್ತಂಪ್ರವರ್ತಿಸಿತು
ಪಾರ್ಥಜಂ।ಕರ್ಕಶದಬಾಣಮಂತೆಗೆದೆಸಲ್ಕಿಡಿಗಳಪೊ। ಗರ್ಕವಿಯೆದೆಸೆದೆಸೆ
ಗೆಭುಗಿಭುಗಿಸುವಜ್ವಾಲೆಮೇಲ್ವಾಯ್ವುಬಗುತಿರ್ದುದು ॥೪೬॥ ಅತ್ಯುಗ್ರ
ಸಾಯಕಂಬರೆಪಾರ್ಥನಿದಿರಾಗಿ । ಪ್ರತ್ಯಸ್ತ್ರದಿಂದೆಸಲದಂಕೊಳ್ಳದೈತರ ।
ಲ್ಸತ್ಯಭಾಮಾಕಾಂತನಂಚಿಂತಿಸನಿತರೋಳ್ತೀವ್ರದಿಂಕೊರಳನರಿಯೆ ॥ ಆ
ತ್ಯಧಿಕಕುಂಡಲದತಲೆಚಿಗಿದುನಭದೊಳಾ। ದಿತ್ಯಮಂಡಲಮಿಳೆಗುರುಳ್ವಂ
ತೆಮುನಿಗಣ। ಸ್ತುತ್ಯಕೇಶವಕೃಷ್ಣಯೆನುತಬಿದ್ದುದುಕರ್ಣಸುತನಶಿರದಡೆ
ಗೆಪೋಗಿ ॥೪೭॥ ಕಳಿವೃಷಧ್ವಜನಶಿರದೊಡನೆಕೂಡಿತುನರನ । ತಲೆಕರ್ನ
ಜನಕಬಂಧವನಪ್ಪಿಕೊಂಡುದಾ । ಫಲುಗುಣನಮುಂಡಮಿದನೆಲ್ಲರುಂಕಂ
ಡುಮರುಗಿದರಾಗಕರುಣದಿಂದ ॥ ನಲವಿಂದಬೊಬ್ಬಿರಿದುದಾಬಭ್ರುವಾ
ಹನನ । ಬಲಮೈದೆನೊಳಗಿದುವುವಾದ್ಯಂಗಳಾಹವದ । ಗೆಲವಿಂದಪುರಕೆ
ತಿರುಗಿದನವಂವಂದಿಸಂದೋಹದಪೊಗಳ್ಕೆಯಿಂದ ॥೪೮॥ ತ್ರಿಜಗಂಮರು
ಗುವಂತೆಕಾರ್ತಿಕೈಕಾದಶೀ।ಕುಜವಾರದುತ್ತರಾನಕ್ಷತ್ರದಂದುವಾ । ರಿಜ
ಮಿತ್ರನಸ್ತಮಯ ಸಮಯದೋಳ್ ಕೃಷ್ಣಯೆನುತರ್ಜುನನ ತಲೆಬೀಳ
ಲು ॥ ವಿಜಯೋತ್ಸವದೊಳೈದಿದಂಬಭ್ರುವಾಹನಂ।ನಿಜಪುರಕೆಗುಡಿತೋ
ರಣದೊಳೆಸೆಯೆಬಂಣಿಸ।ಲ್ಪ್ರಜೆಗಳಂಗನೆಯರಾರತಿಪುಷ್ಪದಧಿಲಾಜೆದೂ
ರ್ವೆಯೊಳಿದಿರ್ಗೊಳ್ಳಲ್ಕೆ ॥ ಮಿಗೆಜಯೋತ್ಸವದಿಂದಪಾರಜನದೊಸಗೆಯಿಂ।
ಬಗೆಬಗೆಯಸಿಂಗರದಪೆಣ್ಗಳಸೊಡರ್ಗಳಿಂ। ನಗರಪ್ರವೇಶಮಂಮಾಡಿದಂ

ಬಭ್ರುವಾಹನನಿತ್ತಲರಮನೆಯೊಳು ॥ ಸೊಗಸಿಂದಲೂಪಿಸಹಿತಿರುತಿರ್ದ ಚಿತ್ರಾಂಗ।ದೆಗೆಬಂದುಸುದತಿಯರ್ದ್ವಿನೀನೇಂನೋಂತು। ಮಗನಂಪಡೆದೆ ಯೊನರನಂಕೊಂದುಬಪ್ಪನಾರತಿಗಳಂತರಿಸೆಂದರು ॥೪೦॥ ಮಾನಿನಿಯ ರಿಂತಾಗಚಿತ್ರಾಂಗದೆಗೆನಿನ್ನ । ಸೂನುಕಲಿಪಾರ್ಥನಂಸಮರದೋಳ್ಕೊಂ ದುಸುಂ। ಮಾನದಿಂದೈತಪ್ಪನೆಂದುಪೇಳಲ್ಕೇಳಿಹಂಪೈಸಿಬಿದ್ದಿಳೆಯೊಳು ॥ ಹಾನಾಥಕೆಟ್ಟೆನಕಟೆಂದುಕಂಬನಿಯೊಳಾ । ಳ್ದ್ವಾನಾರಿದುಃಖಾರ್ತೆಯಾಗ ಲಂತಃಪುರದ। ಮಿನಾಕ್ಷಿಯರ್ಕೂಡೆರೋದಿಸಲ್ಪ್ರೆತ್ತುವಿಷಾದವರರಮರ ಮನೆಯೊಳು ॥೪೧॥ರಾಜಾಲಯದ್ವಾರದೋಳ್ತೀರನಿಳಿದುನೀ।ರಾಜನಾದಿಗ ಳಿಂದಿದಿರ್ಗೊಂಬಸ್ತಂಭ್ರಮದ । ರಾಜವದನೆಯರೊಡನೆಚಿತ್ರಾಂಗದೆಯು ಶೋಕದಿಂದಲಾರ್ತೆಯಳಾಗಿರೆ ॥ ಈಜಯೋತ್ಸವದೊಳಿಂತೀವಿಷಾದಧ್ವನಿ ವ। ಧೂಜನಕಿದೇಕೆನುತಪೊಕ್ಕನಂತಃಪುರವ । ನಾಜನನಿಯಂಗದಿರವಂ ಕಂಡುಬೆರಗಾಗಿಪಾರ್ಥಸುತನಿಂತೆಂದನು ॥೪೨॥ ಅಜಜಯಂತನಗಾದುದಿ ಲ್ಲಸಂಗ್ರಾಮದೋ । ಳ್ವಿಪರೀತವೇತಕಿಂತಾನಂದಕಾಲದೋ । ಳ್ಕುಪಿತ ಮುಖಳಾಗಿತನ್ನಂಜರೆದೊಡರ್ಜುನನಕಿರವನರಿದೇಂಥುರದೊಳು ॥ ರಿಪು ಭಯಂಕರಕರ್ಣತನಯಂಗೆಸಂಗರದೊ । ಳುಪಹತಿಯನಿತ್ತೆಂಪ್ರಯಾಸ ದಿಂದಕೆನೀಂ । ತಪಿಸಲೇಕೆಂದುಕಂಣೀರ್ಗೊಡೆದು ಮಾತೆಯಂಸಂತೈಸಲಿಂ ತೆಂದಳು॥೪೩॥ ಲೇಸಮಾಡಿದೆಮಗನೆಪಗೆಯಾದನೇನರಂ।ವಾಸಿಬಂದುದೆನಿ ನಗೆಮತ್ಕಾಂತನಳಿದನೇ । ವಾಸವನಸೂನುಮೃತನಾದನೇಧರ್ಮಾನುಜಂ ಪ್ರಾಣಮಂತೊರೆದನೇ ॥ ವಾಸುದೇವನಸಖಂಮಡಿದನೇನಿನ್ನಂದ । ವಾ ಸುರಪರಾಕ್ರಮದೆಳಾತ್ಮಪಿತೃಘಾತಿಯಂ । ಹೇಸದೆಸಗಿದರುಂಟೆಸುಡಲಿ ಸುತರೇಕೆಂದಳಲ್ದಳಾಚಿತ್ರಾಂಗದೆ ॥೪೪॥ಈಕಂತಸೂತ್ರವಿನಾಕರ್ಣತಾಟಂ ಕವಿಾ । ಶ್ರೀಕರಂನಿಜಜನನಿಗೇಕೆಂದುಬಿಡಿಸಿದೈ । ನಾಕಿನ್ನುಮಗನೊಮ್ಮ ರಳಿದುದಂಕೇಳ್ದಂತುಸೈರಿಪಳೊಕುಂತಿದೇವಿ॥ ಭೂಕಾಂತನೇಗೈದಪನೊ ಧರ್ಮರಾಜನವಿ।ವೇಕದಿಂಬಾಳುಗೆಡಿಸಿದೆಯೆಂದುತನಯನಂ।ಶೋಕದಿಂವಿ ಗೆಬೈದಳಲ್ವಚಿತ್ರಾಂಗದೆಗೆಲೂಪಿಬಳಿಕಿಂತೆಂದಳು ॥೪೫॥ ದೇವಿನಿಲ್ಲಿನ್ನು ಮರ್ಜುನನಮೃತಿಸಂಶಯಂ । ಭಾವಿಸುವಡೊಂದುಕುರುಪುಂಟದಂತನ್ನ ಕೇ । ಳೀವನದೊಳಂದುಪಾರ್ಥಂತನಗೆತೋರಿದಂದಾಡಿಮುದ್ರಮಮೈದ ನು ॥ ಆವದಿನಕೊಣಗುಮಿಾತರುಗಳಾದಿನಕೆನ್ನ । ಜೀವಕಳಿವಹುದೆಂದು ತಾನದಂನೋಡಿಬಹೆ । ನೀವಿಷಾದಂಜೇಡಸೈರಿಸೆನೆಕಳುಹಿದಳುಲೂಪಿ ಯಂಚಿತ್ರಾಂಗದೆ ॥೪೬॥ ಕ್ರೀಡಾವನಕೆಪೋಗಿನಿಮಿಷದೊಳಹಿಂದ್ರಸುತೆ

ನೋಡಿಬಂದಲ್ಲಿಯುದವಾಗ್ನಿಯಿಂದಾಪಂಚೆ । ದಾಡಿಮದ್ರುಮದೊಣಗಿತ
ರ್ಜುನನಮೃಧಿಸ್ಥಳಂನಡೆಪ್ರೋಪೆವಲ್ಲಿಗೆಂದು ॥ ಪೀಡಿಸುವಶೋಕದಿಂಚಿತ್ರಾಂಗ
ದೆಗೆನುಡಿಯೆ। ಕೂಡೆಪೊರಮಟ್ಟಲ್ಲರುಂರಣಕೆನಡೆತಂದು । ಜೋಡಾಗಿ
ಬಿದ್ದಿರ್ದಕರ್ನಸುತಪಾರ್ಥರಂಕಂಡಲ್ಲಿಕೆಡದಳಲ್ದರು ॥೫೭॥ ಶೀತೋಷ್ಣ
ರುಚಿಗಳಿಂಗಗನಗತಿಯುಂಬಿಟ್ಟು। ಭೂತಲದಮೇಲೆರವಿಶಶಿಗಳೆಸೆವಂತೆಪ್ರತ
ಹೂತಸುತಕರ್ನಜರತಲೆಗಳೊಪ್ಪಿರೆಕಂಡುಲೂಪಿಚಿತ್ರಾಂಗದೆಯರು ॥ಕಾ
ತರಿಸಿಕರಗಿಕಂಬನಿಯೊಳಾಳ್ದಾಗಶೋ । ಕಾತಿಶಯದಿಂದಪಾರ್ಥನಪಾದ
ದೋಳ್ಳೊರ। ಳ್ದಾತನಗುಣಂಗಳಂಸಾಲ್ಗೊಳಿಸಿಬಣ್ಣಿಸಿಪೊರಳ್ದುಗೋಳಿ
ಡುತಿರ್ದರು ॥೫೮॥ ನಿನ್ನಂಗಸಂಗಮನಗಲ್ದಿಯ್ಯುತ್ತಪಲಕಾಲ । ಮಿನ್ನೊ
ಮ್ಮೆ ನೆರೆಯಲಾಗದೆಕಾಂತನಂಜಗದೂ । ಳುಂನಿಸಲ್ಗಿನಾಪಡಿಯ ಹರುಂ
ರೂಪುಗುಣವಿಕ್ರಮಪ್ರೌಢಿಗಳೊಳು ॥ ಭಿನ್ನಿರದಕೆಚ್ಚೆದೆಯಸತಿಯರಾವ.
ಸುವಿಡಿದೆ । ವಿನ್ನೆಗಂಕೇಳ್ದಂತುಸ್ವೈರಿಪರೊಕಾಂತನೋ । ಳ್ಗನ್ನಿಯುಳ್ಳ
ರಸಿಯದ್ರೌಪದಿಸುಭದ್ರೆಯುರದೆಂತುಳಿವರಕಟೆಂದರು ॥೫೯॥ ಅಡಿಯೋ
ಳ್ದೊರಳ್ದುಕಾಯುವನಪ್ಪಿಕೈಗಳಂ । ಪಿಡಿದುರಸ್ಥಳಕೆತೆಗದೊಂದಿಸಿಕೋರ
ಳ್ಗೆಕಡಿ। ವಡೆದತಲೆಯುಂಕೂಡಿನೋಡಿಮುಂಡಾಡಿಕಣ್ಣಿಗಿಟ್ಟುಮೊಗಮಂ
ಚುಂಬಿಸಿ ॥ ಒಡನೊಡನೆಪಾರ್ಥನಚರಿತ್ರಮಂಸಾಲ್ಗೊಳಿಸಿ। ನುಡಿನುಡಿ
ಗಳಲ್ದುಕೆಲದೊಳ್ಕೆಡೆದಕರ್ನಜಂ ।ಗೊಡಲುರಿಯೊಳಕಟಸುತಹಾಯೆಂ
ದುಮರುಗಿದರುಲೂಪಿಚಿತ್ರಾಂಗದೆಯರು ॥೬೦॥ ಬಳಿಕಚಿತ್ರಾಂಗದೆಕು
ಮಾರನಂನೋಡಿಕೊಲೆ । ಗೆಳಸಿದ್ವೈಜನಕಂಗೆಜನನಿಯಾರ್ತ್ವಾಪೀರ್ವ । ರೇ
ಳಿಯಲೇಕಿನ್ನಕಟವ್ಯರ್ಥವ್ಯಮಂತಾಳಬಲ್ಗವಮಹೀತಳದೊಳು॥ಸೆಳೆದುಪೊ
ಡೆಖಡ್ಗದಿಂದಮ್ಮೀಶಿರಂಗಳಂ।ಬಳಿಕೈದಭಾರ್ಗವಂಕೊಂದುದಿಲ್ಲವೆತಾಯು
ನಳುಕದಿರ್ಪಿತೃಮಾತೃದಾಯಾದ್ಯವಧೆನಗೆಸಫಲವಹುದಪ್ಪುದೆಂದಳು॥೬೧॥
ತಾಯುವಸತಂಕೇಳ್ದುಶೋಕಕಲುಷಿತನಾಗಿ । ಪ್ರಿಯದಿಂಪ್ರೇಗಿಕಂಡೊಡೆ
ತನುಜನಲ್ಲೆಂದು । ನೋಯನುಡಿದಾಹವಂಚೆಕೆಂದೊಡೀತನಂಕೊಂದೆ
ನಾಂಪಂಥವೆಂದು ॥ ದಾಯತಪ್ಪಿದಬಳಿಕಪೇಳ್ದೊಡೇನಪುದನ್ನು।ಕೇಯ
ಮಾದುದುತನ್ನಬಾಳ್ಕೆಪಿತೃವಧೆಯೊಳೀ । ಕಾಯುಮಂಬಿಡುವನೀಗಳೆನೋ
ಳ್ಪುದೆಂದವಂಕಿಚ್ಚಿಪೊಗಲನುವಾದನು ॥೬೨॥ ತಂದೆಯುಂಕೊಂದುಳಿದನೆಂ
ದುಲೋಕದಜನಂ।ನಿಂದಿಸದಬಿಡರಿದಕೆನಿಷ್ಕೃತಿಗಳಂಕಾಣೆ । ನೊಂದು
ಮಂತ್ರಧ್ಯಾನಜಪತೀರ್ಥಯಾಗಯೋಗಂಗಳಿಂಕಳೆದುಕೊಳಲು ॥ ಸಂದಿ
ಗ್ಧಮಾಗಿರ್ದಪಾತಕಂಪೋಪುದುಮ। ಕುಂದಸ್ಮರಣೆಯಿಂದರ್ಜುನಂವೈ

ಷ್ಣವಂ। ಬಂಧುಸಖಕೃಷ್ಣಂಗೆನಾಚದೆಂತಿರ್ದಪೆಂಪೊಗುವೆನಗ್ನಿಯೊಳೆಂದ
ನು ||೨೩|| ಅನಲಪ್ರವೇಶಮಂನಿಶ್ಚಯಿಸಿಬಭ್ರುವಾ। ಹನನಗರುಚಂದನದ
ಕಾಷ್ಟಂಗಳಂತರಿಸು । ವನಿತರೋಳ್ಕಂಡುಚಿತ್ರಾಂಗದೆಕನಲ್ದುಸುತನಂ
ಬೈದುಫಲುಗುಣಂಗೆ || ವನಜನಾಭಂಮಿತ್ರನಿನ್ನೆಗಂಮನದೊಳಿರೆ ! ದನು
ಪಮಕೃಪಾಳುತಾನಿಲ್ಲಿಗೈದದೆಮಾಣ್ದ । ಪನೆಸೈರಿಸನ್ನೆಗಂನರನಜೀವಕ್ಕೆ
ಪೊಣೆದೇವಪುರಲಕ್ಷ್ಮೀಶನು ... ||೨೪||

ಸಂಧಿ ೨೩ಕ್ಕೆ ಪದ್ಯ ೧೨೨೮ಕ್ಕೆ ಮಂಗಳಮಸ್ತು.

---

## ಇಪ್ಪತ್ತನಾಲ್ಕನೆಯ ಸಂಧಿ.

ಸೂ|| ಪತ್ನಿಯುರದಸೆಯಿಂದಮಡಿದಿರ್ದಪಾರ್ಥಂಪ್ರ । ಯತ್ನ
ದಿಂನಿಜಸುತಂತಂದಸಂಜೀವಕದ। ರತ್ನದಿಂಕೃಷ್ಣಪ್ರಸಾದದಿಂಜೀ
ವಿಸಿದನುರ್ವಿಗಾಶ್ಚರ್ಯಮೆನಲು

ರಾಯಕೇಳಲ್ಲಿಗಸುರಾಂತಕಂಬಂದುಕೌಂ । ತೇಯನಂನೋಡದಿರ
ನನ್ನೆಗಂಸೈರಿಪುದು। ಪಾಯಮುಳ್ಳೊಡೆನರನಜೀವಮಂಪಡೆವುದಿಂತಗ್ನಿಪ್ರ
ವೇಶದಿಂದ || ಸಾಯಲೇನಹುದೆಂದಳಲ್ದುಸುತನಂಬೈದು। ಬಾಯಾರಿಚೀರಿ
ಚಿತ್ರಾಂಗದೆಹಲುಬಲೊಂದು। ಪಾಯಮಂಕಂಡುನುಡಿದಳ್ಪನ್ನಗೇಂದ್ರಸಂ
ಭವೆಬಭ್ರುವಾಹನಂಗೆ ||೧|| ಮಗನೆಮಡಿದರ್ಜುನಂಮಗುಳ್ವೇಳ್ವತೆರನಂ
ನಿ। ನಗೆಪೇಳ್ವೆನಾನೀಗಪಾತಾಳಲೋಕದೊಳ್। ಖಗರಾಜನೊರಸಿದಹಿನಿ
ಕರದಸುಮರಳ್ವಂತೆಫಣಿಪರಂಬೇಡಿಕೊಳಲು|| ಅಗಜಾರಮಣನಿತ್ತಸಂಜೀ
ವಕದಮಣಿಯು। ರಗಪತಿಯೊಳಿಹುದದಂಸತ್ವದಿಂತರಬಲ್ಲ। ವಿಗಡರಂಕಾ
ಣೆನೀಮೂಜಗದೊಳಿನೆಬಭ್ರುವಾಹನಂಖತಿಗೊಂಡನು ||೨|| ಸಂಜೀವಕ
ದಮಣಿಯುನೀಗತಾರದೊಡೆತಂ। ನಂಜನನಿಪೆತ್ತಲೀತಕೆಮತ್ತೆಮಡಿದಿಹನ।
ನಂಜಯುನಪ್ರಾಣಮಂಪಡೆವನಿದನೀಯದೊಡೆಫಣಿಲೋಕಮಂಸುಡುವೆ
ನು|| ಕಂಜಜಕಪರ್ದಿಗಳ್ತೊಡಕಿದೊಡೊರಲ್ಚುವೆಂ । ಭಂಜಿಸುವೆನಖಿಳದಿ
ಕ್ಪಾಲರಂಸೆಣಸಿದೊಡೆ। ಸಂಜಾತನಾದುದಕೆಸಫಲಮಾಯ್ತೆನುತುಬ್ಬಿದಂ
ಬಭ್ರುವಾಹನಂದು ||೩|| ಮರುಳಾಟಮೇಕೆನಿನ್ನಘಟುಕೊಳ್ಳದುಮಗನೆ|
ಗರಳಮಯದುರಿಯೊಳಿಪಸೀನ್ರದುಕಣಾನೋಡ। ಉರಗಪತಿಶೇಷರಾಜನ
ಕೋಶದೆಡೆಯೊಳಿಹಸಂಜೀವಕದಮಣಿಯುನು || ತರಬಲ್ಲನಾವವಂಗುಳಿಕ
ವಾಸುಕಿತಕ್ಷ । ಕರಶಂಖಪದ್ಮಕರ್ಕೋಟಕಾದಿಗಳಭೀ । ಕರವಿಷೋತ್ಕರ
ದಿಂದಕಾಹುಬಳಿದಿಹುದೆನಲುಳೂಪಿಗವನಿಂತೆಂದನು ||೪|| ಆಮಹಾಹಿಗಳ

ವಿಷಕಳುಕುವನೆತನ್ನಮಾ । ತಾವುಹಂಹರಿಗೆಕಾಸಿಗೆಯಾದವಂಪ್ನೇಲೆ ।
ಭೂಮಿಯುಂಪೊತ್ತವಂಶೇಷರಾಜಂಫಾಸಿಯುಹನೆಂಬಖಯುಮಲ್ಲದೆ ॥ ಆ
ಮಣಿಯನೀಯದೊಡೆಸಪ್ತಪಾತಾಳಮಂ ।ಸಾಮರ್ಥ್ಯದಿಂದಭೇದಿಸಿಕೊಂ
ಡುಬಂದುಸು। ತಾ್ರನುಸುತನಂಬದುಕಿಸದೆಮಾಣ್ದಪೆನೆತಾಯೆಹೇಳೆಂದೊ
ಡಿಂತೆಂದಳು ॥೫॥ಬಂದುಮೊದಲೊಂಭತ್ತುನೂರುಕಡೆಯಾದಪೆಡೆ ।ಯಿಂ
ದೆಸೆವನಾಗಂಗಳತಿವಿಷೋಲ್ಬಣದುರಗ । ವೃಂಡಮೋಲೈಸುವುದುಸಾವಿರ
ಮೊಗದಶೇಷರಾಜನಂಪಾತಾಳದ ॥ ಮಂದಿರದೊಳೊಮ್ಮೊಮ್ಮೆಗರುಡನ
ನಲ್ಲಿಗೆಬಂದು । ಕೊಂದಹಿಗಳಂಬದುಕಿಸಡೆತೋರಿಸುವರಲ್ಲ । ದೆಂದುಂತೆ
ಗೆಯರಾಮಣಿಯನೆಂದುಲೂಪಿನುಡಿಯಲ್ಕಾತನಿಂತೆಂದನು ॥೬॥ ಲೇಸನಾ
ಡಿದೆತಾಯೆಪಾತಾಳದಲ್ಲಿಹನು । ಹಾಸರ್ಪಸಂಕುಲವನೆಲ್ಲಮಂಕೊಂದಳಿ
ದ । ವಾಸವನಸುತನಂಪುಡಿದವೀರವೃಷಕೇತುವಂಬಿದ್ದಸೈನಿಕವನು ॥ಆ
ಸುಮಣಿಯುಂಕೊಂಡುಬಂದೆಬ್ಬಿಸಿದಬಳಿಕ । ವಿಾಸಲಾಗಿರ್ದಸಂಜೀವಕವ
ನೀವಂಗ । ತಾಸುವಾಗಿರ್ದಫಣಿಗಳ್ಗಿಂದುಪಾರ್ಥಜಂನುಡಿದೊಡವಳಿಂತೆಂ
ದಳು ॥೭॥ ತನಯಕೇಳನ್ಯರೋಳೆಲ್ಕೊಂಬಕಜ್ಜದಮಾಳ್ಕೆ । ವಿನಯದಿಂದೆಸ
ಗಿದೊಡೆಸಲೆಸುಗುಣವಾದಪುದು । ಮೊನೆಯಮೇಲಪ್ಪುದಾಯಾಸಮಂತ
ದರಿಂದನೀನತಿಕ್ರಮಿಸಬೇಡ ॥ ತನಗುಂಟುಕೆಳೆಪುಂಡರೀಕನೆಂಬಹಿಯೋ
ರ್ವ । ನನುಕೂಲನೆಮ್ಮತಂದೆಗೆಮಂತ್ರಿತಾನೀಗ । ನೆನದೊಡಿಲ್ಲಿಗೆಬಪ್ಪ
ನಾತನಂಕಳುಹಿತರಿಸುವೆನೆಂದಳಾಮಣಿಯನು ... ... ॥೮॥

ಇಂತೆಂದುಲೂಪಿಬಳಿಕಾಪುಂಡರೀಕನಂ । ಚಿಂತಿಸುವಿನಿಂಬಂದಿದೇಕೆಬ
ಆಸಿದೆಯೆನಲ । ನಂತನಲ್ಲಿಗೆಪೋಗಿನಿನ್ನತನುಜೆಯಕರ್ಣತಾಟಂಕದುಳಿವಿ
ಗಳಿದ ॥ ಕುಂತೀಕುಮಾರಕಂತನ್ನರಮಣಂಬದುಕು । ವಂತಮೃತಸಂಜೀ
ವಕದಮಣಿಯನೀವುದೆಂ । ದಂತರಿಸೆದಖಿಳವೃತ್ತಾಂತಮಂಪೇಳ್ದದಂಕೊಂ
ಡುಬಾನಡೆಯೆಂದಳು ॥೯॥ ಆಪುಂಡರೀಕಫಣಿಬಳಿಕದುಃಖಿತೆಯಾದ।ಲೂ
ಪಿಯಂಸೈಪಿಟ್ಟುಸಂಜೀವಕದಮಣಿಗೆ ।ಪೋಪೆನಾನಹಿಪತಿಯಸಮಯಮಂ
ಕಾಣ್ಬುದರಿದಲ್ಲಿತಳುವಾಗದಿರದು ॥ ಈಪಾರ್ಥನಂಗಕಳೆವಾಗದಿರದನ್ನೆ
ಗಂ । ರೂಪುಗೆಡದಂತೆಕಚ್ಚುವನೀಗಮದ್ವಿಪಂ । ವ್ಯಾಪಿಸಲೊಡಲ್ಕಳಲದೆ
ನೆಬಭ್ರುವಾಹನಂಕೇಳ್ದುಮತ್ತಿಂತೆಂದನು ॥೧೦॥ ಎಲೆಪುಂಡರೀಕಕೇಳೀಕ
ರ್ಣಸಂಭವಂ । ಕಲಿಚೆಲ್ವನತಿಬಲಂಶುಚಿಸುಗುಣಿಕೋವಿದಂ । ಕುಲವಿವ
ರ್ಧನನೀತನಂಗಮಂಕೆಡದಂತೆಮೊದಲೆನೀಂಕಚ್ಚಿಬಳಿಕ ॥ ಫಲುಗುಣನ
ದೇಹಮಂಕಚ್ಚೆನಲೊಡರ್ಚಿಫಣಿ ।ತಿಲಕನವರೀರ್ವರಶರೀರಂಗಳಂಕಚ್ಚಿ ।

ಸತಿಸಂತವಿಟ್ಟು ನಂಬಿಗೆಕೊಟ್ಟು ಬೀಳ್ಕೊಂಡು ಪಾತಾಳಕ್ಕೈತಂದನು ||೧೧||
ಆತಳವಾಶ್ಚರ್ಯಮಂವಿತಳದವಿಚಿತ್ರಮಂ | ಸುತಳದಸುರುಚಿಯುಂಮಹಾತ
ಳದಮಣಿಮಯತೋ | ನ್ನತಿಯುಂತಳಾತಳಗತಾಣದತಿಶಯಮುಂರಸಾತಳದ
ರಂಜಿತನನು || ಪ್ರತಿದಿನದೊಳರಿದರಿವುತಾಪುಂಡರೀಕಫಣಿ | ಪತಿನೋಡಿ
ನೋಡಿವಿಸ್ಮಿತನಾಗುತೈದಿದಂ|ವಿತತರತ್ನಪ್ರಭಾಶೋಭಿತದಪಾತಾಳಲೋ
ಕದಪತಿಯಪುರವೆನೆ||ಫಲಿತಕಾಂಚನವೃಕ್ಷಲತೆಗಳಬನಂಗಳಿಂ |ಜ್ವಲಿತನವ
ರತ್ನಸೌಧಂಗಳಪುರಂಗಳಿಂ | ಕಲಿತಪೀಯೂಷದೀರ್ಘಿಕೆಗಳಿಂಕನಕಾರ
ವಿಂದದಕೊಳಂಗಳಿಂದ|| ಲಲಿತಲಾವಣ್ಯದುರಗಾಂಗನೆಯರಿಂಸವಾ|ಕಲಿತ
ವಾಗಿಹಭೋಗವತಿಯುವದಿಯುಂದನಿ|ನಿಶ್ಚಲಿತಸುಖನಿಲಯಮೆನಿಸಿರ್ದಪಾ
ತಾಳಕ್ಕೆಪುಂಡರೀಕಂಬಂದನು||೧೩||ನವರತ್ನಮಯದಗೋಪುರದಕಾಂತಿ
ಯದಿವ್ಯ | ಭವನದಿಂಸಾಗವಧೂಗಳನೃತ್ಯಗೀತದು| ತ್ಸವದಿಂದಪುಣ್ಯಗಂ
ಧೋತ್ಕರದಪದ್ಮವನಪುಷ್ಪವಾಟಿಕೆಗಳಿಂದ || ವಿವಿಧೋಪಚಾರಕೃತಪೂ
ಜೆಗಳನಾನಾವಿ| ಭವದಿಂದೆಸೆವಮಹಾಹಾಟಕೇಶ್ವರನೆಂಬ | ಶಿವಲಿಂಗವಿ
ರೆಭೋಗವತಿಯತಟದೊಳ್ಕಂಡುಪುಂಡರೀಕಂಮಣಿದನು ||೧೪|| ದಿವ್ಯಭ
ವನದೊಳನೇಕಾಸುರಸುರಾದಿನಿಖಿ | ಳವ್ಯಾಳವೃತನಾಗಿವರಫಣಾಮಣಿಸ
ಹ| ಸ್ರವ್ಯೂಹದರ್ಚಿಯಿಂದುರುಕಾಯಕಾಂತಿಯಿಂದೇದೀಪ್ಯಮಾನನಾಗಿ
ಅವ್ಯಾಕುಲದೊಳಚ್ಯುತಧ್ಯಾನದಿಂದಕ | ರ್ತವ್ಯದಿಂದವನಿಯಂತಾಳ್ದನ
ಘೌರ್ಯೋತ್ತಮ | ದ್ರವ್ಯಕಥಿಗತಿಯಾಗಿರಂಜಿಸುವಶೇಷನೋಲಗಕುರಗನೈ
ತಂದನು ||೧೫|| ಪುಂಡರೀಕಂಸಮಯಮರಿದುರಗರಾಜನಂ|ಕಂಡೆರಗಿನು
ಡಿದನವಧರಿಸೆಲೆಫಣೀಂದ್ರಭೂ |ಮಂಡಲದರಾಯರೋಳ್ಪಾಂಡುಸುತಕೌ
ರವರ್ಗಾದುದಾಹವಮದರೊಳು || ದಿಂಡುದರಿದಹಿತರಂಭೀಷ್ಮನಂಕೊಂ
ದನಾ|ಖಂಡಲಾತ್ಮಜನದರಪಾತಕಕೆನೃಪತಿಕ್ರೈ | ಕೊಂಡನಚ್ಯುತನಾಜ್ಞೆ
ಯಿಂಕ್ರತುವನಾಯ್ತುಗಂಗಾಶಾಪಮರ್ಜುನಂಗೆ ||೧೬|| ಆಜಾಹ್ನವಿಯ
ಶಾಪದಿಂಬಭ್ರುವಾಹನಂ|ವಾಜಿಸಹಿತೈದಿದಧನಂಜಯನತಲೆಯುಂಮ|ಹಾ
ಜಿಯೊಳ್ತರಿಯೆಪತಿಶೋಕಮಂತಾಳಲಾರದೆನಿಂನಮಗಳುಲೂಪಿ || ತೇಜ
ದಿಂದೆಸೆವಸಂಜೀವಕದಮಣಿಯಂಪ್ರ|ಯೋಜನಕೆತಹುದೆಂದುಕಳುಹಿದೊ
ಡೆಬಂದೆನೀ| ವ್ಯಾಜದಿಂದಿದೆನೋಡೆನುತಕೊಟ್ಟನವಳಕುರುಹಂಫಣಿಫಣೀ
ಶ್ವರಂಗೆ ||೧೭|| ಆಪುಂಡರೀಕನಿಂತೆಂದುರಗರಾಜಂಗು| ಲೂಪಿಕಳುಹಿದ
ಕರ್ಣಕಂಠಭೂಷಣದಸ್ವ| ರೂಪಮುಂಮುಂದಿರಿಸಿನಿಂನನಿಜಜಾಮಾತನ
ರ್ಜುನಂಸುಜನನಿಳೆಗೆ || ಶ್ರೀಪತಿಯುಸಖನಿಂದ್ರಸೂನುಧರ್ಮಾನುಜಂ|ಭೂ

ಪಾಲರೊಳೀಪ್ಸಿ ಸರ್ವಡೆದವಂಜೀವಿಸೆಪ । ರೋಪಕಾರಂಪೊಲ್ಲಮಲ್ಲನಿನಗದ
ರಿಂದಕೊಡುವುದುಮಣಿಯುನೆಂದನು ॥೧೮॥ ಶೇಷರಾಜಂಬಳಿಕತನ್ನತನು
ಜೆಯುಕರ್ಣ । ಭೂಷಣವನಾಕಂತಪೂತ್ರಮಂಕಂಡುಸಂ। ತೋಷವರ್ಜಿ
ತನಾಗಿಪೊರೆಯೊಳಹತಕ್ಷಕಾದ್ಯಹಿಪತಿಗಳಂನೋಡುತ॥ ದೋಷವೇನಿ
ದಕೆಮಣಿಯಂಕೊಡುವೆನ್ನೆಸಲೆವಿ। ಶೇಷಫಲಮಹುದಾರ್ಜಿಸಿದವಸ್ತುಲೊ
ಗರಭಿ । ಲಾಷಗಾದೊಡೆಪಾರ್ಥನುತ್ತಮಂವೃಷ್ಣಿಪಂಜಾವಾತನೆಮಗೆಂ
ದನು ॥೧೯॥ ಕೇಳಿದುಪ್ಪ್ರಾಮದಿಂತವಾತಮಗೆನಿಖಿಳಸ । ಪಾಳಿಚಿಂತಿಸೆ
ಬಳಿಕಧೃತರಾಷ್ಟ್ರನೆಂಬದು । ರ್‍ವ್ಯಾಳಪತಿನುಡಿದನೆಲೆನಾಗೇಂದ್ರತಂ
ಮವಸರಕ್ಕೆಬಹುದಾದನ್ಯರ॥ ವೇಳೆಗಿತ್ತೊಡೆತಿರುಗಿಬಂದಪುದೆಮಾನವ ।
ಖೂಳಕೃತಘ್ನರುಪಕಾರವಮಂಬಲ್ಲರೆವೃ । ಥಾಳೋಚನೆಗಳೇತಕಿದಕೆ
ಮಣಿಯಂಕೊಡದಿರೆನೆಫಣಿಪನಿಂತೆಂದನು ॥೨೦॥ ನಾಡೊಳೂರೋಳ್ಮನೆ
ಯೊಳೋರೋರ್ವರುಂಟುಪರ । ಪೀಡೆಗಳುಕದೆವಕ್ರಗತಿಯಿಂದನಡೆವ
ಕಡು। ಗೇಡಿಗನ್ನಿನ್ನಂತೆಶಿವಶಿವಾಪಾಪಿಗಳ್ ದುಃಖಾರ್ತರಾಗಿಬಂದು॥
ಬೇಡಿದರೆತನಗುಳ್ಳವಸ್ತುವಂಕೊಡದಕೆಡೆ। ನೋಡುವವನಧಿಕನೆದಧೀಚಿ
ಶಿಬಿಗಳಮಾಳ್ಕೆ । ಖೋಡಿಯಾದುದೆಮಣಿಯುನೀಪೇಂಕಿರೀಟಗೆನೆಧೃತರಾ
ಷ್ಟ್ರನಿಂತೆಂದನು ॥೨೧॥ ಹೇಳಿದಂತಿರದುಪುರುಷಾರ್ಥಮಂನೋಡಿದೊ
ಡೆ ಕಾಳಹುದುನಾಗಲೋಕದಬಾಳ್ಕೆವಿಚಾರಿಪಾ । ತಾಳಕೆಮತಂಗಋಷಿ
ಶಾಪದಿಂಬಾರನ್ನೆಸಲೆಗರುಡನಿಳೆಯುಮೇಲೆ ॥ ತಾಳಬಲ್ಲನೆನಂಮರತ್ನಮಂ
ಕಂಡುನರ । ರಾಳಿಕೆಗಳಲ್ಪಕಾಲಂಗಳಿಂದುಳಿದೊಡಂ । ನಾಳೆಪಾಂಡವ
ನಳಿಯದಿರ್ದಪದೆಮಣಿಯಂಕೊಡದಿರೆನಲ್ಕಿಂತೆಂದನು ॥೨೨॥ ಕಷ್ಟದಿಂ
ದಾವುಮಣಿಯಂಕೊಡದೆಮಾಣ್ದಡೇಂ । ನಷ್ಟಮಾದಪುದೆಪಾರ್ಥನಜೀವ
ಮಸುರಾರಿ । ಯಿಷ್ಟನಲ್ಲನೆಪಾಂಡವಪ್ರಾಣನಾಗಿರ್ಪನಂತಲ್ಲದಾನತರ್ಗೆ॥
ಸ್ಪಷ್ಟದಿಂಕೃಷ್ಣಕಾರುಣ್ಯಸಂಜೀವನಂ । ದೃಷ್ಟನಾಗಿರಲಿದರಹಂಗಿದೇತ
ಕೆನೀನ । ನಿಷ್ಟನಾಗದಿರಿಂನುಮಿಗಿಸಿಕೊಂಬೆನುಲೇಸಸೆಂದೊಡವನಿಂತೆಂದ
ದನು॥೨೩॥ ಉರಗೇಂದ್ರನೀನಾಡಿದವೊಲೆಂತುಮರ್ಜುನಂ । ಮುರಹರನ
ಕರುಣದಿಂಸಪ್ರಾಣನಪ್ಪನಿದ । ಕುರುತರದಸಂಜೀವಕದಮಣಿಯನಿತ್ತುನ
ಮ್ಮಲ್ಲರಂಕೆಡಿಸಬೇಡ ॥ ಗರುಡದೇವನಹಾವಳಿಗೆಬಂಧುಕೆಯಾಗಿರಲಿ । ತಿ
ರುಗಿಕಳುಹಿಸುಪುಂಡರೀಕನಂತವಸುತೆಯು । ಪೊರೆಗೆಂದುಧೃತರಾಷ್ಟ್ರನೆ
ನಲೊಪ್ಪಿನಿಖಿಳಸರ್ಪಾಳಿಗರ್ಜಿಸುತಿರ್ದುದು ॥೨೪॥ ಭೂಪಾಲಕೇಳ್ದೊರೆಗ
ಳೊಲಿದೀವಕಜ್ಜಂಸ । ವಿಪಾಪದದುರಾತ್ಮರಿಂಕೆಡದೆಮಾಣ್ದಪುದೆಪೇ । ಳಾ

ಪನ್ನಗೇಶ್ವರಂಧೃತರಾಷ್ಟ್ರನೆಂದವಾತಿನಮೇಲೆಪಿನ್ನನಾಗಿ ॥ ಆಪುಂಡರೀ
ಕನಂಕರೆದುಕೊಡಲೀಯರ್ವ । ರೋಪಕಾರಕೆಮಣಿಯನೀಫಣಿಗಳಿಂತೆಂ
ದು । ಲೂಪಿಗರುಪೆಂದುಕಳುಹಿದೊಡವಂನರನಳಿದರಣಭೂಮಿಗೈತಂದ
ನು ॥೨೫॥ ಚಂದನದತೈಲದಿಂದುರಿವಬೊಂಬಾಳಿಂಗೆ । ಳಿಂದಕರ್ಪೂರದ
ಸೊಡರುಗಳಿಂದಮಣಿದೀಪ । ದಿಂದಿರುಳ್ಗಂಗೊಳಿಸುತಿರೆಬಭ್ರುವಾಹನಂ
ಮಂದಿಸಹಿತಾರಣದೊಳು ॥ನಿಂದಿರಲುಲೂಪಿಚಿತ್ರಾಂಗದೆಯುರಮರೇಂದ್ರ
ನಂದನನಬಳಿಯಸಂಜೀವಕದರತ್ನಮಂ । ದಂದಶೂಕೇಶ್ವರಂಕೊಡುವ
ನೆಂಬಾಶೆಯಿಂಪಂಬಲಿಸುತಿರುತಿರ್ದರು ॥೨೬॥ ಆನ್ನೆಗಂಪುಂಡರೀಕಂಬಂ
ದುಲೂಪಿಯೊ । ಳ್ಪನ್ನಗೇಂದ್ರಂಸುಧಾಮಣಿಯಂಕೊಡದತಿರುಗಿ। ತಂನ
ಕಳುಹಿದವೃತ್ತಾಂತಮನುಸುರಲದಂಚಿತ್ರಾಂಗದೆಗೆಸೂಚಿಸೆ ॥ ಇನ್ನುವೈ
ಧವ್ಯದಿಂದೊಡಲಂಪೊರೆಯೆನೆಂದು।ನನ್ನಿಯಿಂದಗ್ನಿಪ್ರವೇಶಮಂನಿಶ್ಚೈಪ।
ಳಂನೋಡಿಕೋಪದಿಂದಾಬಭ್ರುವಾಹನಂನಿಜಮಾತೆಗಿಂತೆಂದನು ॥೨೭॥
ಚಕ್ರಿಸೇವಕನೀಕಿರೀಟಿಧರ್ಮಾತ್ಮನುಜಂ । ಶಕ್ರಸುತನೆನ್ನತಾತಂಮೇಲೆತುರಗ
ಮೇ ।ಧಕ್ರತುವಿಗೋಸುಗಂಮಡಿದಿರಲ್ಬೇಡಿದೊಡೆಮಣಿಯಂಕೊಡದಶೇಷ
ನು ॥ ವಕ್ರಮಾದರೆವಾಸುಕಿಪ್ರಮುಖಭೋಗಿಗಳ । ತಿಕ್ರಮಿಸಿತದ್ರತ್ನ
ಮಂಕೊಂಡುಬಹೆನೆಂನ । ವಿಕ್ರಮವನೀಗನೋಡೆನುತೆದ್ದುಕರೆಸಿದಂಪಾ
ರ್ಥನಿಜಸೈನಿಕನನು ॥೨೮॥ ಫಣಿಕುಲವನಾಕ್ರಮಿಸಿಕೊಂಡುಬಹೆನಾವು
ಹಾ । ಮಣಿಯನಲ್ಲಹುದೆಂದೊಡಜಹರಿಪಿನಾಕಿಗಳ । ಪಣೆಯಕ್ಕರಗಳಂ
ತೊಡವೆನೊರಸುವೆನಷ್ಟದಿಕ್ಪಾಲರಾಯುಗಳನು ॥ ಎಣಿಕೆಬೇಡಿದಕಿನ್ನು
ವೀರವೃಷಕೇತುಫಲು । ಗುಣರದೇಹಂಗಳತಿಜತನವೆಂದಾಪ್ತರ್ಗೆ।ರಣದ
ಸುಯಿಧಾನಮಂಪೇಳ್ದು ನಿಜಬಲಸಹಿತಪಾರ್ಥಸುತನನುವಾದನು ॥೨೯॥
ಏರಿಸಿಮಹಾಧನುವನಿಶಿತಬಾಣವನೆಚ್ಚು । ಡೋರುಗಳದವನಿಯಂಸಪ್ತಪಾ
ತಾಳಕ್ಕೆ । ತೋರಿಸಿದನೊಂದುಪೇರ್ಬಟ್ಟೆಯಂನಡೆದನರ್ಜುನಿತಂನಸೇನೆ
ಸಹಿತ ॥ ಮೀರಿದಶರಾವಳಿಯಘಾತಿಯಂತವತಾಳೆ । ಲಾರದಸಕಲಭೋ
ಗಿತತಿಬಂದನಂತಂಗೆ । ದೂರಲ್ಕೆಧೃತರಾಷ್ಟ್ರನಂಟೈದುಫಣಿಗಳಂಕಾಳಗ
ಕೆಬೀಳ್ಕೊಟ್ಟನು ॥೩೦॥ ನಾಗರಥವಾಜಿಗಳಕಾಲಾಳ್ಕೈದುಗಳ । ನಾಗದ
ಳವೈದುಯೋಜನದಗಲದಿಂದನಾ । ನಾಗತಿಯೊಳೈತಂದುದರ್ಜುನಿಯ
ಸೈನಿಕದಮೇಲೆಸನ್ನಾಹದಿಂದ ॥ ತಾಗಿದುದುಸರ್ಪಾಳಿತಮತಮಗೆವಾಸಿ
ಯುಂ । ತಾಗಿವದನದವಿಷಜ್ವಾಲೆಗಳ್ತುವರಿಸಿ । ತಾಗಿರಿಶನಕ್ಷಿಯಿಂಪೊರ
ಮಡುವಧಳ್ಳುರಿಯಧಾಳಿಯೆನೆಪರಬಲದೊಳು ॥೩೧॥ ಗುಳಿಕತಕ್ಷಕಶಂಖ

ಕರ್ಕೋಟಕಾದಿಫಣಿ । ಗಳತಂಡದಿಂದಧೃತರಾಷ್ಟ್ರನುರುಫಣಿಸಿಪರ ।
ಬಲವೊಳಿಪ್ಪತ್ತೊಂದುಸಾವಿರಭಟಾಳಿಯುಂಕೆಡಹಲರ್ಜುನಿಕನಲ್ದು ॥ಪ್ರೊ
ಳಿವಕೂರ್ಗಣೆಗಳಂಕರೆಯಲ್ಕೆಪನ್ನಗಾ । ವಳಿಯತಲೆಗಳ್ಪರಿದುಬೀಳುತಿ
ರ್ದುವುಮಹಾ । ಪ್ರಳಯದೊಳ್ಗಗನದಿಂದಿಳಿಗುದಿರ್ವುಡುನಿಕರದಂತೆಪಡೆ
ವಣಿಗಳೊಡನೆ ॥ ದರ್ವೀಕರಾವಳಿಯನರೆಗಡಿಯಲನುಮತ್ತೆ । ಸರ್ವದಳಮಂ
ವಿಷಜ್ವಾಲೆಯೊಳುರುಪಲದಕೆ । ನಿರ್ವಾಹಮಂಕಂಡುಸಾರಂಗಕಿಬಿನಕು
ಲಗ್ರಧ್ರುಂಗತಾಗಿಸೀಳ್ವ ॥ ಉರ್ವಮಂತ್ರಾಸ್ತ್ರಂಗಳಂತಿರುವಿನೋಳ್ವಾಡಿ।
ಗೀರ್ವಾಣಪತಿಸುತನಸೂನುಕಾಲದಕಡೆಯ । ಶರ್ವನಂತಿರೆಕೋಪಮಂ
ತಾಳ್ದುತೆಗೆದೆಚ್ಚನೇವೇಳ್ವನದ್ಭುತವನು ॥೩೩॥ ಆಟ್ಟಣಿಸಿಪದ್ದುಸಾರಂಗ
ಮುಂಗುಲಿನವಿಲ । ಘಟ್ಟುರಗಸೇನೆಯಂಘಾತಿಸಿಪೊರಳ್ದುದು । ಬಿಟ್ಟ
ನರ್ಜುನಿಮುತ್ತೆಮಧುಕರವತಕ್ಷಕಂಗಳಮೇಲೆಜೇನ್ಗರೆವೊಲು ॥ ತೊಟ್ಟು
ತೆಗೆದೆಚ್ಚಂಪಿಪೀಲಿಕಾಸ್ತ್ರವನೊಡನೆ । ಕಟ್ಟುರುಹಿಮುತ್ತಿದುವುಫಣಿಗಳಂ
ಕಚ್ಚಿದುವು। ನಿಟ್ಟಸುವಕಂಗಳಂತಿಂದುವುನೆಣಂಗಳಂಕೊರೆದುವೊಡಲಸ್ಥಿ
ಗಳನು॥೩೪॥ಪೋಟೆಗೊಂಬುಗಳಪಳೆಮರದಂತೆತಿರುಳಿಲ್ಲ। ದೋಟೆಗಳತಿಂ
ತ್ರಿಣೀಫಲದಂತೆಗುಳಿಕಕರ್ಕೋಟಕಾದಿಗಳೊಡಲ್ಪೊಳ್ಳಾದದವಿರುಹೆಗಳ
ಮುತ್ತಿಗೆಗೆಕಂಗೆಟ್ಟವು॥ತೋಟಿಯಂತಂದಧೃತರಾಷ್ಟ್ರನವರೂಥಮಂ ।
ಘೋಟಕವನಿಷುಕಾರ್ಮುಕಂಗಳಂಖಂಡಿಸಿಕಿ । ರೀಟಿಸ.ತನುರುಬಿದೊಡೆ
ಮುರಿವೊಡೆದುರಗಸೇನೆಶೇಷನಿದ್ದೆಡೆಗೋಡಿತು ॥ ಕೆಟ್ಟೋಡಿಬಂದಹಿಗಳ
ರ್ಜುನಿಗೆರತ್ನಮಂಕೊಟ್ಟುಳುಹಬೇಕೆಂದುನಾಗರಾಜಂಗೆಮೊರೆ ।ಯಿಟೊ
ಡಾತಂಕನಲ್ದೇಕೆತಡದಿರಿನೊದಲ್ಕಂತ್ರಜ್ಞರಿಳೆಯನರರು॥ ಕಟ್ಟುಗ್ರಮಾಗಿ
ರ್ದನಿಮ್ಮವಿಷಕಂಜರಿಂ। ನಟ್ಟುಸುಡದಿರನೀಗಪಾರ್ಥಿಪಮಾತಾಳವಂ। ನೆಟ್ಟ
ನೆಸಮರ್ಥರ್ಗೆತನುಧನವನೊಪ್ಪಿಸದೊಡುಳಿವರೇಕೃಶರೆಂದನು॥ ಸಾಕದಂ
ತಿರಲಿನ್ನುಪಾರ್ಥಿಯಶರಾಗ್ನಿಯಿಂ । ಕಾಕೋದರಾಳಿಬೇಯದಮುಂನಮ
ರ್ಜುನಿಗೆ । ಬೇಕಾದವಸ್ತುವಂಕೊಟ್ಟೆಮ್ಮನುಳುಹೆಂದುಫಣಿಕುಲಂಬಾ
ಯ್ಬಿಡಲು ॥ ಲೋಕದೊಳ್ದಾನಧರ್ಮೋಪಕಾರಂಗಳ್ಗೆ । ತಾಕೊಡದೆ
ಮಾಜಿಕೊಂಡಿರ್ದಲೋಭಿಯಧನಂ । ಕಾಕಭಾಜನಮಪ್ಪುದಡವಿಯೊಳ್ಬಿ
ದ್ದಪಣ್ಣದಂತೆಂದನುರಗೇಂದ್ರನು ॥೩೫॥ ಧರಣಿಧರನಂಮದುರ್ನೀತಿಯಂ
ನೋಡದಿ । ರ್ಕ್ಕರಹರಪ್ರೀತಿಯುಪ್ಪಂತೆಕೊಡುರತ್ನಮಂ । ನರಸುತಂಗೆ
ರ್ಜುನಂಬದುಕಲೆಂದಹಿಗಳಾಶೇಷನಂಬೇಡಿಕೊಳಲು ॥ಹರಿಯಕಾರುಣ್ಯ
ಸಂಜೀವನಂಪಾಂಡವ । ಗರಲದೇಗೈಯ್ವುದಾವಿತ್ತಮಣಿದುಗ್ಧಸಾ । ಗ

ರಕಕ್ಷೀರಮಂಬೆರೆಸಿದುಪಕಾರಮಹುದೆಂದುಮತ್ತಿಂತೆಂದನು ॥೩೮॥ ಈ
ಮಣಿಯನುಂಕಲ್ಪತರುಕಾಮಧೇನುಚಿಂ । ತಾಮಣಿಯನುಂಬಯಸಲೀಕ
ಕಟಯಾದಪತಿ । ಆಮಣಿಯನುಂನತದಭಕ್ತಿಯಿಂದರಿವರ್ಗಸಾಕದಂತಿ
ರಲಿನೀವು ॥ ಆಮಣಿಯದಾನಮಂತಪೆದಪಾಪಂಹರಿಯು । ರಾಮಣೀಯ
ಕಮೂರ್ತಿದರುಶನದೊಳಲ್ಲದದು । ತಾಮಣಿಯದಂಜದಿರಿಗರುಡಂಮುಳಿ
ವನಲ್ಲಬಂನಿಪೋದಪೆನೆಂದನು ॥೩೯॥ ಇಂತೆಂದಖಿಳಪನ್ನಗಾವಳಿಯನೊ
ಡಗೊಂಡ । ನಂತರದೊಳಾಮಹಾಮಣಿವೆರಸಿಪೊರಮಟ್ಟ । ನಂತನುರು
ಕುಂಡಲದ್ವಿತಯಮಂಶತಲಾಕೆಯೊಳೆಸೆವಸತ್ತಿಗೆಯನು ॥ ಸಂತಸದೊಳ
ರ್ಜುನಿಗೆಕೊಟ್ಟುಕಂಡಾತನಂ । ಸುತ್ತೈಸಿಪಾತಾಳದುತ್ತಮಸುವಸ್ತುಸಹಿ
ತಂತರಿಸದೈದಿದಂಫಲುಗುಣಂಮಡಿದಿಹರಣಾವನಿಗೆಸಂಭ್ರಮದೊಳು॥೪೦॥
ಸುಂಮಾನದಿಂದಶೇಷಂಪೋಗುತಿರೆಕಂಡು । ದುಂಮಾನದಿಂದಧೃತರಾಷ್ಟ್ರ
ನುನಿಜಾಲಯದೊಳುಂಮುಳಿಸಿಮಣಿವಿಜಯಮರ್ಜುನಿಗೆಪಾರ್ಥಂಗೆಜೀವಂ
ಯುಧಿಷ್ಠಿರಂಗೆ ॥ ತಂಮನಭ್ಯುದಯಂಮಹಾಧ್ವರಕೆತುರಗಮಿನಿ । ತೊಂ
ಮಸಂಜನಿಸುತಿರ್ದಪುದಕಟಬಹುವಿಘ್ನ । ಮಂಮಾಡಿದೆಂತಪ್ಪಿತೀಗತಾ
ನೀಗೈವೆನೆಂದುಚಿಂತಿಸುತಿರ್ದನು ॥೪೧॥ ಅನ್ನೆಗಂದುರ್ಬುದ್ಧಿದುಸ್ಸ್ವಭಾ
ವರ್ಕಳಿಂ । ಬುಂನತದಪೆಸರುಳ್ಳಮಕ್ಕಳುಂಟೀರ್ವರಾ । ಪನ್ನಗಂಗವರಾ
ತನಂಸಂತವಿಟ್ಟುನೇಂಬಹುದುಫಣಿರಾಜನೊಡನೆ ॥ ಮುಂನವರಣಕೆಪೋ
ಗಿಪಾರ್ಥನತಲೆಯನಾವು । ಗನ್ನದಿಂಕೊಂಡೊಯ್ವೆವೆಮ್ಮಚೇಷ್ಟೆಗಳಿಂದ
ಭಿಂನಮಾಗದೆನರರಬಾಳ್ಕೆಬಾರದುನರಕಮಂಜಬೇಡಿದಕೆಂದರು ॥೪೨॥
ಅರಸಕೇಳ್ದುರ್ಬುದ್ಧಿದುಸ್ಸ್ವಭಾವರ್ಮೊದಲೆ । ಧರೆಗೆಬಂದರು ನನತಲೆ
ಯನಪಹರಿಸಕೊಂ । ಡಿರದೆಬಕದಾಲ್ಭ್ಯನಮಹಾಘೋರನಿರ್ಜರಾರಣ್ಯ
ದೊಳ್ಬಿಸುಡಲಿತ್ತ ॥ ಹರುಷದಿಂಶೇಷನಂಮುಂದಿಕ್ಕಿಕೊಂಡುಮಣಿ । ವೆ
ರಸಿರಣಮಂಡಲಕೆಕಲಿಬಭ್ರುವಾಹನಂ । ಬರಲಾಸಮಯದೊಳಾದುದು
ಬಹಳಕಳಕದಂಕಾಣದೆನರನಶಿರವನು ॥೪೩॥ ಕಾಂತೆಯರೊಡನೆತಂನಜ
ನನಿಯರ್ಕುಂಡಲದ । ಕಾಂತಿಯಿಂದಾರಣಾಗ್ರದೊಳೆಸೆವುತಿರ್ದನಿಜ । ಕಾಂ
ತನಶಿರವನಲ್ಲಿಕಾಣದೇನಾದುದಾರೊಯ್ದರೆಲ್ಲಿರ್ಪುದೆಂದು॥ ಪ್ರಾಂತದೇಣ್ದೆ
ಸೆಗಳಂನೋಡಿಹಂಮೈಸಿವಿ । ಭ್ರಾಂತಿಯಿಂದರಸಿಹಾಹಾಯೆಂಬರಭಸ
ಮಾ । ಶಾಂತಮಂತೀವಲಾಸಮಯಕಹಿಪತಿಸಹಿತಬಭ್ರುವಾಹಂಬಂದನು॥
ಅಕ್ಕರೊಳುಲೂಪಿಚಿತ್ರಾಂಗದೆಯರನ್ನೆಗಂ । ಕಕ್ಕಸದರಣದೊಳರ್ಜುನನಕಾ
ಲ್ದೆಸೆಯೊಳೆವೆ । ಯಿಕ್ಕದರಮಣನತಲೆತನುಗಳಂನೋಡುತಿರ್ದ ವರಾಗಪಾರ್ಥಿ

ಬರಲು || ಇಕ್ಕೆಯೊಳ್ಕಿರವಿಲ್ಲದಿರೆಬೆದರಿವ್ಯ್ಯಮರೆದು | ಮಿಕ್ಕಸತಿಯರ
ನೆರವಿಗಜಬಜಿಸೆಕಂಡಿಳೆಯೊ | ಳೊಕ್ಕನೊಡಲಂಬಭ್ರುವಾಹನಂಮೃತತ
ಲ್ಪನಾಗಿಪಲವಣಿಕೆಯಿಂದ ... ... ... ||೪೫||

ಇಂತಾಗುತಿರಲಿತ್ತಲತ್ತಲಿಭನಗರದೊ | ಳ್ಕುಂತಿಪಾರ್ಥಂಬೀಳ್ವದಿನದಿ
ರುಳ್ಕಂಡಳ | ತ್ಯಂತಭೀಕರದಕನಸಂಪೇಳ್ದಳಸುರಾರಿಧರ್ಮಜವೃಕೋದರ
ರ್ಗೆ || ಅಂತಕನದೆಸೆಗಾಗಿರಾಸಭವನೇರಿಪ್ಪೋ | ಪಂತ್ರೈಲವಾಪಿಗತನಾಗಿ
ದಾಸಣದಪೂ | ಪಂತೊಡಂತಾಳ್ದಗೋಮಯವಿಲಿಪ್ತಾಂಗನಾಗಿರ್ದಪಂ
ವಿಜಯನೆಂದು ||೪೬|| ಬೆಂದಪುದುಪಡದೆನ್ನೊಡಲ್ಸುಭದ್ರೆಯಕಂಗ | ಳಿಂ
ದೊಸರ್ದಪುದುಕಂಬನಿಕೃಷ್ಣನಿನ್ನಸಖ |ನಿಂದುಜೀವಂತನಾಗಿರ್ಪುದರಿಂದೆಂ
ದುಪೃಥೆಹಂಬಲಿಸಿಮರುಗುತಿರಲು || ಇಂದಿರಾವಲ್ಲಭಂಗರುಡನಂನೆಸೆಯ
ಲ್ಕೆ | ಬಂದನಾತಂಬಳಿಕವನಬೆನ್ನಡರ್ದನಿಲ |ನಂದನಯಶೋದೆದೇವಕಿ
ಕುಂತಿಗಳ್ವೆರಸಿಮಣಿಪುರಕೆನಡೆತಂದರು ||೪೭|| ವಿಸ್ತರದರಾಜಭವನದ
ಮಾಟಕೂಟತಯು | ತಸ್ತಂಭದಿಂದಸೆವಸಭೆಯನವರತ್ನದಗ |ಭಿತ್ತಿಗಳ
ಕೋಟಾವಲಯಮಣಿಪುರದಪೊರೆಗೆಕಾದಿಮಡಿದಿರ್ದರಣದ || ಹಸ್ತಿಹಯ
ನರವೃಂದಮಂಸುತ್ತಲುರಿವದೀ | ಪಸ್ತೋಮಮಂಬಿದ್ದಪಾರ್ಥನಂನೆರೆದಿ
ಹಸ | ಮಸ್ತಸತಿಯರನಭ್ರದಿಂಶೌರಿಭೀಮಂಗೆತೋರಿಮಗುಳಿಂತೆಂದನು||
ಭೀಮನೋಡಿಲ್ಲಿಪಾರ್ಥನದೇಹಮಿದೆವದನ | ತಾಮರಸಮಂಕಾಣೆನೆಡಗಿ
ದುದೊಬಳಸಿರ್ದ | ಭಾಮಿನಿಯರಾನನಶಶಾಂಕಮಂಡಲದಿಂದನಲ್ಕೆಹರಿಗ
ನಿಲಸೂನು || ಶ್ರೀಮನೋಹರನಿಂನಮೂರ್ತಿರವಿಮೂಡೆ| ಸುತ್ರಾಮಸುತ
ನಾಶ್ಯಾಬ್ಜಮುಪ್ರಕಾಶಿತಮಹುದೆ| ಭೂಮಿಯೊಳ್ಪೇಳೆನೆಮುರಾರಿಪಕ್ಷೀಂ
ದ್ರನಿಂದಿಳಿದನಾರಣದೆಡೆಯೊಳು ||೪೮|| ಲಲಿತರತ್ನಪ್ರದೀಪಂಗಳಿಂಬಳಸಿ
ರ್ದ | ಲಲನೆಯರಭೂಷಣದಕಾಂತಿಯಿಂಕರ್ಪುರದ | ಮಲಯಜದತೈ
ಲದಸೊಡರ್ಗಳಿಂನಡುವಿರುಳ್ಪಗಲಂತೆಕಾಣಿಸುತಿರೆ || ಕಲಿಭೀಮದೇವಕಿ
ಯಶೋದೆಪೃಥೆಯುರ್ವರಸಿ | ನೆಲಕಿಳಿದುಪಾರ್ಥನಶರೀರಮಂ ಕಂಡಾ
ಗ | ಜಲಜಾಂಬಕಂಮರುಗುತಾವನಿಂದಾದುದ್ಯೈತಂದೆಮೃತಿನಿನಗೆಂದನು||
ಬಂದೆನೇಳ್ಪೈಪಾರ್ಥಕೃಷ್ಣನಾಂಕುಂತಿಗಭಿ | ವಂದಿಸ್ಯೈಮಾತೆಯಲ್ಲವನಿನಗೆ
ನೀನಳಿಯ | ನೆಂದುಪರಸುವರಲ್ಯೈದೇವಕಿಯಶೋದೆಯಭ್ರಾವಿಸೆಯದೇಕಿ
ವರನು || ಎಂದಿನಂತಗ್ರಜನನೀಕ್ಷಿಸ್ಯೈಭೀಮನಂ | ತಂದೆಹೇಳಿಂತುಮಾತಾ
ಡದಿರ್ದಪರೆನೀ | ಮುಂದೆನೃಪಯಜ್ಞಮಂನಡೆಸುವವರಾರೆನುತಕಳವಳಿ
ಸಿಹರಿನುಡಿದನು ||೫೦|| ಮರುಗಿದಂಪ್ರ್ಯದುನಂಗಸುರಾರಿಮಾನವರ|ತೆರ

ದಿಂದದೇವಕಿ ಯಶೋದೆಯುರ್ವರೆಸಿವೈ । ಮರೆದಳಾಕುಂತಿನಿಜತನಯನಿರ
ವಂಕಂಡುಶೋಕದಿಂದಾಕ್ಷಣದೊಳು ॥ ಕರೆದವಶ್ರುಗಳಾವೃಕೋದರನ
ಕಂಗಳೊಳ್ । ಉತ್ತರುಗಿತವನೊಡಲೊಳ್ಸಹೋದರನಮರಣದೊಳ್ । ಪೊ
ರಗಿನಿರ್ದಪನಿತ್ತನೆಂದುಮನದೊಳ್ಮರುಗಿಕಲಿಭೀಮನಿಂತೆಂದನು ॥೫೨॥
ದೇವರವಿಗಂಧಕಾರನುಮಾರ್ಗಮರ್ಜುನಂ । ಜೀವಿಸದೆಮಾಣ್ಡಪನೆಮರು
ಗಲೇಕೀಕ್ಷಿಸುಕೃ । ಪಾವಲೋಕನದಿಂದಕರ್ಣಜಂಬಿದ್ದಿಹಂನೋಡೀಗಪಾ
ರ್ಥನೊಡನೆ । ಭಾವಿಸಲಸುದೆ ಶಿಳ್ತಿಂಮತುರಗನುಂಕಟ್ಟಕೊಂ । ಡೀವೀರ
ರೀರ್ವರಂಕೆಡಹಿದಪರಾಕ್ರಮಿಯು । ದಾವನೋಕಾಣ್ಬೆನ್ನಸಲೆಬರಲಿಕದನ
ಕೆಂದನಿಲಜಂಗರ್ಜಿಸಿದನು ॥೫೩॥ ಈಪರಿಯೊಳನಿಲಜಂಕೃಷ್ಣನೊಳ್ಮಾ
ತಾಡು । ವಾಪಥದೊಳನಿರುದ್ಧಸಾತ್ಯಕಿಪ್ರದ್ಯುಮ್ನ । ರಾಪುರದಮಧ್ಯ
ದೊಳುಲೂಪಿಯುನಿವಾಸದೊಳ್ಹೊತರಿಸಿಕೊಂಡುಕೂಡೆ ॥ ಶಾಪಹತನಾಗಿ
ಫಲ್ಗುಣನಿರ್ದರಣಕೆಬಂ । ದೀಪಂಕಜಾಕ್ಷಮಾರುತಿಗಳಂಕಂಡುಬಳಿ । ಕಾ
ಪಾರ್ಥನಂದನಂಗೆಚ್ಚರಿಸಿಕಾಣಿಸಿದರಚ್ಯುತವೃಕೋದರರನು ॥೫೪॥ ಜನ
ಪಕೇಳ್ಫಲುಗುಣನಕೃತ್ಯಮಂಬಭ್ರುವಾ । ಹನನವೃತ್ತಾಂತಮಂಪವನಜ
ಮುರಾರಿಗಳ । ಗನಿರುದ್ಧಸಾತ್ಯಕಿಪ್ರದ್ಯುಮ್ನರರುಪಿಬಳಿಕಾತನಂಕಾಣಿ
ಸಲ್ಕೆ ॥ ಅನುಜಂಗೆಮುನಿದವಂಪಗೆಯಾಗದಿರ್ದಪನೆ । ಜನಕನಂಕೊಂದ
ವಂಪಾಪಿಯುಲ್ಲವೆತಂನ । ನನುವರಿಸದಪ್ಪಳಿಸುಗದೆಯೊಳೆಂದೆರಗಿದಂಪಾ
ರ್ಥಭೀಮನಪದದೊಳು ॥೫೫॥ ಶಿಷ್ಟರಕ್ಷೆಗೆಕರ್ತೃನೈಷ್ಣವದ್ರೋಹಿಗ
ಳ್ಗೆಕ್ಷಮಂನೀನದರಿನರ್ಜುನಂಭಾಗವತ । ಪಕ್ಷಕಗೆಸರಂತನಗೆಪಿತನಾತ
ನಂಕೊಂದಕಥದಿಂದಕೊಲೆಗೆ ॥ ದಕ್ಷನಾಂವಿಚಾರಿದೊಡೆರಾಹುವಿನಕಂಠ
ಮಂ । ತತ್ಕ್ಷಣದೊಳರಿದಂತೆಕತ್ತರಿಸುಚಕ್ರದಿಂ । ಪಕ್ಷಿವಾಹನತಂನಕೊ
ರಳನೆಂದಾಪಾರ್ಥಿಕೆಡೆನಚ್ಯುತನಡಿಯೊಳು ॥೫೬॥ ಇಂತಾಗಲನಿಲಸುತ
ಕೃಷ್ಣರಮನಂಮರುಗು । ವಂತಳಲ್ದೊಡನೆದೇವಕಿಯುಂಯಶೋದೆಯುಂ ।
ಕುಂತಿಯುಂಕಂಡುಕಡುಶೋಕದಿಂದವರವರಚರಣಂಗಳೊಳ್ಪೊರಳ್ದು ॥
ಎಂತು ಈದಕೈಯ್ಯನಂಕೊಂದೆನಾಂನಿಮಗೆಮೊ । ವ್ಕ್ರಂತಂನನೇಕೆಪರಸು
ವಿರಕಟಪಾರ್ಥನೀ । ಮಂತಿನಿಯರಿರ್ದಪರುಲೂಪಿಚಿತ್ರಾಂಗದೆಯರಿವರ
ನೀಕ್ಷಿಪುದೆಂದನು ॥೫೭॥ ಅನಿತರೊಳುಲೂಪಿಚಿತ್ರಾಂಗದೆಯರರ್ಜುನನ ।
ಜನನಿಯಂಕೃಷ್ಣಮಾತೆಯರಂನಿರೀಕ್ಷಿಸಿನ । ರನಪೆಂಡಿರಾವೆಂದುಪೇಳ್ದವ
ರಚರಣಂಗಳೊಳ್ಪೊರಳ್ದಳಿಕೊಡೆ ॥ ವನಜಾಂಬಕಿಯರೊರಲೆಬಳಿಕ
ನಿಬರೆಲ್ಲರುಂ । ಘನಶೋಕದಿಂದಸಾಹಾರನಂಗಯ್ಯೆನಿಜ । ತನುಜನಂಗದ

ಮೇಲೆಬಿದ್ದು ದುಃಖಿತೆಯಾಗಿಕುಂತಿಹರಿಗಿಂತೆಂದಳು ॥೫೮॥ ಕಂಡೆಲೈಕೃ
ಷ್ಣ ಫಲುಗುಣನಿರವನಿನ್ನು ಭೂ। ಮಂಡಲದೊಳಿನಸುತರಿರ್ದಪರೆನೀನಾ
ರ।ಖಂಡಿಯಂಪೊಡೆದಪೈತ್ರೈಲೋಕ್ಯವೀರನೆಂದೆನಿಸಿಕೊಂಬುವರದಾರು॥
ಖಂಡಪರಶುವಿನುತ್ತಮಾಂಗವುಂಪೊಯ್ದು ಕೋ। ದಂಡಮಂಪಿಡಿವರಾರನು
ಜಾಗ್ರಜರನಡುವೆ । ಚಂಡತೇಜದೊಳೆಸೆವರುಂಟೆಧರ್ಮಜನಾರನಪ್ಪವಂ
ಪೇಳೆಂದಳು ॥೫೯॥ ಈತನಂತಿರಲಿತ್ತ ನೋಡೆಲೆಮುಕುಂದವೃಷ। ಕೇತು
ಮಡಿದಿರ್ದಪಂಸ್ಮರಿಸುವೆನೆಂತಿವನ । ತಾತನಂಕಂಡುಹಿಗ್ಗುವನಾರುಮರಿ
ಯದಂತಾತ್ಮಜಸ್ನೇಹದಿಂದ॥ಆತನಂಕೊಂದನೀಪಾರ್ಥನಂದಾನೋರ್ವ ।
ನೀತರಳನೇಳ್ಗೆಯಿಂಮರೆದಿರ್ದನಿನ್ನೆಗಂ। ಬೀತುದೆನಗಿಂದುಸಂತತಿಕರ್ಣಜ
ನೊಳೆಂದಳಲ್ದಳಾಕುಂತಿಮರುಗಿ ॥೬೦॥ ಆಸಮಯಕೈತಂದುಕಂಡನಹಿಪ
ತಿಪೀತ। ವಾಸನಂಪೊಡಮಟ್ಟುನಡಿದಾವರಗೆನುಡಿದ । ನೀಸಕಲಲೋಕಮಂ
ಪೊರೆವನಿನಗೀನರನಜೀವಮಂಪಡೆವುದರಿದೆ ॥ ಜೀಸರೇತಕೆದೇವಧರ್ಮಜ
ನಕುಲಮುದ್ದು । ದೋಸರಿಸದುದ್ಧರಿಸುನಿಂನಡಿಂಗರಿಗಿರ್ಗೆ । ಲೇಸಲ್ಲದಘ
ಶೋಕಭಯತಾಪದುಃಖಂಗಳಿರ್ದಪವೆಪೇಳೆಂದನು ॥೬೧॥ ತಾತನಸುವಂ
ಪಡೆಯಲೀಬಭ್ರುವಾಹನಂ। ಪಾತಾಳಕೈದಿಜೀವದರತ್ನಮಂಬೇಡಿ। ಘಾತಿಸಿ
ದನಹಿಗಳಂತಾನದಂಪರಿಹರಿಸಿನಿನ್ನನೀಕ್ಷಿಸುವನೆಂದು ॥ ಭೂತಳಕೆಬಂ
ದೆನಿದೆಮಣಿತನ್ನಕೈಯೊಳೀ।ಶ್ವೇತವಾಹನನತಲೆಯಂತರಿಸುಜಗದೊಳ ।
ಜ್ಞಾತಮಾವುದುನಿನಗೆಸರ್ವಗತನಪ್ಪನೀನೆಂದುಫಣಿಪತಿನುಡಿದನು ॥೬೨॥
ಶೇಷನಿಂತೆಂದೊಡಾಲಿಸಿಕೃಷ್ಣನಬಲೆಯರ । ಘೋಷಮಂನಿಲಿಸಿನೀವೆಲ್ಲ
ರುಂಕೇಳ್ವುದೀ ।ಭಾಷೆಯಂಬ್ರಹ್ಮಚರ್ಯದೊಳಿಂದ್ರಿಯಂಗಳಂತಾನಿನ್ನೆಗಂ
ಧರೆಯೊಳು॥ಪೋಷಿಸಿದೆನಾದೊಡೀಪುಣ್ಯದಿಂಕುಂಡಲವಿ । ಭೂಷಿತದಪಾ
ರ್ಥನಶಿರಂಬರಲಿಕದ್ದೊಯ್ದು । ದೋಷಿಗಳ್ತನ್ನಾಜ್ಞೆಯಿಂದಹತವಾಗಲರಿ
ದಿಹುದುಸಾರಿದೆನೆಂದನು ॥೬೩॥ ಜನಪಕೇಳಾಶ್ಚರ್ಯಮಂಬಳಿಕಕೃಷ್ಣನಿಂ।
ತೆನೆದುಸ್ಸ್ವಭಾವದುರ್ಬುದ್ಧಿಗಳನರಿದುಪಾ । ರ್ಥನತಲೆಯನಾಕ್ಷಣಕೆತಂ
ದುದುಸುದರ್ಶನಂಮಣಿಪುರದರಣಭೂಮಿಗೆ ॥ ಜನನ್ಯೃದೆಕೊಂಡಾಡಿ
ತುರಗಪತಿಹರುಷದಿಂ । ವಿನುತಸಂಜೀವಕದಮಣಿಯನಿತ್ತಂಮುಕುಂ ।ದ
ನಕೈಯೊಳಾಗಹರಿನೋಡಿದಂಕೃಪೆಯಿಂದಕರ್ಣಸುತಫಲ್ಗುಣರನು॥೬೪॥
ತದನಂತರದೊಳಂಬುರುಹಲೋಚನನಂತಾನೆ । ಮೊದಲಿನಜಸುತನತನು
ತಲೆಗಳಂಕೂಡಿಜೀ । ವದಮಣಿಯನೆದೆಯಮೇಲಿರಿಸಿಬಳಿಕರ್ಜುನನಕಾ
ಯಕೆಶಿರವನೊಂದಿಸಿ ॥ ಹೃದಯದೆಡೆಗಾದಿವ್ಯರತ್ನಮಂಸಂಗಡಿಸಿ । ಬದು

ಕಲಿವರೇಶನಾಜ್ಞೆಯೊಳೆಂದುಪರಸಿಕರು । ಇದೊಳವರನೀಕ್ಷಿಸಿದೊಡಭವ
ಪ್ರಸಾದದಿಂಜೀವಿಸಿದರಾಕ್ಷಣದೊಳು ||೬೫|| ಲೀಲೆಯೊಳಜಾಂಡಕೋಟಿ
ಗಳಳಿವುವಾದಪುವು । ಪಾಲಿಸಿದೊಡಿರ್ದಪುವುಗಡಪರಮಪುರುಷನಕೃ ।
ಪಾಲೋಕನದೊಳೇಳ್ವದರಿದೆಮಡಿದರ್ಜುನಾದಿಗಳೆಂದುದರೆಪೊಗಳಲು ||
ಆಲಿಗಳೆರಳ್ದವಸುಪಸುಸಿತೊಡಲೊಳೆಸದು । ದಾಲಲಿತಮುಖಕಾಂತಿಪ್ರೊ
ಗರೇರಿತವಯುವಂ । ಮೇಲೆಮೈಮುರಿದರೊಯ್ಯನೆಪಾರ್ಥಕರ್ಣಸುತರ
ಸುರಾರಿಯುಂಜಪಿಸುತ ||೬೬|| ಇಡಿದಕತ್ತಲೆಯಂತಗುಳ್ತವಾರಿಜದಂತೆ ।
ಬಿಡದೆಮುಸುಕಿದಮೇಘಪುಂಕಳದರವಿಯಂತೆ । ತುಡುಕಿರ್ದರಾಹುತೊಲ
ಗಿದಚಂದ್ರನಂತೆಕರ್ನಜಪಾರ್ಥರಾಸ್ಯಂಗಳು || ಕಡುಚೆಲ್ವ ಕಾಂತಿಕಲೆ
ಗಳನಾಂತವಾಗಪಾ । ಲ್ಗಡಲೊಡೆಯನಂಮುಂದೆಕಂಡುಪದಕಮಲದೋ
ಳ್ಪೊಡಮಡಲವರ್ಗಳಂತೆಗೆದಪ್ಪಿಚುಂಬಿಸುತಮೈದಡವಿದಂಕೃಪೆಯೊಳು
ದುಂಧುಭಿಗಳಭ್ರದೋಳ್ಮೊಳಗಿದುವುಸೂಸಿದುವು । ಮಂದಾರದರಳುಹರಿ
ನರಕರ್ಣಜರಮೇಲೆ । ಬಂದಪ್ಪಿದಂಬಳಿಕವರ್ಗಳಂಭೀಮನಾಲಿಂಗಿಸಿದ
ಳಾಗಕುಂತಿ || ವಂದಿಸಲ್ಪರಸಿದರ್ದೇವಕಿಯಶೋದೆಯು । ರ್ಮುಂದಿರ್ದಶೇ
ಷನಂಕಾಣಿಸಲ್ಪೊಡಮಟ್ಟ । ರಂದವರ್ಮುದದಿಂದಹರಿಪಾಂಚಜನ್ಯಮಂ
ಪಿಡಿದನುರುಘೋಷಮಾಗೆ ||೬೮|| ಪದುಳಿಸಿದರನಿರುದ್ಧಸಾತ್ಯಕಿಪ್ರದ್ಯು
ಮ್ನ । ಗದಸಾಂಬಕೃತವರ್ಮಶಠನಿಶಠಪ್ರಮುಖರಾ । ಯದುವೀರರನುಸಾ
ಲ್ವಯೌವನಾಶ್ವಸಿತಧ್ವಜಹಂಸಕೇತುಗಳ್ಗೆ ||ಮುದವೇರಿತಸುರಾರಿಯುಂ
ಕಂಡುತಮತಮಗೆ । ಪದಕೆರಗಿಬಿನ್ನೈಸಿದರ್ಬಭ್ರುವಾಹನನ । ಕದನದಾ
ಯಾಸಮಂನಗರದೊಳುಲೂಪಿಚಿತ್ರಾಂಗದೆಯುರೆಸಗಿದುದನು ||೬೯|| ಹರಿ
ಬಳಿಕಜಾಹ್ನವಿಯುಶಾಪದಿಂದಾದುದೀ । ಪರಿಭವಂನಿನಗೆಂದುಪಾರ್ಥನಂ
ತಿಳುಪಿದಂ । ತರಿಸಿಕಾಣಿಕೆಗೊಟ್ಟುಲೂಪಿಚಿತ್ರಾಂಗದೆಯುರಸುರಾರಿಯುಂ
ಕಂಡರು || ನೆರೆದುದುಭಯರಸೇನೆಬಳಿಕಪರಿತೋಷದಿಂ । ಮೊರೆದುದು
ತ್ಸವದಿಂದನಿಖಿಳವಾದ್ಯಸ್ರತತಿ । ಪರೆದುದುಸಮಸ್ತಸಂತಾಪಂಗಳೆಲ್ಲರ್ಗೆಕೃ
ಷ್ಣಸಂದರ್ಶನದೊಳು ||೭೦|| ಪಾರ್ಥಜಂಬಳಿಕನಿಬರೆಲ್ಲರುಂವಿನಯದಿಂ
ಪ್ರಾರ್ತ್ಥಿಸಿದೊಡಲ್ಲಿಂದಮಣಿಪುರಕೆಬರಲಾಗಿ । ತೀರ್ಥಸ್ವರೂಪನಸಹಕೃಷ್ಣ
ನಂಶೇಷನಂಮಂಡಲಾಧೀಶರೆನಿಪ || ಪಾರ್ಥಿವರನಳಿದೆದ್ದವಿಜಯನಂಕಂಡ
ತಿಕೃ । ತಾರ್ಥರಾದಪೆವೆಂಬಹರುಷದಿಂತಮತಮಗೆ । ಸಾರ್ಥವೈಭವದಿಂದ
ಲಂಕರಿಸಿನಗರಮಂನಿಖಿಳಜನಮಿದಿರ್ಗೊಂಡುದು ||೭೧|| ತಳಿತಗುಡಿಗಳ
ಚೆಲ್ವಿನೋರಣದತೋರಣದ । ಕಳಶಕನ್ನಡಿವಿಡಿದಕನ್ನೆಯರಮಂನೆಪುರ ।

ದಳದಪದಪಿನ ತೊರೆವಭೇರಿಗಳಭೂರಿಗಳವ್ಮೃದುಮದಂಗಧ್ವನಿಗಳ॥ತೊ
ಳಗಿಬೆಳಗುವಲೋಚನಾಂತೆಯರ। ಕಾಂತೆಯರಲಳಿಲುಳಿಯನರ್ತನದಕೋ
ಪುಗಳರೂಪುಗಳ ।ತಳಿವಸೇನೆಯಪೂಗಳೊತ್ತುಗಳಮುತ್ತುಗಳವಿಭವದಿಂ
ಪೊಳಲೆಸೆದುದು॥೨೦॥ ಈಸಂಭ್ರಮದೊಳಿನೆವನಗರದೊಳ್ನಡೆತಂದು। ವಾ
ಸುದೇವಾದಿಗಳ್ಬಭ್ರುವಾಹನಸದನ । ದಾಸಭೆಗೆವಿವಿಧೋಪಚಾರವಿಭವಂ
ಗಳಂಕೈಕೊಳುತಬಂದುಪೊಗಲು ॥ ಆಸವ್ಯಸಾಚಿಗೆನಿಜಾತ್ಮತನ್ನೆಸಿಂ।
ಹಾಸನವನಿತ್ತಖಿಳರಾಜ್ಯಮಂಕೊಟ್ಟುಲ । ಜ್ಜಾಸಮನ್ವಿತನಾಗಿಸುಮ್ಮ
ನಿರಲರ್ಜುನಂವಾತಾಡದಿರುತಿರ್ದನು ॥೨೩॥ ರಾಯಕೇಳರ್ಜುನಂಬಿನ್ನ
ನಾಗಿರೆಕಂಡು । ವಾಯುಸುತಶೇಷಾದಿಗಳ್ನುಡಿದರೆಲ್ಲಿಯುಮ । ಜೀಯನ
ಹೆಥರೆಯೊಳಿಂದಾತ್ಮಜನದೆಸೆಯಿಂದನಿಸಗಪಜಯಂಬಂದುದು ॥ ನೋ
ಯಲೇತಕೆಬರಿದೆಮಂನಿಸುಕುಮಾರನಂ । ಪ್ರೀಯಮಾಗದೆಮಗನವ್ಮೇಲಿಂ
ನುಮಕಟಕಟ । ಪಾಯುಮಿದುಸುರನದಿಯಶಾಪದಿಂದಾಯ್ತುಳಿದೆಕೃಷ್ಣ
ಪ್ರಸಾದದಿಂದ ॥೨೪॥ ಅರಸಿಯರುಲೂಪಿಚಿತ್ರಾಂಗದೆಯರಿವರಸಾ । ದರಿ
ಸದೆನಿಜಾತ್ಮಜಂಬಭ್ರುವಾಹನನಿವನ ।ಸಿರಿಯನಂಗೀಕರಿಸದೀತನಂಮನ್ನಿ
ಸದೆಫಲುಗುಣನಿದೇಕೆಬರಿದೆ ॥ ಮರುಳಾದನಕಟನೀಂಪೇಳಲಿಲ್ಲವೆಚಕ್ರ।
ಧರನಿಂನಪ್ಪೈದುನಂಗೆಂದುಪವನಜಫಣೀ । ಶ್ವರಹಂಸಕೇತುದೇವಕಿಕುಂ
ತಿವರಯಶೋದಾದಿಗಳ್ಪೇಳ್ದರಂದು ॥೨೫॥ ಲಜ್ಜಿಸಿದಸಾಬಭ್ರುವಾಹನಂ
ಬಳಿಕತಂ । ನುಜ್ಜುಗವನೆಲ್ಲರುಂಕೇಳ್ವುದೀರಾಜ್ಯಮಂ।ಮಜ್ಜನಕನಂಘ್ರಿ
ಗೊಪ್ಪಿಸಿನಿಜಶರೀರಮಂಕೆಡಹಿತುಹಿನಾಚಲದೊಳು ॥ ಸಜ್ಜನರಗತಿವಡೆವೆ
ನಲ್ಲದೊಡೆಗುರುಧರ್ಮ । ಕೃಜ್ಞನಾರ್ದನಭಕ್ತನೀತನಂಘಾತಿಸಿದ।ಕಜ್ಜದಿಂ
ದೊದವಿದಮಹಾಪಾತಕಂಪೋಗದೆನೆಭೀಮನಿಂತೆಂದನು ॥೨೬॥ ತಪ್ಪನಾ
ಡಿದೆಮಗನೆಕೃಷ್ಣನಿರುತಿರೆಮುಂದೆ । ಬಪ್ಪದೇಪಾತಕಂಗುರುಪಿತಾಮಹ
ಮುಖ್ಯ । ರಪ್ಪವರನೆಲ್ಲರಂಕೊಂದೆಮಗೆನಿಂದುದೇದೋಷಲೇಶಂಗಳೀಗ ॥
ಒಪ್ಪುವಾದಿತ್ಯನಂಕಂಡಬಳಿಕಿರ್ದಪುದೆ । ಕಪ್ಪಿನತಮಂಮುರುಳಿಹರಿಯ
ನಾಶ್ರೈಸಿದರ । ನಪ್ಪುವುದೆಕಲಿತಾಪದುಃಖಭಯಶೋಕನರಕಾದಿಪೀಡೆಗ
ಳೆಂದನು ॥೨೭॥ ಸಲೆನಿಷ್ಕೃತಿಗಳಿಲ್ಲದೈದುಪಾಪಂಗಳಂ । ಕಲಿಯುಗದ
ಮಾನವರಬಹಳದುರಿತಂಗಳಂ । ತೊಲಗಿಸಿಭವಾಂಬುಧಿಯನುತ್ತರಿಪಹ
ರಿಯನಾಮಂಗಳಾವನಜಿಂಹ್ವೆಗೆ ॥ ನೆಲೆಗೊಂಬುದಾತನಂಕಂಡವಂಶುಚಿ
ನಿನಗೆ। ಜಲರುಹಾಕ್ಷಂಕಣ್ಣಮುಂದಿರಲ್ಪಾತಕವೆ । ಪಲವಣಿಕೆಬೇಡಪಾ
ಲಿಸುನೃಪನತುರಗಮಂಮಗನೆಸುಖಿಯಾಗೆಂದನು ॥೨೮॥ಇಂತೆಂದುಭೀಮ

ನಾಡಿದೊಡನಿಬರೆಲ್ಲರುಂ । ಸಂತೋಷಮುಂತಾಳ್ದ ರರ್ಜುನಂತನೆಯನಂ । ಸಂತೈಸಿಕುಳ್ಳಿರ್ದನಸುರಾರಿಪವನಜರ್ವೆರಸಿಸಿಂಹಾಸನದೊಳು ॥ ಕುಂತಿ ನಿಜಪುತ್ರಪೌತ್ರರವಿಭವಕುಬ್ಬಿದಳ ।ನಂತರದೊಳಾದುಪಾಮಣಿಪುರದೊಳು ತನ್ನವನು । ನಂತನಂಸತ್ಕರಿಸಿಕಳುಹಿದರ್ಪ್ರಾತಾಳಕಖಿಳಸರ್ಪಾಳಿಸಹಿತ ।೨೯॥ ಸತ್ಯಭಾಮಾಕಾಂತಭೀಮನೆರಮನ್ಮಥಾ । ದಿತ್ಯಭವಸುತಕುಂತಿದೇವಕಿಯಶೋದೆಯರ । ನತ್ಯಂತಹರುಷದೊಳುಲೂಪಿಚಿತ್ರಾಂಗದೆಯರಾದರಿಸಿನೃಪಗೃಹದೊಳು ॥ ನಿತ್ಯಕೃತ್ಯದವಿವಿಧಭೋಗವಿಭವಂಗಳಿಂ । ನೃತ್ಯಗೀತಂಗಳವಿಲಾಸಗೋಷ್ಠಿಗಳಿಂದ । ಪ್ರತ್ಯೇಕಮೆಲ್ಲರುಂಸಂತುಷ್ಟರಾಗಿರ್ದರೈದುದಿನಮಾಪುರದೊಳು ॥೩೦॥ ದಿವಸಮೈದರಮೇಲೆಚಂತಿಭಂಗಜಪುರದೊ । ಳವನೀಶನೆಂದಲ್ಲಿಕೂಡಿದಸುವಸ್ತುಗಳ ।ನಿವಹಮಂ ಕುಂತಿಚಿತ್ರಾಂಗದೆರ್ಫಣೀಂದ್ರಸುತೆದೇವಕಿಯಶೋದೆಯರನು॥ಪವನಜನೊಡನೆಹಸ್ತಿನಾವತಿಗೆಕಳುಹಿಪಾ। ರ್ಥಿವಪಾರ್ಥಿಪಾರ್ತರಂಸಲೆಕೂಡಿಕೊಂಡುದಾ । ನವಮರ್ದನಂತಾನೆಕುದುರೆಯಂಬಿಡಿಸಿರಕ್ಷೆಗೆನಡೆದನದರಪಿಂತೆ ॥ ಸಂಜೀವಕದಮಣಿಯಫಣಿಪತಿಯುಕೃಷ್ಣನಥ । ನಂಜಯನಪ್ರಣ್ಯಪ್ರಸಂಗದಿಂದಪಮೃತ್ಯು। ನಂಜುದುಷ್ಕೃತಿಶತ್ರುಪೀಡೆಗಳ್ಪೊದ್ದವೆಂಬೀಪ್ರಮಹಾಮಹಿಮೆಯಿಂದ ॥ ರಂಜಿಪೇಕಥೆಕೇಳ್ದೊಡಾಯುರಾರೋಗ್ಯಮತಿ । ಮಂಜುಳಸುಕೀರ್ತಿಸುಖಸಂಪತ್ಕಳತ್ರಸುತ । ಸಂಜಾತಹರಿಭಕ್ತಿಸಮನಿಪುದುದೇವಪುರಲಕ್ಷ್ಮೀಶನಾಜ್ಞೆಯಿಂದ ॥

ಸಂಧಿ ೨೪ಕ್ಕೆ ಪದ್ಯಗಳು ೧೩೧೦ಕ್ಕೆ ಮಂಗಳಮಸ್ತು.

---

## ಇಪ್ಪತ್ತೈದನೆಯ ಸಂಧಿ.

ಸೂ. ಊರ್ಜಿತಪ್ರಬಲರಿಪುವೀರರಂಗೆಲ್ದುಕೃ । ಷ್ಣಾರ್ಜುನರ
ನಾಹವದೊಳೊಟ್ಟೈಸಿಭುಜವಿಕ್ರ । ಮಾರ್ಜಿತವಿಜಯದೊ
ಡನೆತಾಮಶ್ವಮಂತುರಗಮಂತಂದೆಗೊಪ್ಪಿಸಿದನು

ಎಳೆಮುನಿಪಸದಮಲಂಮೊದಲೆಪಾಲ್ಗಡಲದಕೆ । ಮಲಯಾನಿಲಂತೀಡೆಬೆಳ್ದಿಂಗಳಂಪೂಡೆ ।ಲಲಿತಸುಮನೋವಾಸಿತಂಕೂಡೆಮೇಲೆಮೇಲಿನಿದಾಗಿತೋರುವಂತೆ ॥ ಸಲೆಸೊಗಸುನಿಂನನುಡಿಸರಸವಾಚಿರಿಪುಣ್ಯಾ । ನಿಲಯಮೆಲೆಕೃಷ್ಣಚರಿತಾಮೃತವನೀಕಿವಿಗ । ಳೊಲಿದೀಂಟದಣಿದಪವೆಮುಂಗಥೆಯನುಸುರೆಂದುಬೆಸಗೊಂಡನವನೀಶನು ॥೧॥ ಕೈಮುಗಿವುತಾದರದೊಳವನಿಪಂಬೆಸಗೊಳೆ । ಜೈಮಿನಿಮುನೀಶ್ವರಂಪೇಳ್ದನೆಲೆನೃಪತಿಕೇ । ಳೈ

ಮುಂದಣಾಶ್ಚರ್ಯಮಂಭೀಮಸೇನನಂಗಜಪುರಕೆಕಳುಹಿಬಳಿಕ ॥ ಹೈ
ಮಾಂಬರಂಸಕಲದಳಸಹಿತವೈದುನನ । ವೈಮಟ್ಟಿಕೆಗೆಮುಂತುರಂಗ
ದೊಡನೈದಿದಂ । ವೈಮಾನಿಕಪ್ರತತಿಚರಗಾಗೆಕಲಿಬಭ್ರುವಾಹನಂಕೂಡೆ
ಬರಲು ॥೧॥ ತುರಗಂನಡೆದುದುಮಣಿಪುರದಿಂಶರದ್ದಿನದೊ । ಳರಸಂಚೆ
ಸಂಚರಿಸತೊಡಗಿದುವುನದಿಗಳು । ಬ್ಬರವಡಗಿತಿಳಿದುಪರಿದುವುಬೆಳತು
ದಾಗಸಂಮೆರೆದುವುಡುರಾಜಕೂಡೆ ॥ ತರಣಿಶಶಿಗಳಕಿರಣವೈದನಿರ್ಮಲ
ವಾದು । ಪೆರವಿಂದಲರನರಸಿದುವಳಿಗಳೇಣ್ದೆಸೆಯ । ತರುಣಿಯರಗುರುಕು
ಚದವೋಲುದಂಸೆಳೆದಂತೆಗಿರಿನಿಕರವೆಸೆದಿರ್ದುದು ॥೨॥ ಪುಳಿನಜಘನಂಮ
ತ್ಸ್ಯಲೋಚನಂಹಂಸಗತಿ । ಸುಳಿನಾಭಿಕೋಕಸ್ತನಂಪಂಕಜಾನನಂ ।
ಸೆಳೆನಡುಸುಕಂಬುಕಂಠಂತರಂಗತ್ರಿವಳಿಶೈವಾಲರೋಮಾವಳಿ ॥ ಲಲಿತ
ಪ್ರವಾಹಲಾವಣ್ಯಲಹರಿಗಳೆಸೆಯೆ । ತೊಳತೊಳಗಿಬೆಳಗುವನದೀವಧುಗ
ಳೊಳ್ಳಿತಂ । ತಿಳಿದುನಿಜಕಾಂತನಾಗಿಹಸಿಂಧುರಾಜನಂನೆರೆಯದಿರರೆಂಬಬೊ
ಲಾಯ್ತು ॥೩॥ ಕರೆಕರೆದತಂಮಮಳೆವನಿಗಳಿಂಶಶಿಕಾಂತ । ದೊರತೆವೊ
ನಲುರೆವೆಗ್ಗಳಿಸೆನಾಟಿಬೆಳ್ಪದ । ತೆರದಿಂಮುಗಿಲ್ಗಳಿರೆಬೆಳ್ದಿಂಗಳೊಪ್ಪಿದು
ದುಬೆಳಸುಗಳಪಣ್ದೆನೆಗಳ ॥ ಮಿರುಪಹೊಂಬಣ್ಣದಹರಿದ್ರಲೇಪನದಿಂದ ।
ಮೆರೆವೆವೈಸಿರಿಯುಮಾಂಗಲ್ಯದಿಂಭೂದೇವಿ । ನೆರೆಶೋಭಿಸುವಶರತ್ಕಾಲ
ಳ್ತರುಗಿತಧ್ವರಹಯಂಧರೆಯಮೇಲೆ ॥೪॥ ವಿಟನಂತೆಕಾಂತಾರಸರಸದ್ವಿ
ಲಾಸಪರಿ । ಯುಟಣದಿಂದೊಪ್ಪಿದುದುಸುಕವೀಂದ್ರನಂತೆಸಂ । ಘಟಿತಚಾ
ತುರ್ಯಪದರಚನೆಯಿಂವಿವಿಧವಿಷಯಂಗಳೊಳ್ಕಾಣಿಸಿದುದು ॥ ಭಟನಂತೆ
ಸಮ್ಯಗ್ವಿರಾಜಿತದಭೂಮಿಭೃ । ತ್ಕಟಕಂಗಳಲ್ಲಿಸಂಚರಿಸಿದುದುಪಾಂಡ
ವನ । ಪಟುತರ ಮಹಾಧ್ವರತುರಂಗಮಂಬೆಂಬಿಡದೆಬಹನೃಪರಸೇನೆಸ
ಹಿತ ॥೫॥ ಪೋದುದಧ್ವರವಾಜಿರತ್ನಪುರವೆಂಬಪುಟ । ಭೇದನದಪತಿಮ
ಯೂರಧ್ವಜನರಾಷ್ಟ್ರಕವ । ನಾದಿಯೊಳುತ್ತರಗಮೇಘಂಗಳೇಳಂಮಾಡಿ
ನರ್ಮದಾತಟಕೆಬಂದು ॥ ಸಾದರದೊಳೆಂಟನೆಯಮುಖಕೆದೀಕ್ಷಿತನಾಗಿ । ಮೇ
ದಿನಿಯಮೇಲೆಹಯಮಂಬಿಡಲ್ಕಿದಿರಾಗಿ । ಬೀದಿಯೊಳ್ಬರುತಿರ್ದುದಾನೃಪ
ನಸೂನುತಾಮ್ರಧ್ವಜನಕಾಪಿನಿಂದ ॥ ಕ್ಷೋಣೀಂದ್ರಕೇಳೀತುರಂಗಮಾಕ
ದುರೆಯಂ । ಕಾಣುತ್ತಧ್ವನಿಗೈದುಪರಿತಂದುಮೊಗವಸಾ । ಘ್ರಾಣಿಸಿಮಿ
ಳಿರ್ಚಿಕಿವಿಗಳನೊಡನೆಪರೆತೆಗೆದುಮುಂಗಾಲ್ಗಳಿಂದಡರ್ದು ॥ ಮೇಣೊಂದ
ನೊಂದೊದೆದುಹಿಂದಣಾಖುರಂಗಳಿಂ । ಮಾಣದಡಿಗೆಗಂಧದತೀಟೆಗಳತೀಡಿ
ಮಾಣಿಕ್ಯಮುಕ್ತಾಳಿಗಳಭೂಷಣಂಗಳಂಪರಿದಿಕ್ಕಿಬಿಡುಗೊಂಡುವು ॥೬॥

ಭಾರಣೆಯುಬಲದೊಡನೆಕರೆಗಾರದಲೊಳಿರ್ದ । ವೀರತಾಮ್ರಧ್ವಜನು
ಮಂತ್ರಿನಕುಲಧ್ವಜಂ । ದೂರದೊಳ್ಕಂಡನೀತೆರನಂವಿಚಾರಿಸಿದನೆತ್ತಣ
ತುರಂಗಮೆಂದು ॥ ಚಾರರಂಕಳುಹಿತರಿಸಿದನದರಮಸ್ತಕದೊ । ಳಾರಾ
ಜಿಸುವಕನಕಪಟ್ಟಲಿಖಿತವನೋದಿ । ಘೋರಮಣಧರ್ಮಜನಬಿರುದುಗಳವಿ
ಸ್ತರವನೊಡೆಯಂಗೆಕೇಳಿಸಿದನು ॥೯॥ ಕೇಳುತಕನಲ್ದುತಾಮ್ರಧ್ವಜಂಕ
ಟ್ಟಿದಂ । ತೋಳಬಲ್ಪಿಂದಪಾರ್ಥನತುರಗಮಂಬಳಿಕ । ಮೇಳೈಸಿನಿಲಿಸಿ
ದಂನಿಜಬಲದಪೌಜುಗಳನರ್ಧಚಂದ್ರಾಕೃತಿಯೊಳು ॥ ಏಳಧ್ವರಂಪಿಂತೆ
ಕೃಷ್ಣವರ್ಜಿತಮಾಯ್ತು । ಪೇಳಲೇನಿದುಕೃಷ್ಣಸಂಯುಕ್ತಮಾದಪುದು ।
ಕಾಳಗಂಕೃಷ್ಣನೋಳ್ದೊರಕೊಂಬುದೀಗಳೆಂದುಬ್ಬೇರಿದಂಮುದದೊಳು
ತಂದೆಯುಮಹಾಧ್ವರಕೆಕೃಷ್ಣನೊಡಗೂಡುವಂ । ಮುಂದೆಪಾಂಡವವೀರ
ರೋಳ್ತ್ತತನಗೆಕಾಳಗಂ । ಬಂದಪುದುಲೇಸಾದುದೆಂದುತಾಮ್ರಧ್ವಜಂನ
ಕುಲಧ್ವಜನೊಳಾಡಲು ॥ ಮಂದಪೌರುಷದಲ್ಪಭಾಗ್ಯಮತಿಕೃಶಮಾದ ।
ಮಂದಿಕುದುರೆಯುಮೇದಿನೀಶ್ವರರ್ಕಾಳಗಕೆ ।ನಿಂದಪರೆನಿಂನೊಳಿದುಪುಸಿ
ಯೆನುತಮತ್ತಮಂನಸುನಗೆಯೊಳಿಂತೆಂದನು ... ॥೧೧॥
ಛಪ್ಪಂನದೇಶದೊಳ್ನಿನಗೆಮಲತಿದಿರಾಗಿ। ಬಪ್ಪಭೂಮಿಪರಿಲ್ಲನಿಮ್ಮೈಯ
ನರಮನೆಯೊಳೊಪ್ಪಂಬಡೆದನರ್ತಕೀಜನದನಿತ್ಯಪುಷ್ಪಾಂಜಲಿಯಸಂಗ್ರ
ಹಕ್ಕೆ ॥ ತಪ್ಪದೆಂದುಂತೆರುವಕಟ್ಟಳೆಯಮುತ್ತುಗಳ । ಕಪ್ಪಮಂಕೊಂಡು
ಬಂದನೋಬಭ್ರುವಾಹನಂ । ಸಪ್ಪಳಿದುಪೊಸತೆತ್ತಣದುಸ್ಸೈನ್ಯಮೆನೆತಾ
ಮ್ರಕೇತುಮಗುಳಿಂತೆಂದನು ॥೧೨॥ ಧಾತ್ರಿಯೊಳ್ವೀರರಿಲ್ಲೆಂನದಿರ್ನಾರ್ಕರ
ದಂ।ರಾತ್ರಿಯೊಳ್ಬಂದೆಂಸೊಳಾಡಿದಂಧರೆಗತಿ। ಕ್ಷಾತ್ರಪೌರುಷದಿಂದವರಿ
ಪರ್ಬಭ್ರುವಾಹನನಕರ್ಣತನಯರಂದು ॥ ಗೋತ್ರಾರಿಪುತ್ರದಾನವಸೊ
ದನರ್ಜುನುಜ।ಪೌತ್ರರಲ್ಲಿವರುಸರಸಾರಾಯಣರ್ಕಮಲ। ನೇತ್ರಸಮರನಿ
ರುದ್ಧಸಾತ್ಯಕಿಪ್ರದ್ಯುಮ್ನಭೋಜಾದಿಯದುಗಳೆಂದು ॥೧೩॥ ಉದ್ಧತಪ
ರಾಕ್ರಮಿಗಳನಿಬರಿಂದಿವರೊಡನೆ । ಯುದ್ಧಮಾದಪುದೆಮಗೆನಂಮಖಿಳಸೇ
ನೆಸಂ।ನದ್ಧಮಾಗಿರಲರ್ಧಚಂದ್ರಾಕೃತಿಯೊಳೆಂದುತಾಮ್ರಧ್ವಜಂಮಂತ್ರಿ
ಗೆ ॥ ಬುದ್ಧಿಗಲಿಸಿದನಿತ್ತಪಾಂಡವನಬಲದೊಳ್ಪ್ರ। ಸಿದ್ಧಭಟರನುಸಾಲ್ವ
ಕರ್ಣಸುತನಾಂಬಾನಿ।ರುದ್ಧಕೃತವರ್ಮಾದಿಗಳ್ಮಸಗಿತಶ್ವಮಂಪಿಡಿಸಿಕೊಂ
ಬುಜ್ಜಗದೊಳು॥ಕುದುರೆಯಂಕಟ್ಟಿಪಡೆಸಹಿತತಾಮ್ರಧ್ವಜಂ।ಕದನಕಿದಿ
ರಾಗಲಸುರಾಂತಕಂಕಂಡುತೋ।ರಿದನರ್ಜುನಂಗಿವಂಬರ್ಹಿರ್ಧ್ವಜನತನು
ಜನನಸೂಯಕಂಧೀರನು॥ಉದಿತಕಾಮಂಸತ್ಯವಾದಿಶುಚಿವೃಷ್ಣಮಂ। ಸ

ದರೆಮಲ್ಲಿವನೊಡನೆಕಾಳಗಂನರ್ಮದಾ । ನದಿಯತೀರದೊಳಿವನತಂದೆದೀಕ್ಷಿ
ತನಾತಹಂಗೆಲ್ಲುವನರಿದೆಂದನು ॥೧೫॥ ಎಂದಖಿಳಸೇನೆಯಂಗೃಧ್ರದಾಕಾರ
ಕ್ಕೆ।ತಂದುನಿಲಿಸಿದನಸುರಮರ್ದನಂಪ್ರೇಣದರ।ಮುಂದೆಸೆಯಕೊರಳೊಳ
ನುಸಾಲ್ವನಂಕಂಗಳೊಳ್ನೀಲಕಂಸಧ್ವಜರನು।ಕಂದರ್ಪಕಾನಿರುದ್ಧರನು
ಭಯುವಕ್ಷದೆಡೆ।ಗಂದದಿಂದಡಿಗಳ್ಗೆ ಭೋಜಸಾತ್ಯಕಿಗಳಂ । ಹಿಂದಣಗರಿಗೆ
ಮೇಘನಾದನಂಕಲಿಯೌವನಾಶ್ವನಂಜೋಡಿಸಿದನು ॥೧೬॥ ವ್ಯೂಹಚಂ
ಚುಸ್ಥಾನಕಿರಿಸಿದಂಕಲಿಬಭ್ರು। ವಾಹನನಪ್ರದ್ಯುಜನುಳಿದಭಟರಂಗೃಧ್ರ।
ದೇಹದವಯವದೆಡೆಗನೆಲೆಗೊಳಿಸಿಬಳಿಕದರಹ್ರದಯದೊಳ್ಫಲ್ಗುಣನನು ॥
ವಾಹಿನಿಸಹಿತನಿಲಿಸಿದಾರುಕನೆಸಗೆರಥಾ।ರೋಹಣಂಗೈದುಮುರಮಥನಂ
ಪಿಡಿದನಾಮ । ಹಾಹವಕೆವರಪಾಂಚಜನ್ಯಮಂಘೋರರವದಿಂದಹಿತರೆದೆಗ
ಳೊಡೆಯೆ ॥೧೭॥ ಪಾಂಚಜನ್ಯಧ್ವನಿಗೆಬೆದರದುಬ್ಬೇರಿರೋ । ಮಾಂಚನ
ದೊಳಾಗತಾಮ್ರಧ್ವಜಂಶ್ರೀವತ್ಸ। ಲಾಂಛನಂಗಿಬಿರಾಗಿನುಡಿದನೆಲೆದೇವಕ
ಟ್ಟದೆನರ್ಜುನನಹಯವನು ॥ ವಾಂಛೆಯುಳ್ಳೊಡೆಬಿಡಿಸುಪಾಲಿಸುಕಿರೀಟ
ಯಂ।ನೀಂಚಕ್ರಮಂತುಡುಕುಶಾರ್ಜಮಂಪಿಡಿರಣಕೆ। ನಾಂಚಲಿಸೆನಿದೆಯ
ನ್ನವಾಜಿಯಂತಡೆಸತ್ತ್ವಮುಳ್ಳೊಡೆನುತಾರ್ದರ್ಬಿಟ್ಟನು ॥೧೮॥ ಹರಿಗೆಕೂರ
ಣಮೂರುದಾರುಕಂಗೈದುರಥ । ಹರಿಗಳ್ಗೆ ನಾಲ್ಕುಸಿತವಾಹನಂಗಿಪ್ಪತ್ತು
ವರಭೋಜಪತಿಗೆಂಟುಶಿನಿಸುತಂಗೊಂಭತ್ತುಹಂಸಧ್ವಜಂಗೆಪ್ಪತ್ತು ॥ ತ
ರಣಿತನಯಜಬಭ್ರುವಾಹನನುಸಾಲ್ವಕ । ಸ್ಮರಯೌವನಾಶ್ವನಿರುದ್ಧ
ನೀಲಧ್ವಜ । ರ್ಗೆರಡೆರಡುಮೇಘನಾದಂಗೇಳುಕೋಲ್ಗಳಂಕರೆದವಂಬೊ
ಬ್ಬಿರಿದನು ॥೧೯॥ ಅಚ್ಯುತಂಬೆರಗಾದನಾತನಪರಾಕ್ರಮಕೆ । ಪೆಚ್ಚಿದಂ
ಫಲ್ಗುಣಂಮಿಕ್ಕುಳಿದಪಟುಭಟ। ರ್ಬೆಚ್ಚಿದರ್ಮಸಗಿವೀರಾವೇಶದಿಂತಮ
ತಮಗೆಬಳಿಕನಿರುದ್ಧನು ॥ ಎಚ್ಚನೆಲವೆಲವ್ರೊತಾಮ್ರಧ್ವಜವಿಚಾರಿಸದೆ।ಕೆ
ಚ್ಚೆದೆಯೊಳಿದಿರಾದೆಮುರಹರನವೊಮ್ಮಗಂ। ಬೆಚ್ಚುವಡೆಬಿಡುಹಯವನ
ಲ್ಲದೊಡೆನೋಡೆನ್ನಬಾಣಜಾತವನೆಂದನು ॥೨೦॥ಬಾಣಜಾತವನೀಗನೋ
ಡಲಿದ್ದಪುದೆನೀಂ।ಬಾಣಜಾತೆಯರಮಣನಂತುಮಲ್ಲದಪ್ರಪ್ರ। ಬಾಣಜಾ
ತಂಮೇಲೆಬಾಣನುಳಿಹಿದನಂದುಕದನದೊಳ್ತಂನಮಗಳ ॥ ಪ್ರಾಣೇಶ
ನೆಂಬುದಕೆಕೈಗಾಯ್ವುದಲ್ಲೆಂಮ । ಬಾಣಂಗಳೀಕ್ಷಿಸೆಂದಾರ್ದುತಾಮ್ರಧ್ವ
ಜಂ।ಬಾಣಾಯುತಂಗಳಂಸುರಿಯಲ್ಕೆಮಧ್ಯದೊಳ್ತರಿದೀತನಿಂತೆಂದನು ॥
ಸಂಗರಕೆಸಾಹಸವ್ರೊಮಾತುಗಳೊಪೂರ್ವಪ್ರ। ಸಂಗಮೇತಕೆಮರುಳೆತರಹ
ರಿಸಿಕೊಳ್ಳೆನುತ । ಸಂಗಡಿಸಿದವನರಥದಚ್ಚಿನೊಗಗಾಲಿಟೆಕ್ಕೆಯಕುದುರೆ

ಸಾರಥಿಗಳ॥ಅಂಗಿಟಿಬ್ಬತ್ತಳಿಕೆಸೀಸಕಂಗಳಜಂಜ । ಡಂಗೆಳಿಲ್ಲೆನಿಸಿಕೆಲಬಲ
ದರಕ್ಷೆಯುಚಿತಾತು । ರಂಗವುಂಸವರಿರಿಪುವೋಹರವಪೊಕ್ಕನನಿರುದ್ಧನದ
ನೇವೇಳ್ವಿನು ॥೧೧॥ ರಣದೊಳನಿರುದ್ಧನಾಟೋಪದಿಂಚಾಪದಿಂ । ಕಣೆಗ
ಳಂತೆಗೆದಸಲ್ಕರಿಗಳಂಹರಿಗಳಂ। ಮಣಿಮಯರಥಂಗಳಂಕಾಲಾಳವೋಲಾ
ಳಸಂದಣಿಯುಮಂದಿಗಳನು ॥ ಹಣಿದವಾಡಿದನಹಿತಬಲದೊಳಗೆನೆಲದೊ
ಳಗೆ।ಪೆಣನಮೆದೆಗೆಡೆಯುಲಕ್ಷೋಹಿಣಿಯುವಾಹಿನಿಯು। ಗಣನೆಮೂರಳಿದು
ದೊಂದೇಕ್ಷಣಕೆವೀಕ್ಷಣಕೆನೆರೆಭಯಂಕರವಾಗಲು ॥೧೩॥ ಬತ್ತಿಬಹರಥಿ
ಕರಂವ್ಯಥಿಕರಂಮಾಡಿದುವು। ಮುತ್ತುವತುರಂಗಮದತುಂಗಮದದಂತಿಗ
ಳ । ಮೊತ್ತಮಂಪೋಳಾಗಿಸೀಳಾಗಿಕೆಡಹಿದುವುಕೊಡಹಿದುವುಪಾಡಕರ
ನು ॥ ಮತ್ತೆಭಟರಂಗಮಂಭಂಗಮಂಬರಿಸಿದುವು। ಕತ್ತರಿಸಿತಲೆಗಳಂಕೊ
ಲೆಗಳಂಕೊಂದುಬಿಸಿ । ನೆತ್ತರಂಪರಸಿದುವುನೆರಪಿದುವುಮರುಳ್ಪಡೆಯುನನಿ
ರುದ್ಧನಸ್ತ್ರಂಗಳು ॥೧೪॥ ಪೊಸರಥದೊಳೈದಿದಂಮತ್ತೆತಾಮ್ರಧ್ವಜಂ ।
ಮುಸುಕಿತಗಣಿತಚಾತುರಂಗಮನಿರುದ್ಧನಂ । ಮುಸಗಿತುತಮಸ್ತೋಮ
ಮಾದಿತ್ಯಮಂಡಲದಗಸಣಿಯಿಲ್ಲೆನೆನಭದೊಳು ॥ ವಸುಧೆಂತುದರಿತುಮೇ
ರುಶೈಲಮಲ್ಲಾಡಿದುದು।ಬಸವಳಿದನಹಿಕೂರ್ಮನೆದೆಗೆಟ್ಟುನಡುಗಿದುವು।
ದೆಸೆಯಾನೆಕಡಲುಕ್ಕಿತಾಹವಂ ಘೋರವಾದುದು ರೋಮಹರ್ಷಣದೊ
ಳು ॥೧೫॥ ಕೋಪದಿಂಪ್ರಳಯಾಗ್ನಿಯಂವದಶರಂಗಳಂ । ಚಾಪದಿಂತೆಗೆದೆ
ಸುತ್ತನಿರುದ್ಧನಮಿತಪ್ರತಾಪದಿಂದುಜ್ವಲಿಸುತಿರ್ದಂವಿಧೂಮಪಾವಕನಂ
ತೆಪರಬಲದೊಳು॥ ಶ್ರೀಪತಿಯಪೌತ್ರನೆಂದಿನ್ನೆಗಂತಾಳ್ದೊಡಾ । ಟೋಪ
ಮೇನಿನಗೆನುತತಾಮ್ರಧ್ವಜಂಕನಲ್ದಿಪ್ರಪ್ರಬಾಣತನುಜನಮೇಲೆಕಣೆ
ಗರೆದನಂಬರಂತುಂಬುವಂತೆ ॥೧೬॥ ಪರ್ಬಿದುವುತೆಗೆದೆಸಲ್ತಾಮ್ರಧ್ವಜನ
ಕಣೆಗ।ಳರ್ಬುದಂಗಳಸಂಖ್ಯೆಯಿಂದೊಡನೊಡನೆನರರನ।ಪೇರ್ಬಡೆಯಮೇ
ಲೆಕವಿದುವುನೊಂದನನಿರುದ್ಧನೇರ್ವಡೆದುಮೂರ್ಛೆಯಿಂದ ॥ಸರ್ಬದಳಮಂ
ತಗುಳ್ದುದುಬೇಸುಗೆಯಬಿರುವೆ।ಲರ್ಬೀಸಿರಜಮಂತೆರಳ್ದುವಂತಾಗವೀ। ರ
ರ್ಬಿಂಕದಿಂದಾಂತುನಿಂದರನುಸಾಲ್ವಕಪ್ರದ್ಯುಮ್ನಸಾತ್ಯಕಿಗಳು ॥೧೭॥
ಹಂಸಕೇತುವನೆಚ್ಚಕೃತವರ್ಮಸಾತ್ಯಕಿಗ।ಳಂಸದೆದುಬಭ್ರುವಾಹನಯೌ
ವನಾಶ್ವರ್ಗೆ ।ಹಿಂಸೆಯಂಕೈಗೈದುನೀಲಧ್ವಜಾನುಸಾಲ್ವಾದಿಭಟರಂಘಾತಿ
ಸಿ॥ ಕಂಸಾರಿಸುತನಂಪಚಾರಿಸಿವಿಜಯಮುರ। ಧ್ವಂಸಿಗಳಮೇಲೆನಡೆತರೆ
ಕಂಡುಕರ್ಣತನ।ಯಂಸರಿಸಕಿದಿರಾಗಿಕತ್ತರಿಸಿಕೆಡಹಿದಂತಾಮ್ರಧ್ವಜನರ
ಥವನು ॥೧೮॥ ತೇರುಡಿಯೆಮತ್ತೊಂದುತೇರನಳವಡಿಸಲಾ।ತೇರನಸಲೊ

ಡನೆಪೊಸತೇರೊಳವನೈದಲಾ। ತೇರನೆಕ್ಕತ್ತರಿಸೆ ಪೇರ್ಸೆ ಸದಂತಿಂತು ನೂರು
ತೇರಂ ಖಂಡಿಸಿ॥ ಸೇರಿಸೇರಿದ ಸೇನೆಯಂ ಸವರಿ ಕರ್ಣಜಂ। ಸೇರಿಬರೆ ತಾಮ್ರಧ್ವ
ಜಂ ಕನಲ್ದವನಿಯಂ ॥ ಸೇರಿ ಬಾಣತ್ರಯದೊಳಾತನಂ ಘಾತಿಸಿ ರಥಾರೋಹ
ಣಂ ಗೈದನು ॥೨೯॥ ಅನಿರುದ್ಧನಂಗಲ್ಬು ವೃಷಕೇತುವಂ ಕೆಡಹ। ಲನುಸಾ
ಲ್ವನಿದಿರಾಗಲಾತನ ಪರಾಕ್ರಮವ। ನನುವರದೊಳುರೆ ಮುರಿದು ಕೃತವರ್ಮ
ಸಾತ್ಯಕಿ ಪ್ರದ್ಯುಮ್ನರಂ ಸೋಲಿಸಿ ॥ ಅನುಪಮ ಬಲಂ ಬಭ್ರುವಾಹ ಸಂಕಾ
ದಲವ ॥ ನನುವನೊಪ್ಪಂಗೆಡಿಸಿ ಹಂಸಧ್ವಜನ ಜಯವ। ನನುಕರಿಸಿ ಯೌವ
ನಾಶ್ವಾಸಿತಧ್ವಜರಂತಗುಳ್ದವಂ ಬೊಬ್ಬಿರಿದನು ॥೩೦॥ ಬಲದೊಳಗೆ ಮಿಡು
ಕುಳ್ಳವೀರರೊಳ್ದೀರರೋ। ಳ್ಕಲಿತನದೊಳಿದಿರಾಗಿ ನಿಲ್ವರಂಗೆಲ್ವರಂ। ಸಲೆ
ಪಲಾಯನಕೆ ಮೈಗೊಡುವರಂ ಬಿಡುವರಂ ವಾಹನಾಯುಧತತಿಯನು ॥ ಫ
ಲುಗುಣಂ ಕಾಣುತತ್ಯುಗ್ರದಿಂ ವ್ಯಗ್ರದಿಂ। ಸೆಳೆದು ಕೋದಂಡಮಂ ತೀಡಿದಂ
ಪೂಡಿದಂ। ಪೊಳೆವ ಕೆಂಗರಿಯ ನಿಡುಕೋಲ್ಗಳಂ ಸಾಲ್ಗಳಂ ಕಟ್ಟಿದಂ ಗಗನಪ
ಥಕೆ ॥೩೧॥ ಲೇಸಾದುದೈ ಪಾರ್ಥ ಕೃಷ್ಣನ ಸಹಾಯದಿಂ। ದೀಸು ದಿನ ವಾಹ
ವದೊಳೆಲ್ಲರಂ ಗೆಲ್ದೆ ಬಿಡು। ವಾಸಿಯಂ ತನ್ನೊಡನೆ ಗೋತ್ರಹತ್ಯಾದೋಷ
ಮಂ ಕಳೆದುಕೊಂಬ ಮುಖಕೆ ॥ ವಿಸುಹರಿಗಳ್ಬೇಕು ನಿನಗೈಸನೀವೆನಾ। ನೀಸ
ರೋಜಾಕ್ಷನಿರಲೇತಕೆಲೆ ಮರುಳೆ ಧನ। ದಾಶೆಯಿಂ ಧರ್ಮಮಂ ಪೊಣ್ದನಂತಾ
ದೆಹೋಗೆನುತವಂ ತೆಗೆದೆಚ್ಚನು ॥೩೨॥ ಎಲವೊ ತಾಮ್ರಧ್ವಜ ಸುಪಿತ್ತದಿಂ
ಧರ್ಮವಂ। ನಿಲಿಸಬೇಕಲ್ಲದನಿರರ್ಥಕದೊಳಾದಪುದೆ। ಜಲಜಾಕ್ಷನಂ ಬರಿ
ದೆ ಸಾಕ್ಷಾತ್ಕರಿಸಬಹುದೆ ವಿಧಿವಿಧಾನದೊಳಲ್ಲದೆ ॥ ಪಲವು ಮುಖದಿಂದ ಪರಿಪೂ
ರ್ಣನಾಗಿಹ ಹರಿಯ। ನೆಲೆಯನೀನೆಂತರಿವೆ ಮೂಢ ಫಡ ಹೋಗೆನು। ತ ಫಲು
ಗುಣಂ ತೆಗೆದೆಚ್ಚನಾತನ ವರೂಥ ಹಯ ಸಾರಥಿಗಳೆಡೆಗೆಡಿದನು ॥೩೩॥ ಆರ
ಥಂ ಮುರಿಯೆ ಪೊಸರಥವನವನೇರಿ ಬರ। ಲಾರಥಂ ಪುಡಿಯಾಗೆ ನರನೆಸಲ್ಬಳಿ
ಕಾಮ। ಪಾರಥಂ ಮತ್ತೊಂದು ರಥದೊಳುರುವಣಿಸಲದನರ್ಜುನಂ ತಡೆಗ
ಡಿದನು॥ ಆರಣದೊಳಿಂತವನ ಸ್ಯಂದನ ಸಹಸ್ರಮಂ ಬಾರಿಬಾರಿಗೆ ಕತ್ತರಿಸಿ ಕೆ
ಡಹಿ ಫಲುಗುಣಂ। ಪೂರೈಸಿದಂ ದೇವದತ್ತಮಂ ಕೊಂದಿನಿಕ್ಕೆಲದ ಚಾತುರ್ಬಲ
ವನು ಅರ್ಜುನನ ಸಾಹಸಕೆ ಮೆಚ್ಚಿ ತಾಮ್ರಧ್ವಜಂ। ಗರ್ಜಿಸಿ ಕನಲ್ದು ಮಮತಾ
ನದೆಂ ಪೌರುಷವಿ। ವರ್ಜಿತನೆ ಫಡಯೆನುತ ತೆಗೆದೆಸಲ್ಬರಸಿಡಿಲ್ಪೊಡದು ಗಿರಿ
ಜರಿವಂತಿರೆ॥ ನಿರ್ಜರೇಂದ್ರನ ಸೂನು ಪೊನಲಿಡಲ್ಬಿಸಿಯನೆ। ತ್ತರೋಂಪಿ
ಸುತವೈಮರೆದು ಬಿದ್ದ ನಿಳೆಯೊಳ್ಪ। ನರ್ಜನ್ಮಮನೆ ಕೂಪ ಚೇತರಿಸಿ ನರ
ನೆಚ್ಚ ಕಡಿದನಾತನ ಧನುವನು ॥೩೪॥ ಬಿಲ್ಮುರಿಯೆ ಮತ್ತೊಂದು ಬಿಲ್ಗೊಂ

ಡುಕೋಪದಿಂ । ಫಲ್ಗುಣನ ರಥವ ತೊಡನೆ ತಾಮ್ರಧ್ವಜಂ ತೆಗೆದಾರ್ದ । ಸಲ್ಕಿ
ಹಿಯೊಳರ್ಜುನನ ತೇರೊಂದು ಯೋಜನಂ ಪೋಗೆ ತಿರಹರಿಸಿಕೊಳುತ ॥ ನಿ
ಲ್ಕೋರೆ ದೋರೆನುತ ಫಲುಗುಣಂ ಬೊಬ್ಬಿರಿದೆ । ಸಲ್ಕಿ ಗಿಲ ಬಟ್ಟೆಯುನಿಡರ್ಧ
ದಾತನರಥಂ । ಬಲ್ಕಿ ಗೆಮುರಧ್ವಂಸಿ ಮೆಚ್ಚಿ ತಲೆದೂಗಿದಂ ಭೂಪ ಕೇಳದ್ಭು
ತವನು ॥ ಎಡಬಲದ ಮಂಡಲದ ಭೇದದಿಂ ಖೇದದಿಂ । ದಡಿಗಡಿಗೆ ಸೆವಪ ಗಾಕ್ರ
ಮದಿಂದ ಕ್ರಮದಿಂದ । ತೊಡುವ ಬಿಡುವಂಬಿನ ತರಂಗದಿಂ ರಂಗದಿಂ ತೊಲಗ
ದಗ್ಗಳಿಕೆಯಿಂದ ॥ ದೃಢಚಾಪಘೋಷ ಭೀಕರದಿಂದ ಕರದಿಂದ । ಜಡತೆಪೊ
ದ್ದದ ಸಾಹಸತ್ವದಿಂ ಸತ್ವದಿಂ । ಕಡುಗಿ ತಾಮ್ರಧ್ವಜವಿಜಯರಾಗ ಜಯರಾಗರೆ
ಚ್ಚಾಡಿದರುದ್ಧರದೊಳು ॥ ಧಾತ್ರೀಶ ಕೇಳ್ ಕೌತುಕವನೇಳು ದಿನಮಹೋ । ರಾತ್ರಿ
ಯೊಳ್ಬಿಡದೆ ಕಾದಿದರವರ್ಪಂಕರುಹ । ನೇತ್ರಂ ಸವ್ಯಸಾಚಿ ದೊಳ್ಕೂಡುತಿರೆ
ತಾಮ್ರಧ್ವಜಾರ್ಜುನರ್ಬಳಿಕದರೊಳು ॥ ಗೋತ್ರಾರಿಸುತನವಂ ಮತ್ತೆ ಜೋ
ಡಿಸಿತಂದ । ಮಾತ್ರದೊಳ್ಸಾವಿರ ರಥಂಗಳಂ ಕಡಿದತಿ । ಕ್ಷಾತ್ರದಿಂ ಕೆಡಹಿದಂ
ಪಡೆಯೊಳಕ್ಷೋಹಿಣಿಗಳನ್ನೂರ ಸಾಹವದೊಳು ॥೩೪॥ ಆತಾಮ್ರಕೇತು
ಪಾಂಡವಸೇನೆಯೊಳ್ಪ್ರಯುತ । ಚಾತುರಂಗವನೈದೆ ಸಂಹರಿಸಿ ಪಾರ್ಥನಂ
ಘಾತಿಸಿದನಡಿಗಡಿಗೆ ಪಳವಿಗೆಯ ಹನುಮನಂ ಹಲುಗಿರಿಸಿ ಹರಿಯನೆಚ್ಚು ॥
ಸೂತವಾಜಿಗಳನೊಡನೊಡನೆ ಜವಗೆಡಿಸಿವಿ । ಖ್ಯಾತ ಚಾಪದ ನಾರಿಯಂ ಕಡಿ
ದುಕಲಿಕರ್ಣ । ಜಾತಾನುಸಾಲ್ವ ನಾತ್ಯಕಿ ಬಭ್ರುವಾಹನಾದಿಗಳನುರೆನೋ
ಯಿಸಿದನು ॥೩೯॥ ತೆತ್ತಿಸಿದನುಭಯವೀರರ ಮೈಯೊಳಂಬುಗಳ್ಮತ್ತರಭ್ರ
ಕೆಟಿಮ್ಮಿ ಮಳೆವನಿಗಳಂತೆ ಹರಿ । ಯುತ್ತಮಾಂಗದ ಮೇಲೆ ಸೂಸಿದುವು ವಾ
ಯುವಶದಿಂದ ಕೇಳದ್ಭುತವನು ॥ ಮತ್ತೆ ಫಲುಗುಣನವನ ಧನುವನಿಕ್ಕಡಿಯಾ
ಗಿ । ಕತ್ತರಿಸೆ ಖತಿಯೊಳ್ಬೈತಂದು ಪಾರ್ಥನರಥವ । ನೆತ್ತಿಕೊಂಡಾಗಸಕೆ ಪುಟ
ನೆಗೆದು ಧರೆಯೊಳಪ್ಪಳಿಸಿದಂ ತಾಮ್ರಕೇತು ॥೪೦॥ ನಭಕೆ ವಿಜಯನ ರಥವ
ನೀಡಾಡಿ ಬಳಿಕದಂ । ರಭಸದಿಂದಿಳೆಗಪ್ಪಳಿಸುವಿನಿಂ ಪರಿತಂದು । ಶುಭಕರಕ
ರಾಗ್ರದಿಂ ಪಿಡಿದಾ ವರೂಥಮಂ ಸ್ವಸ್ಥಾನವಮಾಗಿ ನಿಲಿಸಿ ॥ ಅಭಯಮಂ ಪಾ
ರ್ಥಂಗೆ ಮಾಡಿದಂ ಮುರಹರಂ । ತ್ರಿಭುವನದೊಳಚ್ಯುತನ ಭಕ್ತರ್ಗೆ ಬಪ್ಪು
ದೆಪ । ರಿಭವವೆಂದನಿಮಿಷ ಕರ್ಣಂಡಾಡೆ ಬಲಮುರದ ಕಾಶ್ಚರ್ಯಮಾಗೆ ಕೂ
ಡೆ ॥೪೧॥ ಭೂರಮಣ ಕೇಳ್ಬಳಿಕನಸುನಗುತ ನುಡಿದನಸು । ರಾರಾತಿ ಪಾಂಡ
ವಂಗಳು ಕದಿರ ಧರ್ಮಜಮಂ । ದೀರಣದೊಳೀತನಂಗೆಲ್ವೊಡಾ ವೀರ್ಯರುಂ ಸಾ
ಹಸಂಗೈದಲ್ಲದೆ ॥ ತೀರದೆ ಸೆನೀನೊಂದು ಕಡೆಯೊಳಾನೆಸುವನೀ । ವೀರನಂ
ಮತ್ತೊಂದು ದೆಸೆಯೊಳೆಂದರುಪಿ ನರ । ನಾರಾಯಣರ್ಕರೆದರಂಬುಗಳನೋ

Funding: Tattva Heritage Foundation,Kolkata. Digitization: eGangotri.



ಶೋರ್ಕ್ವರೊಂದೊಂದುಮುಖದೊಳಿರ್ದು ॥೪೦॥ ಪಾಂಡವಮುಕುಂದರೊಂ
ದೇಬಾರಿಮುಳಿದುವರ। ಗಾಂಡೀವಶಾರ್ಙಚಾಪಂಗಳಂಕೊಂಡಬ್ಜ। ಜಾಂಡ
ಕಧಿಕಕ್ಷೋಭಮಾಗೆತಾಮ್ರಧ್ವಜನಮೇಲೆತೆಗೆದೆಸುತಿರಲ್ಕೆ॥ ಕಾಂಡವಿಲ್ಲದೆ
ಕವಿದುವೆಂಬುಗಳಡರ್ದು ಮಾ। ರ್ತಾಂಡಮಂಡಲಮಾಗೆಶಿಖಿಕೇತುನಂದನಂ।
ತಾಂಡಿಬಿಕಮರ್ದನಕಿರೀಟಿಗಳನಡಿಗಡಿಗೆಘಾತಿಸಿದನಾಹವದೊಳು ॥೪೧॥
ವಿಸಾರಿದಪರಾಕ್ರಮದೊಳಕ್ಷಿಗಳರಳ್ದುವು। ಬ್ಬೇರಿಪುಳಕೋತ್ಸವದೊಳಾ
ತಾಮ್ರಕೇತುಕ್ಕೈ। ದೋರಿಬೊಬ್ಬಿರಿದುನಗುನಗುತಕೃಷ್ಣನೊಳೆಂದನೆಲೆ
ದೇವತನ್ನಕೂಡೆ ॥ಜೇರೆನೀಂಬಿಲ್ವಿಡಿದುಕಾದಿಕೌಂತೇಯನಂ। ಗಾರುಮಾ
ಡದಿದರರ್ಜುನಂಗೆಸಾರಥಿಯಾಗು। ಸಾರಿದೆಂಸಾಕೆಂದುತೆಗೆದೆಚ್ಚಡಚ್ಯು
ತಂಮೆಚ್ಚಿನೊಳೊಡಂಬಟ್ಟನು ॥೪೨॥ ಹರಿಬಳಿಕತನ್ನರಥಮಂಬಿಟ್ಟುಫ
ಲುಗುಣನ। ವರವರೂಥಾಗ್ರದೋಳ್ಕ್ಕಮ್ಮಟಿಗೆವಾಘೆಯಂ। ಧರಿಸಿತುರಗಂ
ಗಳಂಚಪ್ಪರಿಸಲೆಡಬಲಕೆವಾಯುವೇಗದೊಳಡರ್ದು ॥ಮುರಿದುಮಂಡಲ
ಭೇದಚಳಬಳಿಕೆಚದುರೋಜೆವೆರಸಿರಣ। ರಂಗದೋಳ್ಳಾಕರಮಿಂಚಿನತೆರ
ದೊ। ಳುರುವಣಿಸಿದುವುಕೂಡೆಶಕ್ರಸುತನೆಚ್ಚನಡಿಗಡಿಗೆತಾಮ್ರಧ್ವಜನ
ನು ॥೪೩॥ ಹರಿನಂದನನದಿವ್ಯಹರಿಮಯವರೂಥಮಂ। ಹರಿವೇಗದಿಂದಸೆ
ವಹರಿಚತುಷ್ಟಯವನುಂ। ಹರಿಯನುಂಪಳವಿಗಿಯಹರಿಯನುಂಪಾರ್ಥನ
ಲಹರಿಯನುಂಧಾತುಗೆಡಿಸಿ ॥ ಹರಿಬದಲಿಗಳಂಪ್ರಹರಿಸಿತಾಮ್ರಧ್ವಜಂ।
ಹರಿನಾದಮಂಮಾಡಿಹರಿದಾಡುತಿರೆಕೂಡೆ। ಹರಿಣಾಂಕಕುಲಜಂವಿಹರಿಸಿ
ದಂಬಾಣದಿಂಹರಿಕಿರಣಮಡಗುವಂತೆ ॥೪೪॥ ಮತ್ತೆಮುರಹರನನೀರೈದು
ಕೂರ್ಗಣೆಯೊಳರ। ವತ್ತುಮಾರ್ಗಣದಿಂದಸುರಪಸುತನಂಘಾತಿ। ಸು
ತ್ತವೆಂಬೊಬ್ಬಿರಿಯೆನರನವನರೋಮರೋಮಂಗಳಂಭೇದಿಸುವೊಲು ॥ ತೆ
ತ್ತಿಸಿದನಂಬುಗಳನವನುಮತ್ತೆಸುತಿರ್ದ। ನಿತ್ತಂಡದಾಹವಂಸಮಮಾಗಿಬ
ರೆವಿಜಯ। ನೊತ್ತಾಯದಿಂದವನಕುದುರೆಸಾರಥಿರಥವನೆಚ್ಚುಹುಡಿಹುಡಿ
ಗೈದನು ॥೪೫॥ ಚೂರ್ಣಮಾದೊಡೆರಥಂತಾಮ್ರಧ್ವಜಂರೋಷ। ಪೂ
ರ್ಣಮುಖನಾಗಿಕಲಿಪಾರ್ಥನಸಮೀಪಮಂ। ತೂರ್ಣದಿಂದೈದಿಪೊಯ್ವೆ
ನಿತರೋಳ್ಗರಣಾಗ್ರದಿಂದಮುರಹರನೊದೆಯಲು ॥ ಜೀರ್ಣತರುಮುರಿ
ದುಬೀಳ್ವಂತಿಳೆಗೆಬಿದ್ದೊಡನೆ। ಕೀರ್ಣಪ್ರತಾಪದಿಂದೆದ್ದುಮತ್ತೊಂದುವಿ
ಸ್ತೀರ್ಣಮಾಗಿರ್ದಮದಕುಂಜರಕಡರ್ದುಶರಪಂಜರವನೊದವಿಸಿದನು॥೪೬॥
ಬೀದಿವರಿಸಿದವಸಾತನಾನೆಯುಂಬಭ್ರುವಾ। ಹಾದಿವೀರರಮೇಲೆಕಣೆಗಳಂಕ
ರೆದನಿದಿ। ರಾದಭಟರೆಲ್ಲರುಂಮೂರ್ಛೆವೃತ್ತಿಯುಂತಳೆದರರ್ಜುನಂಮೈಮರೆ

ದನು ॥ ಕಾದುವವರಿಲ್ಲಪಾಂಡವಬಲದೊಳಾಗಮುಘು । ಸೂದನೆಂಬರಗಾ
ಗಿಕಡುಕೋಪದಿಂದತಾ । ನೇದಿವ್ಯಚಕ್ರಮಂತುಡುಕಿನಡೆದಂಘುರಕೆಮೂ
ಜಗಂತಲ್ಲಣಿಸಲು ॥೪೯॥ ಉರಗೇಂದ್ರಕಮಠದಿಕ್ಕರಿಗಳುಂಗಿರಿಗಳುಂ । ಶ
ರಧಿಯುಂದೆಸೆಗಳುಂಧರಣಿಯುಂತರಣಿಯುಂ । ಪಿರಿದುಕಂಪಿಸಲಾತ್ರಿವಿಕ್ರ
ಮಂಚಕ್ರಮುಂಕೊಂಡುಕಾಳಗಕೆಬರಲು ॥ ಅರುಣಧ್ವಜಂಕಂಡುಕೋಪ
ದಿಂಚಾಪದಿಂ । ಸರಳಮಳೆಯುಂಕರೆವುತುರುಬಿದಂತರುಬಿದಂ । ಹರಿಯುಸ
ದ್ಭುತವಾಗೆಸಂಗರಂಸಿಂಗರಂಪೆರೆಯುಲಂತಕಪುರದೊಳು ॥೫೦॥ ಕಟ್ಟು
ಗ್ರಕೋಪದಿಂದೈತಪ್ಪದಾನವಘ । ರಟ್ಟನಂತಡೆದುತಾಮ್ರಧ್ವಜಂಕಾಳ
ಗಂ । ಗೊಟ್ಟನಳವಿಗೆಸೇರಿತಾತನಚತುರ್ಬಲಂಸರ್ವಸನ್ನಾಹದಿಂದ ॥ ಇ
ಟ್ಟಣಿಸಿತಾಹವಂಬಳಿಕಮುರವೈರಿತಿರು । ಪಿಟ್ಟಚಕ್ರದಪಲವುಧಾರೆಗಳ
ಸೋಂಕಿನಿಂ । ಘಟ್ಟಕೆಡದುದುಪಗೆಯುಪಡೆಯೊಳಕ್ಷೋಹಿಣಿಯುಶತಕ
ವೊಂದೇಕ್ಷಣದೊಳು ॥೫೧॥ ಪಡೆಮಡಿಯೆರೋಷದಿಂದಾಗತಾಮ್ರಧ್ವಜಂ
ನುಡಿದನಸುರಾಂತಕನೊಳೆಲೆದೇವಸೈನ್ಯಮ್ಯಂ । ತಡೆಗಡಿದೊಡೇನಹುದು
ಹಿಂದೆಪಾರ್ಥಂಗಾಗಿನಿಂನಪುಣ್ಯವನಿತ್ತೆಲಾ ॥ ಕೊಡದಿರುಧನಂಜಯಂ
ಗಾಗಿತನಗೀಗನಿಂ। ನೊಡಲನಿದುನಿಶ್ಚಯಂನಿನ್ನಂಕಿರೀಟಿಯುಂ। ಪಿಡಿದುತಾ
ತನಪಮುಖವನಾಗಿಪೆಂ। ನೋಡೆಂದುಹರಿಯುಂಪಚಾರಿಸಿದನು ॥೫೨॥ ಧರಣೀಂ
ದ್ರಕೇಳ್ವಕ್ರಪಾಣಿಯಾಗಿರ್ದಮುರ । ಹರನಂರಣಾಗ್ರದೊಳ್ಮೇಲ್ವಾಯ್ದು
ತುಡುಕಿನಿಜ । ಕರವೊಂದರಿಂದೆರಡುಕೈಗಳಂಮತ್ತೊಂದುಹಸ್ತದಿಂಪದ
ಯುಗವನು ॥ ಹಿರಿದುಸತ್ವದೊಳೊತ್ತಿಪಿಡಿದೊಂದುಗೂಡಿಹರಿ । ಚರಣ
ಮಂನೊಸಲೆಡೆಯೊಳಿಟ್ಟುತಾಮ್ರಧ್ವಜಂ । ಪರಿದನರ್ಜುನನಿದ್ದಬಳಿಗಾ
ಗಸಾಹಸಕೆಮೂಜಗಂಬೆರಗಾಗಲು ॥೫೩॥ ಹಿಡಿಗೆಯ್ಯೊಳಿರ್ದಸುರರಿಪು
ಪಾರ್ಥನಂಕರೆದು। ತೊಡುಮಹಾಸ್ತ್ರವನೆಂದುನೇಮಿಸಲ್ಬಲುಗುಣಂ। ಘ
ಡಯೆನುತಬಾಣಮಂಗಾಂಡೀವದೋಳ್ಪೂಡುವನ್ನೆಗಂಭರದೊಳೊದಗಿ ॥
ತಡೆಗಾಲೊಳಾತನಂಕೆಡಹಿಭುಜಯುಗ್ಮಮಂ । ತೊಡರಿಕೊಂಡುಪ್ಪರಿಸಿ
ನರಕೃಪಣ್ರೀವರ್ಗರಂ । ಮಿಡುಕಲೀಯದೆಬಿಗಿದುತಾಮ್ರಧ್ವಜಂಧರೆಗೆಬಿ
ದ್ದನಗಧರನೊದೆಯುಲು ॥೫೪॥ ಉದ್ದಂಡಭುಜಬಲದೊಳೋರ್ವರೋರ್ವ
ರನೊತ್ತಿ । ಬಿದ್ದರಿಳೆಗಾಮೂವರುಂನೊಂದುಮೂರ್ಛೆಗೊಂ । ಡಿದ್ದರದ
ರೊಳ್ಪಾರ್ಥಶೌರಿಗಳ್ಬಳಿಕತಾಮ್ರಧ್ವಜಂಸತ್ವದಿಂದ ॥ ಎದ್ದುನೋಡಿದ
ನಲ್ಲಿತನಗೆ ಣ್ಣಡನೆಕಾಳಗಕೆ । ಹೊದ್ದುವಘಟರನಾರನುಂಕಾಣದೆಲ್ಲರಂ । ಗೆ
ದ್ದೆರಡುಕುದುರೆಯುಂಕೊಂಡುಳಿದಪಡೆಸಹಿತನಿಜನಗರಿಗೈತಂಡನು ॥೫೫॥

ಪಟ್ಟಣದಪ್ಪೊರವಳಯುದೋಳ್ಪಿತ್ರನೆಯುವಾಗಿ । ಕಟ್ಟದಧ್ವರಮಂಟಪದ
ನಡುವೆದೀಕ್ಷೆಯಂ । ನೆಟ್ಟನೆಪರಿಗ್ರಹಿಸಿಭೂಸುರರ್ವರಸಿಕುಳ್ಳಿರ್ಪಪಿತ
ನೆಡೆಗೆಬಂದು ॥ ಮುಟ್ಟಚರಣಂಗಳಂಸಾಷ್ಟಾಂಗದಿಂದಪೊಡ । ಮಟ್ಟು
ತಾವೃಧ್ವಜಂಕೈಮುಗಿದುತರಿಸಿಮುಂ । ದಿಟ್ಟನೆರಡಶ್ವಂಗಳಂಬಳಿಕಶಿಖಿ
ಕೇತುನಂದಗಿಂತೆಂದನು ॥೫೬॥ ವತ್ಸರಂತುಂಬಿದೇತಕೆತಿರುಗಿತೀಹಯಂ।
ವತ್ಸಹೇಳಿದರೊಡನೆಪುತ್ತೊಂದುವಾಜಿಬಲ । ವತ್ಸಮರಮುಖದಿಂದಜ
ಯಿಸಿತಂದಿರ್ದಪುದಿದೆತ್ತಣದುನಿನಗಿಳೆಯೊಳು ॥ ಮತ್ಸರದಕದನವಿಂದಾ
ವಭೂಪನೊಳಾಯ್ತು । ಮತ್ಸಮೀಪಕೆಬಂದಹದನಾವುದೆಂದುಶ್ರೀ । ಮ
ತ್ಸಭಾಮಧ್ಯದೋಳ್ಪ್ರಸುನಗುತಶಿಖಿಕೇತುತನಯನಂಬೆಸಗೊಂಡನು॥ ಚಿ
ತ್ತೈಸುತಾತನೃಪವರಯುಧಿಷ್ಠಿರನಮಖ । ದುತ್ತಮತುರಂಗವಿದುರಷೆ
ಗರ್ಜ್ಜುನಕೃಷ್ಣ । ರಿತ್ತಂಡಮುಂಪಡೆವೆರಸಿಬಂದೊಡಾನದಂಕಟ್ಟದರೆತನ
ಗವರೊಳು ॥ ತತ್ತದಾಹವಮೆಂದುನಿಜಸುತಂಬಿನ್ನೈಸೆ । ಮತ್ತೆಸಂಶ
ಯದಿಂದಭೂಪಾಲಕಂತನ್ನ । ಹತ್ತಿರಿಹನಿಜಮಂತ್ರಿನಕುಲಕೇತುವನೀಕ್ಷಿ
ಸಲ್ಕಾತನಿಂತೆಂದನು ॥೫೭॥ ಜೀಯುಪುಸಿಯಲ್ಲಪಾಂಡವರಾಯನಶ್ವಮಂ ।
ಕಾಯುಬಂದಿಹಬಭ್ರುವಾಹನಾದಿಗಳನೊತ್ತಾಯದಿಂದೆಲ್ಲರಂಸದೆಬಡಿದುರು
ಳ್ಚಿ ಬಳಿಕೈದೆಕೃಷ್ಣಾರ್ಜುನರನು ॥ ಸಾಯದಂತೆಡಗೆಡಹಿಪಿಡಿದುಬಿಟ್ಟೊ
ಡನೆಕಾಂ । ತೇಯನಮಹಾಧ್ವರದವಾಜಿಯಂಕೊಂಡುತಾ। ನೋಯದೈ
ತಂದೆನನೆಮರುಗುತನುಯೂರಧ್ವಜಂಮಂತ್ರಿಗಿಂತೆಂದನು ॥೫೮॥ ಅಕಟ
ಕೆಡಿಸಿದನಲಾಕಾರ್ಯಮಂನಮಗಿದೇ । ತಕೆಯುದ್ಧಮಿನ್ನುನನಗೀಮಗಂಪ
ಗೆಯಾದ । ಸ್ವಕರಸ್ಥನಾದಹರಿಯಂಬಿಟ್ಟುಕಟ್ಟದಂಗರ್ಧಭಾಕ್ಕೃತಿಹರಿಯ
ನು॥ ವಿಕಳಮತಿಯಾಗಿರ್ದನೀತನೇವೇಳ್ವೆನು । ತ್ಸುಕದಿಂದಲೊಡಗೂಡಿ
ಮಂಚದೋಳ್ಪ್ರಾಣನಾ।ಯಕನಿರಲ್ಕರದೊರಗಿದಧಮಾಂಗನೆಯವೊಲೆಂದ
ವನಿಗಂಬಿಸುಸುಯ್ದದನು॥ಮತ್ತೆಸುತನಂನೋಡಿಬೈದನೆಲವೆಲವ್ರೋಪೋ।
ಗತ್ತನಿನ್ನಂವಾಳ್ಪದೇನಮಲತುಲಸಿಯಂ । ವೊತ್ತಿವಿಡಿದಬಜ್ಜಮಂವಾ
ಣ್ದುಪರಿಮಳದಕುಸುಮದತೊಡವಗಟ್ಟುವಂತೆ ॥ ಉತ್ತಮವಿದೆಂದುಕೃ
ಷ್ಣಾರ್ಜುನರಬಿಟ್ಟುತಂ । ದಿತ್ತೆತುರಗಂಗಳಂಸಾಕಿನ್ನುಯಜ್ಞಮವ ।ರೆತ್ತ
ಲಿರ್ದಪರೆಂಬುದಂಪೇಳ್ಬೊಡುಳುಹಿದವನೆಂದುಭೂಪತಿಸುಯ್ದನು ॥೫೯॥ಕ
ಡೆಯಾದುದಧ್ವರಕೆಸಾಕಿನ್ನುತುರಗಮಂ । ಪೊಡೆಯತ್ತಲಾದೊಡಂಮುರ
ಮಥನಪಾರ್ಥರಾ । ವಡೆತನಗದಂತೋರಪೇಳ್ವುದೆಂದಾಮಯೂರಧ್ವ
ಜಂಮರುಗಿಮರುಗಿ ॥ ಬಿಡದೆನಿಜತನಯನಂಬೈದುಗರ್ಜಿಸಿತನ್ನ । ಮಡ

ದಿಸಹಿತಿರುತಿರ್ದ್ದನಾದಿನಂದೇವಪುರ । ದೊಡೆಯುಲಕ್ಷ್ಮೀಶನೆಂಕಣ್ಣಾರಕಾ
ಣಬೇಕೆಂಬಕಡುತವಕದಿಂದ ... ... ॥೬೦॥

ಸಂಧಿ ೨೦ಕ್ಕೆ ಪದ್ಯಗಳು ೧೩೩೦ಕ್ಕೆ ಮಂಗಳಮಸ್ತು.

---

## ಇಪ್ಪತ್ತೊಂದನೆಯ ಸಂಧಿ.

ಸೂಚನೆ. ದ್ವಿಜನಾಗಿಬಂದುಬೇಡಲ್ಕ ಮಯೂರಧ್ವಜಂ । ನಿಜಶ
ರೀರದೊಳರ್ಧಮಂಕೊಯ್ದು ಕೊಟ್ಟಪಂ। ಕಜಪತ್ರನೇತ್ರಸಂಮೆ
ಚ್ಚಿಸಿಹಯುದ್ಧ್ವಯುವನಿತ್ತುಮಖಮುಂಮಾಡ್ದನು ॥

ಭೂರಮಣಕೇಳ್ಕೃಷ್ಣಕಾಂಕ್ಷೆಯಾಗಿರ್ದಂಮ।ಯೂರಧ್ವಜಕ್ಷಿತೀಶ್ವ
ರನಿತ್ತಲತ್ತರಣ । ಧಾರುಣಿಯೊಳಸುರಾರಿಗೆಚ್ಚರಿಕೆತಲೆದೋರಿತರ್ಜುನಂ
ಗಿವಾದುದು ॥ ವೀರಭಟರೆಲ್ಲರ್ಗೆಮೂರ್ಛೆತಿಳಿದುದುಬಳಿಕ । ವಾರಿಜಾ
ಕ್ಷಂಸಕಲಸೇನೆಯುಂಸಂತೈಸಿ । ಚೋರಬುದ್ಧಿಯೊಳೊಂದುಪಾಯಮಂ
ಕಂಡಾಧನಂಜಯುಂಗಿಂತೆಂದನು ॥೧॥ ನೋಡಿದೈಕುಂತೀಕುಮಾರತಾಮ್ರ
ಧ್ವಜಂ।ಮಾಡಿದವಿಘಾತಿಯುಂನಮ್ಮೆಲ್ಲರಂಧುರದೊ।ಳೀಡಿರಿದುರುಳ್ಚಿ ಹಯ
ಮಂಕೊಂಡುರತ್ನಪುರಿಗೈದಿದಂಪಿತನಬಳಿಗೆ ॥ ಆಡಲೇನಹುದಿನ್ನು ಸೇನೆ
ಮೆಲ್ಲನೆಪಿಂತೆ।ಬೀಡಾಗಿನಡೆತರಲಿಮುಂದೆಪೋದಪೆನೆನ್ನ । ಕೂಡೆಬಾನಿನ
ಗೊಂದುಪಾಯಮಂತೋರಿಸುವೆನೆಂದನಸುರಾರಿನಗುತ ॥೨॥ ಆಹರಿಯ
ನುಡಿಗೇಳ್ದುಫಲುಗುಣಂಸೇನಾಸ । ಮೂಹಮಂಪಿಂದುಳುಪಿರತ್ನನಗರಿಗೆಪ
ಕ್ಷಿ।ವಾಹನನಕೂಡೆನಡೆತಂದನವರೀರ್ವರುಂಮಾತಾಡಿಕೊಂಡುಬಳಿಕ ॥
ರೂಹುಗಾಣಿಸದಂತೆವಿಪ್ರವೇಷವನಾಂತು । ದೇಹಂಕರತೆರದಿಂದವೃದ್ಧನಾ
ದಂಶೌರಿ। ಮೋಹದಿಂತನಗಕ್ಕೈಗೊಡುವಬಾಲಕಶಿಷ್ಯನಾದನಮರೇಂದ್ರ
ಸೂನು ॥೩॥ ಬಟ್ಟೆವಿಡಿದವರೀರ್ವರುಂಮಯೂರಧ್ವಜನ। ಪಟ್ಟಣಕೆನಡೆ
ತಂದರನ್ನೆಗಂದಸೆದೆಸೆಯೊಳಿ। ಟ್ಟಣಿಸಿಲೋಕಮಂಕಂಗಡಿಸುವಂಧಕಾರಂ
ಗಳಂನಿಲಲೀಯದೆ॥ಅಟ ಹರಿಹರಿದುರೆಬಳಲ್ದುಕಾಹುರದಿಕಂ । ಗೆಟ್ಟುಕಳೆ
ಗುಂದಿಮೆಲ್ಲನೆನಭೋಮಾರ್ಗಮಂ । ಬಿಟ್ಟುಪಶ್ಚಿಮಗಿರಿಯುತಪ್ಪಲಂಸಾ
ರ್ದನೆನೆರವಿಪಡುಗಡಲೊಳಿಸೆದನು ॥೪॥ ಮೆಲ್ಲಮೆಲ್ಲನೆತರಣಿಮುಳುಗಿದಂ
ಪಡುಗಡಲೊ। ಳಲ್ಲಿಗಲ್ಲಿಗೆಮೂಡಿದುವುಸಂಜೆದಾರಗಗ।ಳೆಲ್ಲೆಲ್ಲಿಯುಂತಮಂ
ತುಂಬಿದುದುತುಂಬಿಗಳೊಡನೆಮುಗಿದುವಂಬುಜಾಳಿ ॥ ನಲ್ಲನಲ್ಲರನೇಹಗ
ಳಹದೋಳ್ಕುನಿದುರತಿ।ಗೊಲ್ಲದೊಲ್ಲದಕಾಂತೆಯುರಮನಂತರಹರಿಸಿ।ನಿಲ್ಲ

ನಿಲ್ಲದಬಲಂಗೆಜನುರುಬತೊಡಗಿದಂಮರುಗಿದುನ್ರಕೋಕಂಗಳು॥೫॥ಹೊ
ತ್ತುಹೊತ್ತಿಗೆಮತ್ತೆಮತ್ತೆಬಲ್ಪುತ್ತರದೊ। ಳೊತ್ತಿಡಿದುಸುತ್ತಲೆತ್ತೆತ್ತಲುಂ
ಕೆತ್ತವ್ರೋ । ಲ್ಮುತ್ತಿಮುಸುಕಿತ್ತುಕಗ್ಗತ್ತರಥರಿತ್ರಿಯುಂಮುಳ್ಳನೊನಕೊ
ಳ್ಳದಂತೆ॥ಚಿತ್ತಜಂಕತ್ತಿಯಂಕಿತ್ತುಕೊಂಡೆತ್ತಿಹೊ।ಯ್ವುತ್ತಬರಲುತ್ತುಂ
ಗವೃತ್ತಕುಚೆಯರ್ತವಗೆ।ತೆತ್ತಿರ್ದತೆತ್ತಿಗರನೊತ್ತಿಗೆಲಸುತ್ತಿರ್ದರಾಗಲನು
ರಾಗದಿಂದ॥೬॥ ಆರಜನಿಯೋಳ್ಬಳಿಕರತ್ನಪುರಮಂಪೊಕ್ಕು । ನೀರಜದಳೇ
ಕ್ಷಣಂಕೇರಿಕೇರಿಗಳೋಳ್ಸ।ಮಿರಜನತಮ್ಮ ಸಂಕೂಡಿಕೊಂಡ್ಯೈತರುತಕಂ
ಡನತಿನಿದ್ರೆಯಿಂದ ॥ ಊರಜನಮೆಲ್ಲರುಂಮರೆದೊರಗಲಲ್ಲಿಲ್ಲಿ । ಮಾರಜ
ಭ್ರಮೆಯಿಂದಪೊರಮಟ್ಟುಸಂಚರಿಪ । ಚಾರುಜಲರುಹವದನೆಯರಚೇಟ
ದಾಟದಪಲವುಬಗೆಯಚೇಷ್ಟೆಗಳನು॥ ಆಭರಣಮುಲುಗಿದೊಡೆಕಣ್ಗದಿರ್ಪ್ಸ
ಸಿದೊಡೆ। ಶೋಭಿಸುವತನುಗಂಧಮುಣ್ಮಿದೊಡೆಜನದನಿ । ದಾಭ್ರಂಗ
ಮಾಗಿಕಂಡಪರೆಂಬಭೀತಿಯಿಂದೈತಪ್ಪಕಾಮಿನಿಯನು ॥ ಸಾಭಿಲಾಷೆಯೊ
ಳೋರ್ವವಿಟನಿದಿರ್ವಂದುಮು । ತ್ತೇಭಗಾಮಿನಿಭೃಂಗನೀಲಕುಂತಳೆಪಸ್ನ।
ಗಾಭಸುಂದರವೇಣಿಬೆದರಬೇಡೆನುತತಕ್ಕೈಸಿದನದೇಂಪಾರ್ಥನೋ ॥೭॥
ತೋರಮುತ್ತಿನಹಾರಮಂತೊಟ್ಟುಚಂದ್ರಮುಖಿ । ಕಾರಗತ್ತಲೆಯೊಳಡಿ
ಯಿಡಲಂಜಿಪಣೆಗೆಕ। ಸ್ತೂರಿಯಂಕಣ್ಗೆಕಾಡಿಗೆಯಂಕೊರಳ್ಗೆಹರಿನೀಲಮ
ಣಿಭೂಷಣವನು ॥ ಸೇರಿಸಲ್ಕದುನೈಜಮಾಗೆಬೆಗಾಗಿಬಳಿ।ಕೋರೆದುರು
ಬಂತೆಗೆದುಜಡೆಗಟ್ಟಿಪೊರಮಟ್ಟು।ಕೇರಿಗೊಂಡ್ಯೆದಿದಳ್ಸಂಕೇತಭವನದೋ
ಳ್ಕಾದಿರ್ದಕಾಂತನೆಡೆಗೆ ॥೮॥ ಸಂಚುಪಸತೀಜನದೊಳಂಗಭವಕೇಳಿಪ್ರ।
ಪಂಚುವರನೋಳ್ಸಮನಿಸಿದಬಳಿಕಮನದೊಳ್ಸ। ಳಂಚುಪಬೆದರ್ಕೆಯುಂ
ಬಿಟ್ಟುನಿಜಭವನಮಂಪೊರಮಟ್ಟುಕತ್ತಲೆಯೊಳು ॥ ಮಿಂಚುವವಿಭೂಷ
ಣಕೆಮುಸುಕಿಟ್ಟುಸುಳಿವರ್ಗೆಹೊಂ । ಚುವಚಮತ್ಕೃತಿಯನಳವಡಿಸಿನೆನ
ಹಿಂಗೆ।।ಮುಂಚುವಪದನ್ಯಾಸಮಂಕಲಿತುನಡೆವಜಾರೆಯರಚದುರೆಸೆದಿರ್ದ್ದ
ದು ॥೧೦॥ ಕಿಕ್ಕಿರಿದಡರ್ದರವನಿಂಬುಗೊಂಡುರೆಬೆಳೆದ । ಕಕ್ಕಸದಬಟ್ಟ
ಬಲ್ಮೊಲೆಗಳೋಪನಕೈಗೆ।ವಕ್ಕಸಂನೋಳ್ಪರ್ಗೆಕಣ್ಗೆಸುಪುರ್ದುಗಿದೊಡೆ
ಮದನಂಗೆಮಾನಹಾನಿ॥ಸೊಕ್ಕಲೇನಾಗದಂದೊಪ್ಪಿಡಿಯೊಳಡಗಿನೋ ।
ಟಕ್ಕೆಕಾಣಿಸದೆಕಾಮುನರೂಪನೊಳಗೊಂಡು। ತಕ್ಕಬಡತನದೊಳಿರ್ದ
ದುಸಣ್ಣಸೆಳೆನಡುನಿಶಿಯೊಳ್ಯದಿಬಹಜಾರೆಯ ॥೧೧॥ ನಿಟಿಲಮಂನೇವರಿಸು
ತಂಗುಲಿಯತುದಿಯಿಂದ। ತುಟಿವಿಡಿದುನೋಡುತ್ತಮಣಿಮಣಿದುವೃತ್ತಕು
ಚ।ತಟಮಂನಿರೀಕ್ಷಿಸುತಕರ್ಣಪತ್ರನಮರ್ಚುತಹಾರಮಂಸರಿವುತ॥ಕಟ

ಗೆನಿರಿಯುಂಸೇರಿಸುತನಿಮಿರ್ಗಕ್ಷತಕೆ। ವಿಟನನುರಿಬ್ಬೈವುತ್ತತಿರುಗಿನಿಜವಮಂ
ದಿರಕೆ। ಕುಟಿಲಕುಂತಳೆದಜಾರೆಯರ್ಬೈದಿಬರುತಿರ್ದರಲ್ಲಲ್ಲಿಕತ್ತಲೆಯೊಳು ॥
ಕತ್ತಲೆಯೊಳಸುರಾರಿಘಲುಗುರ್ಜರೆಯರ । ವೃತ್ತಾಂತಮಂನೋಡು
ತೈತರಲ್ಕನಿತರೋ। ಳೊಪ್ಪುತ್ತಿಹಪಕ್ಕವಕ್ಕಿಗಳವಿರಹದವಂಕಿಪ್ರೊಗೆಪ್ರೊಗೆ
ದುಮೇದಿನಿಯೊಳು ॥ ಸುತ್ತಸುತ್ತಲುಮಂಧಕಾರವಾಗಿರುತಿರ। ಲ್ಲಿತ್ತಜಂ
ತಂಬೆಲರೊಳೂದಿದೊಡೆಪ್ರಜ್ವಲಿಸಿ। ಮತ್ತುರಿವಕಿಚ್ಚಿನೇಳಿಗೆಯಂತವೂ
ಡಿದಂಚಂದ್ರನಿಂದ್ರನದೆಸೆಯೊಳು ॥೧೩॥ ಮರುಗಿದುವುಕೋಕಕೋಕ
ನದಂಗಳಾಗೆಬಾ ! ಯ್ದೆರೆದುವುಚಕೋರಕೋರಕಕುಮುದರಾಜಿಗ।
ಳ್ತುರುಗಿದತಮಿಸ್ರಮಾಲೋಕಲೋಕಸ್ಥಿತಿಗೆ ತೊಲಗಿದುವುದೆಸೆದೆಸೆಯೊ
ಳು ॥ ಮೊರೆದುದುಸಮುದ್ರಮುದ್ರವದಪೆಚ್ಚಗೆಯಿಂದ । ಲೊರತಂ
ದುದುಕಾಂತಕಾಂತಿಪ್ರತತಿಕುಸುಮಶರ । ನುರುಬಿದನಗಲ್ದರಂಬಿಪಾಪ
ಚಾಪಲಹಸ್ತನಾಗಿಚಂದ್ರೋದಯದೊಳು ॥೧೪॥ ಪ್ರಾಚೀನಿತಂಬಿನಿಯ
ಮುಖಬಿಂಬದೆಳೆನಗೆಯ । ರೋಚಿಗಳೊಪೆಚ್ಚಗೆಯೊಳುಬ್ಬಿದ್ದಪಾಲ್ಗಡ
ಲ । ವೀಚಿಗಳೊಮನ್ಮಥನಕೀರ್ತಿಯಮರೀಚಿಗಳೊನಿಜಕಾಂತನಂಕಾ
ಣುತ ॥ ನಾಚಿಬಿಳ್ಪೇರಿದಳೊರಾತ್ರಿವಧುಚಲ್ಲಿದನೊ। ಭೂಚಕ್ರಕಂಗಜಂ
ಬೇಳುವೆಯಬೂದಿಯಂ । ವಾಚಿಸುವಡರಿದೆನಲ್ಪಸರಿಸಿತುಚಂದ್ರಕಿರಣಂ
ಗಳೆಲ್ಲಾದೆಸೆಯೊಳು ॥೧೫॥ ತನೆಶಾಂತನಮೃತರೂಪಂಶ್ರೈತ್ಯವರ್ಧನಂ ।
ಭುವನಪ್ರಕಾಶಂಜನಾವಲೋಕಪ್ರಿಯಂ । ಧವಳತನುವೃತ್ತಂನಿರಂತರಂವಿ
ಷ್ಣುಪದಸೇವಕಂಕೃಷ್ಣಾಂಕನು ॥ ದಿವಿಜತೋಷಿತನಾದರಾಜಸಭ್ಯದಯ
ದೋ । ಳ್ಕುವಲಯಶ್ರೀವಿರಾಜಿತಮುಪ್ಪದೇಂಕೌತು । ಕವೆಜಾರಚೋರ
ರ್ಕಳಡಗದಿರ್ದಪೆರೆಪೇಳೆನಲಿಂದುಮೆರೆದನಂದು ... ...॥೧೬॥
ಚಂದ್ರನುದಯಂಗೈಯ್ಯೆದೆಸೆದೆಸೆಗಳೆಲ್ಲಮುಂ। ಚಂದ್ರಿಕೆಗಳಿಂದಬೆಳಬೆಳಗಿ
ಬೆಳ್ಳಿಯೊಲಾಗೆ ! ಚಂದ್ರಕಾಂತಂಗಳಿಂದ್ಯೈದನಿರ್ಮಿಸಿದನವಸೌಧಸೌಧಾ
ಗ್ರಂಗಳ ॥ ಚಂದ್ರಶಾಲೆಗಳೊಳಗೆರತಿಕಲಾಪಾಪ್ತಿಯಿಂ। ಚಂದ್ರವದನೆಯ
ರಂತರಂಗದೋಳ್ಪುದಿದನವ । ಚಂದ್ರಿಕೆಯನಲ್ರಂಜಿಸಿರೆರವಿಸುತಿಹಪುರು
ಪರಾಪುರದೊಳೆಸೆದಿರ್ದರು ॥೧೭॥ ಕುಚಮಂಡಲದಮೇಲೆಚಾರುನಯನ
ದನಡುವೆ । ಕಚದೆಡೆಯೊಳೆಕೃಷ್ಣವೈಭವಂತನ್ನಬಗೆ।ಗುಚಿತಮುಪ್ಪದು
ನಿನ್ನೆದೆಯೊಳಿರ್ಪಕೃಷ್ಣಭಾವಂತನಗೆವಿರಹಿತವನು ॥ ರಚಿಸದಿರದೆಂದೋ
ರ್ವನಿನೆಯಳಂತಿಳುಪಲ್ಕೆ।ವಿಚಲಮುಪ್ಪುದೆಕೃಷ್ಣಹೃದಯಮಂದವಳೊಂದ
ರೆ।ವಚನದೋಷಕೆಬೇಡಿಕೊಂಬವ್ರೋಲ್ಕಾಲ್ಗೆರಗಿಸಂತೈಸಿದಂಪ್ರಿಯಳನು॥

ಅಚ್ಚ ಬೆಳ್ದಿಂಗಳೊಳ್ಮತ್ತೋರ್ವನಿನೆಯಳಂ । ನಿಚ್ಚಟದೊಳುಳಿವಂತೆನೀವಿ
ಯುಂಬರಸಳಿದು । ಹೆಚ್ಚಳಿಸಿಪ್ರಿಯೆನಿನ್ನಸರ್ವಾಂಗಮಂನೋಡಿಕೃಷ್ಣಾವ
ಲೋಕನವನು ॥ ಮುಚ್ಚಿದಣಿಯದವೋಲಿರ್ದಪುದೆನ್ನಕಂಗಳೆಂ । ದುಚ್ಚರಿ
ಸಲೆಶಿವುರಣಮುರುಳೆತಪ್ಪನಾಡಿದೆದೃಷ್ಟಿ । ಗೊಚ್ಚಿತಂಗೊಂಡುರಂಜಿಪಕೃ
ಷ್ಣರೂಪಮಿರಲನ್ನಮಿನ್ನೇಕೆಂದಳು ॥೧೯॥ ಅಂಗಜಶ್ರಮದಿಂಬೆಮರ್ದಕಾ
ಮಿನಿತನ್ನ । ತುಂಗಕುಚತಟದಕತ್ತುರಿಯೋಳ್ಪುದಿದಪ್ರಿಯು । ನೆಂಗಮಂ
ಕಂಡಿದೇತಕೆಕೃಷ್ಣರೂಪಾದೆನೀನೆಂದುಬೆಸಗೊಳಲ್ಕೆ ॥ ಅಂಗನೆತಿಳಿಯದಾ
ದೆಪೊತ್ತಿರ್ದನಂದುಕೃ । ಷ್ಣಂಗಿರಿಯನೊಂದನೆರಡದ್ರಿಗಳನೀಗಳೆಂ । ಹಿಂ
ಗದಾಂತಿಪೆನೆನಗೆಕೃಷ್ಣಭಾವಂಬಪ್ಪುದಚ್ಚರಿಯೆಪೇಳೆಂದನು ॥೨೦॥ ಕತ್ತ
ಲೆಯುನಡಸಿಪಿಡಿದವರುಂಟೆತಾರೆಗಳ । ಮೊತ್ತಮಂಪೊಯ್ದುಕೆಡಪಿದರುಂ
ಟೆಬೆಟ್ಟಗಳ । ನೊತ್ತಿಕರದಿಂದಕದುಪಿದರುಂಟೆಗಗನಮಂತೆಕ್ಕೆಗೊಂಡಿಸಿ
ದರುಂಟೆ ॥ ವೃತ್ತದಿಂದೆಸೆವಶಶಿಯುಂಚುಂಬಿಸಿದರುಂಟೆ । ಚಿತ್ತಜಾಹವದಭ
ಟರಂಘವಣೆಪೊಸತೆಂದು । ಹತ್ತಿರಿಹಪಂಜರದರಾಜಕೀರಂಪೇಳ್ದದೋ
ರ್ವನಾಯಿಕೆಮುಕೊಡೆ॥೨೧॥ ಹರಶರಪ್ರಥಮಾವತಾರಲೋಚನೆಮಹೇ । ಶ್ವ
ರಚಾಪತುಂಗವಕ್ಷೋಜಾತೆಹಿಮಕರಾ । ಭರಣಮೌರ್ವೀವೇಣಿತಾನಿರ್ದ
ಮನ್ಯಳಂಮದನಬಾಣಾಕ್ಷಿಯೆಂದು ॥ ಸ್ಮರಕಾರ್ಮುಕಭ್ರೂಲತಾಶೋಭೆ
ಯೆಂದುಶಂ । ಬರಮಥನಸಿಂಜಿನೀಲೋಲಕುಂತಳೆಯೆಂದು । ಕರೆದೆಗಡ
ನೀನೆಂದುಸವತಿಮತ್ಸರಕೋರ್ವಳೋಪಸಂಕೋಪಿಸಿದಳು ॥೨೨॥ ಆವನಂ
ಕೆಳೆಯೆಂದುರಿಯನಪ್ಪಿಬಾಳ್ದವಂ । ಪಾವಗಿದುಬದುಕಿದವನಾವನಂಮೃಡ
ನಯನ । ಪಾವಕಜ್ವಾಲೆಯಿಂದುರೆಬೆಂದುಜೀವಿಸುವನಾವನಂತ್ರಿಭುವನ
ದೊಳು ॥ ಈವಾಯುವೀಚಂದ್ರನೀಪುಷ್ಪಬಾಣನೀ । ಮೂವರುಂವಿರಹಿ
ಗಳಕೊಲೆಗುಳಿದರಕಟತಾ । ನೇಗೈವನೆಂದೋಪನಗಲ್ದಕಾಮಿನಿಯೋ
ರ್ವಳಾಗಚಿಂತಿಸುತಿರ್ದಳು ॥೨೩॥ ವಂಚನೆಯೊಳಿಂತಿರುಳ್ಪರಜನದನಾ
ನಾಪ್ರ । ಪಂಚೆಲ್ಲಮಂನೋಡುತಸುರಾರಿಫಲುಗುಣ । ರ್ಸಂಚರಿಸುತಿರ್ದ
ರಾಪಟ್ಟಣದೊಳನ್ನೆಗಂಕಾಂತರಾಲಿಂಗನದೊಳು ॥ ಪೊಂಚಿರ್ದಕಾಮಿನಿ
ಯುದೆದಿಗಲೆನಲ್ಕೂಗಿ । ತುಂಚಿದೋಳ್ಕೋಳಿಗಳ್ಕುಟಕೆಣೆವಕ್ಕಿಗ । ಳ್ಮುಂ
ಚಿದುವುತಾವರೆಗೆತ್ತುಂಬಿವಿಂಡೆರಗಿದುವುಮುರುಗಿದುವುನೈದಿಲೆಗಳು ॥ ೨೪ ॥
ಬಳಿಕದಿನದಿನಕೊಂದುಪರಿಯಾಗಿದೋಷಮುಂ । ತಳೆದುಸಲೆಪೆಚ್ಚಿದಕರಂಗ
ಳಿಂಪಿರಿಯಿರ್ದ । ನಿಳೆಯುಂಗಳಂಬಾಧಿಸುವರಾಜನೈಶ್ವರ್ಯಮಿರ್ದಪುದೆಪೇಳೆನೆ
ಲ್ಕೆ ॥ ತೊಲಗಿದುವುಬೆಳ್ದಿಂಗಳಾದಿತ್ಯನೋಳ್ನೆರೆಯ । ಲೇಸಿಕುಂಕುಮ

ದಿಂದಪೂರ್ವದಿಗ್ವನಿತೆಮಂ । ಗಳಮಜ್ಜನಂಗೈದಳೆಬಂತೆರಂಜಿಸಿತು ಮೂ
ಡದೆಸಕೆಂಪಡರ್ದು ॥೨೫॥ ಗಾಲಿಯೊಂದೇರಥಕೆಜೋಡಾಗಿಪೂಡುವರೆ ।
ನಾಲದೇಳೇಹಯಂನಡೆಸುವರೆಸಾರಥಿಗೆ । ಕಾಲಿಲ್ಲಲೋಕಯಾತ್ರೆಯುನೊ
ಲ್ಲೆನೆಂದೊಡಾಗದೆತನಗೆತಿರುಗಲೇಕೆ ॥ ಕಾಲಗತಿಯಂಮೀರಬಾರದಿಂತೆಂ
ಬುದಂ । ಮೂಲೋಕಕೆಚ್ಚರಿಸುವಂತೆಪೂರ್ವಾಚಲದ । ಮೇಲೆಮೂಡಿದ
ನೆಂದಿನವೊಲಬ್ಜಬಾಂಧವಂನಯನಾಂಧವೆಂದಡಗಲು ॥೨೬॥ ಜನನಾಥಕೆ
ಕೇಳ್ಮರಯೂರ್ಧ್ವಜಮಹೀಶ್ವರಂ । ದಿನನಾಥನುದಯದೊಳ್ವಿಮಲಸಂ
ಧ್ಯಾವಿಧಿಯ । ನನುಕರಿಸಿಕೃಷ್ಣನಿದ್ದೆಡೆಗೆತಾಂಪೋಗಿಕಂಡಪೆನೆಂಬಕಾರಿ
ಯವನು ॥ ಮನದೊಳಗೆನಿಶ್ಚೈಸಿಪೊರಮಡುವನಾಗಿನಿಜ । ತನುಜನಂಕ
ರೆಸಿಮಂತ್ರಿಗಳೆಲ್ಲರಂಬರಿಸಿ । ವಿನುತಭೂಸುರನೃಪಾಲಸ್ತೋಮದೆಡೆ
ಗೂಡಿಕುಳ್ಳಿರ್ದನೋಲಗದೊಳು ॥೨೭॥ ಅಂನೆಗಂವೃದ್ಧವಿಪ್ರಾಕಾರಮಂ
ತಳೆದ । ಪಂನಗಾರಿಧ್ವಜಂನಿಜಶಿಷ್ಯಪಾರ್ಥನಂ ।ತಂನೊಡನೆಕೂಡಿಕೊಂ
ಡೊಯ್ಯನೊಯ್ಯನೆಹುದ್ಯಯದಿಂದಪತ್ನಿಸಹಿತ ॥ ರಂನದೊಡವುಗಳಕ
ತ್ತರಿಯತಿಲಕದನೊಸಲ।ಮನ್ನೆಯರಗಡಣದಿಂದ್ವಿಜನಿಕರದಿಂದಸಂ।ಪಂ
ನದೀಕ್ಷೆಯೊಳೆಸೆವಭೂಪನಲ್ಲಿಗೆಬಂದುಸ್ವಸ್ತ್ಯಸ್ತುನಿನಗೆಂದನು॥೨೮॥ ಮ
ತ್ತೆಲೆಮಹೀಪಾಲಕಾರೂಢಲನಿನಗಾಗ। ಉತ್ತರೋತ್ತರವೆಂದುತನಗೆನೀಂ
ಬೇಡಿದುದ ।ನಿತ್ತಪೆಮಹಾದಾನಿಯೆಂದುಶಿಷ್ಯಂವೆರಸಿಬಂದೆನಾನೀಗನಿನ್ನ॥
ಉತ್ತಮಾಧ್ವರಶಾಲೆಗೆಂಬದ್ವಿಜನಂಕಂಡು । ಚಿತ್ತದೊಳ್ಬೆದರಿನೃಪನಿದಿರೆ
ದ್ದುಪದಕೆರಗಿ। ದತ್ತಾರ್ಘ್ಯಪಾದ್ಯಾಸನಂಗಳಿಂದುಪಚರಿಸಿಕುಳ್ಳಿರಿಸಿತಿಂತೆಂ
ದನು ॥೨೯॥ ಎಂದುಪರಿಯಂತಂದ್ವಿಜರ್ಗವಜ್ಞೆಯನೆಸಗ।ದಂದುಪರಿಯಂ
ತವೈಸಲೆನರರಬಾಳ್ಕೆನೀಂ। ಬಂದುಪರಸಿದೊಡಾದುದಿಂದುತ್ತರೋತ್ತರಂ
ತನಗೆನಿಶ್ಚಯಮಿಳೆಯೊಳು ॥ ಸಂಧಿಸದಜನದವಂದನೆಗೆಮೊದಲೇಸ್ವಸ್ತಿ ।
ಯೆಂದೊಡಾಭೂಸುರಂಪ್ರಿಯದೊಳಾಪಾಣಿಯಂ । ಕೊಂದನಲ್ಲದಚೇರೆ
ಶಾಪಮೇತಕೆವಿಪ್ರಸೇಳೆಂದೊಡಿಂತೆಂದನು ॥೩೦॥ಪರಸಲಾಗದುನಮಸ್ಕಾ
ರಕ್ಕೆಮುನ್ನಭೂ । ಸುರರನ್ಯರಂತನ್ನಸಂಕಟನಿಮಿತ್ತದಿಂ । ದರಸಂಗೆಬಿ
ನ್ನಪಂಗೈವನಾಶೀರ್ವಾದಮಂಮೊದಲೆಮಾಡದಿಹನೆ ॥ ಧರಣಿಪತಿವಂದ್ಯ
ನಲ್ಲವೆದೋಷಮೇನಿದಕೆ । ಪಿರಿದಾರ್ತನಾಗಿನಿನ್ನೆಡೆಗೆನಾಂಬಂದೆನ । ಧ್ವರ
ಶಾಲೆಗೆಂದುಕಪಟದ್ವಿಜಂನುಡಿಯಲ್ಕೆನರನಾಥನಿಂತೆಂದನು ॥೩೧॥ ದ್ವಿಜ
ತಿಲಕನೀನನುಗ್ರಹಿಸೆನಗೆಧನ್ಯನಾಂ । ನಿಜಶಿಷ್ಯನಂಕೂಡಿಕೊಂಡುಮಖ
ಮಂಟಪಕೆ। ಬಿಜಯಮಾಡಿದಕಜ್ಜಮಾವುದೇತರೊಳಾಶೆನಿನಗಾರ್ತಮೇ

ನಿದರೊಳು || ತ್ಯಜಿಸಬೇಡೊಂದನುಂಪೇಳ್ದೊಡಾನೀವೆನಾ | ರಜವಿಲ್ಲದೆ
ಲ್ಲಮಂವಾಳಿಸೆಂದಾಶಿಖಿ | ಧ್ವಜನಾಡಲಾವಿಪ್ರನಿಂತೆಂದುತನ್ನವೃತ್ತಾಂತ
ಮಂವಿವರಿಸಿದನು ||೩೦||ಉರ್ವೀಂದ್ರಕೇಳಾದೊಡಾಂಧರ್ಮಪುರದೊಳ್ಪೆ| ಸ
ರ್ವಚೆದಿಹೆಂಕೃಷ್ಣಶರ್ಮನೆಂದೆನಗೆಸುತ | ನೋರ್ವನುಂಟಾತನವಿವಾಹಕ್ಕೆ
ತವಪುರೋಹಿತಸತ್ಯಶೀಲನಲ್ಲಿ|| ಒರ್ವಕನ್ನಿಕೆಮದುವೆಗಿಹಳೆಂದೊಡಲ್ಲಿಗ |
ಕ್ಕುರ್ವರಸಿಮಗನೊಡಂಗೊಂಡುಬರುತಿರ್ದಂಪೊ | ದರ್ವರಿದಡವಿಯಪಥ
ದೊಳ್ಪಡಿದುದೊಂದುಕೇಸರಿತನ್ನ ನಂದನನನು ||೩೧|| ಆಸಿಂಗವುತಿಭರ
ದೊಳೆರಗಲಾಭೀತಿಗೆನ್ನ |ಕೇಸರಿಸ್ಮರಣೆಯುಂಬಿಡದೆನಾನಕಟಹಾ|ಹಾಸೂ
ನುಹಾಯೆಂದುಹಂಬಲಿಸಲದುತನ್ನಘೋರನಖದಂಷ್ಟ್ರದಿಂದ||ಘಾಸಿಮಾ
ಡದೆಪುತ್ರನಂಪಿಡಿದುಕೊಂಡಟ್ಟ | ಹಾಸದಿಂಮಾನವರತೆರದಿಂದನುಡಿದು
ದೆಲೆ | ಭೂಸುರೋತ್ತಮತನ್ನ ಮಾತನಾಲಿಸುಬರಿದೆಹಲುಬಲೇನಪ್ಪುದೆಂ
ದು ||೩೨|| ಮಕ್ಕಳಿಲ್ಲದವರ್ಗೆಲೋಕವಿಲ್ಲೆಂಬುದೇ | ನಕ್ಕಜವೆನಿಖಿಳನಿಗ
ಮಾರ್ಥಮಿದುತನಗೀಗ |ಸಿಕ್ಕಿದನಲಾನಿನ್ನತನುಸಂಭವಂಬಿಡಿಸಿಕೊಳಲಾ
ರ್ಪರಾರುಬರಿದೆ || ಕಕ್ಕುಲಿತೆಬೇಡನಡೆಶಿಷ್ಯನಂಕರಕೊಂಡು | ಮಿಕ್ಕಸುತ
ರುಳ್ಳೊಡಾರೈವುದೆನೆಮಗನವೋ| ಲಕ್ಕರಾವರಿಸಿಕಡುಶೋಕದಿಂದುಗ್ರಕೇಸ
ರಿಗೆತಾನಿಂತೆಂದನು ||೩೩|| ಅತಿವೃದ್ಧನಲ್ಪದಿನವಿರ್ಪವಂಪುತ್ರನ |ರ್ಜಿತ
ನಿನ್ನು ತಾನಿರ್ದುವಾಳ್ಪುದೇನೆನ್ನನಾ | ಹುತಿಗೊಂಡುತನಗೆಗತಿಕೊಡು
ವಸುತನಂಬಿಡುವುದೆಂದುನಾಂಬೇಡಿಕೊಳಲು || ಮೃತಿಯುಬಯಸುವೆದುಃ
ಖಿಗಾವಕಂಟಕವಿಲ್ಲ | ಹತವಹುದುಸುಖದಿಂದಬಾಳ್ವಂಗೆಕಾಲಕ | ಲ್ಪಿತ
ದಿಂದದೊರಕಿದನಿವಂನಿನ್ನ ನೊಲ್ಲೆನಾಂಪೋಗೆಂದುಹರಿನುಡಿದುದು ||೩೪||
ಆನುಡಿಗೆನಡುಗಿತನಯನವೋಲಣಾಶೆಯಿಂ | ದಾನೆಂದೆನಾಸಿಂಹಕೆಲೆಮೃ
ಗಾಧಿಪತನ್ನ | ಸೂನುವಂಕಾವರಿಲ್ಲವೆಧರೆಯೊಳುಗ್ರತಪದಾನಧರ್ಮಂಗ
ಳಿಂದ || ಏನುಪಾಯಂಗಯ್ವೆನೆಂದುಮರುಗಲ್ಕೆಪಂ | ಚಾನನಂಬಳಿಕತನೆ
ಗೊಂದಾಶೆಯಂಕೊಟ್ಟು| ಭೂನಾಥನಿನ್ನೆಡೆಗೆಕಳುಹಿದೊಡೆಬಂದೆನೆನಲ
ವನೀಶನಿಂತೆಂದನು ||೩೫|| ವಿಪ್ರೇಂದ್ರಕೇಳೆನ್ನರಾಷ್ಟ್ರದೊಳ್ನಾರಸಿಂ |ಹ
ಪ್ರವರ್ತಕಮಲ್ಲದೆಲ್ಲಿಯುಂಕ್ಷುದ್ರಸಿಂ| ಹಪ್ರಸಂಗವನರಿಯೆನಿನ್ನ ಗಂನಿನ್ನ
ಸುತನಂಪಿಡಿದಸಿಂಹವುಂಟೆ || ಅಪ್ರಸಿದ್ಧಪ್ರೋಕ್ತಮಿದುಸಿಂಹಕೆನ್ನಿಂದ|
ಹಪ್ರಯೋಜನಮದೇಂವೊಜದಂಜದೆತನಗೆ | ಕ್ಷಿಪ್ರದಿಂಪೇಳೆಂದುಭೂವ
ರಂಬಸಗೊಂಡೊಡಾಪಾರ್ವನಿಂತೆಂದನು |೩೬|| ಎನ್ನೊಳುಸಿಂಹವಾ
ಡಿದನುಡಿಯುನೀಗಳಾಂ |ನಿನ್ನೊಳೆಂಬುದುನೀತಿಯಾದಪ್ರದೆಸುತಹೀನ|ಮಿ

ನ್ನೀಸುದಾರುಣವ್ರೇಪ್ಸಿಳಿಬೇಕಾಗಿಹುದುನ್ನಪಕೇಳಿದರಪತಾತನು ||ಮುನ್ನ
ಮುದಿಗುಡುತರದಿಂದಣಾಗಿತಿದನೊಲ್ಲೆ | ಮುನಿಸುವೆನಾರ್ಪಡೀನುದುಯು
ಜ್ಞದಿಂದಸಂ | ಪಂನಫಲತೃಪ್ತನಾಗಿಹನುಯೂರಧ್ವಜನಪ್ಯೆಯೊಳರ್ಥ
ವನೆಂದುದು ||೩೯|| ಈಮಗನಮೇಲೆನಿನಗಾಶೆಯುಳ್ಳೊಡೆಬಿಡುವೆ | ಸಾವು
ಯೂರಧ್ವಜನದೇಹಾರ್ಧಮಂಕೊಂಡು | ಬಾಮಹೀಪಾಲನಲ್ಲಿಗೆಪೋಗು
ಕೊಲ್ಲೆನಾನನ್ನೆಗಂನಡೆಯೆನಲ್ಕೆ || ಭೂಮಿಪಾಶನಿತ್ತಪನೆತಂನತನುಭಾಗ
ಮಂ | ಭ್ರಾಮಕಮಿದೆಂದುಜರೆದಾಂತಿರಸ್ಕರಿಸೆಮ | ತ್ತೀಮಾತಸಾಡಿದುದು
ತಂನೊಳಾಕೇಸರಿನರೇಂದ್ರಕೇಳ್ಕೌತುಕವನು ||೪೦|| ಎಲೆಮರುಳೆವಿಪ್ರಪ
ರಪುರುಷಾರ್ಥಕೆಳಸುವಂ | ನೆಲದಮೇಲಣಬಾಳ್ಕೆಯುಂನಿಜಶರೀರಮುಂ |
ನೆಲೆಯೆಂದುನೋಡುವನೆಕವಚಮುಂಕರ್ಣಂದಧೀಚಿತನ್ನಸ್ಥಿಗಳನು ||ಒಲಿ
ದಿತ್ತುಕೀರ್ತಿಯುಂತಳೆದುದಿಲ್ಲವೆನಿನ್ನ | ಕುಲಮುಳಿಯಬೇಕೆಂದುಪೋಗಿನೀ
ಬೇಡಿದೊಡೆ | ಸಲೆಕರುಣದಿಂದಾಸ್ತ್ರಪಂಕಾಯಮುಂಕೊಯ್ದುಕೊಡದಿರಂ
ಪೋಗೆಂದುದು || ಸುತ್ಯಾಗಿಶುಚಿಶೂರನುಪಕಾರಿಕಮಲಾಕ್ಷ | ಭೃತ್ಯನೆನ
ಸೂಯುಂಕೃಪಾವನಧಿಭುವನಜನ | ನುತ್ಯಂಮಯೂರಧ್ವಜಂತನ್ನಜೀವ
ನವನಾದೊಡಂಬೇಡಿದರ್ಗೆ || ಅತ್ಯಂತಹರುಷದಿಂದಿತ್ತುಸತ್ಕೀರ್ತಿಯುನ | ನಿ
ತ್ಯಸಂಸಾರದೊಳ್ಪಡೆದಲ್ಲದಿರ್ದಪನೆ | ಸತ್ಯಮಿದುಪೋಗೆಂದುಸಿಂಹಮುಂ
ನಂಕಳುಹಿದೊಡೆನಿಂನೆಡೆಗೆಬಂದೆನು ||೪೧|| ರಾಯುನಾಂಮೂಢನಲ್ಲವೆಸ
ಕಲವೈಭವ | ಶ್ರೀಯುಕ್ತವಾಗಿರ್ದನಿನ್ನಘನಸೌಂದರ್ಯ | ಕಾಯಮುಂಕೊ
ಟ್ಟುತನ್ನಾತ್ಮಜಂಬದುಕಬೇಕೆಂದಸಿಂಹದಮಾತಿಗೆ || ವಾಯುದಿಂಬಂದೆನಿಲ್ಲಿ
ಗೆಸಾಕದಂತಿರಲಿ | ಪಾಯುಕೊಳಗಾಗಿರ್ದತನ್ನಸುತನುಳಿವುದಕು | ಪಾ
ಯುಮಂಕಾಣೆನೆಂದಾಕಪಟಭೂಸುರಂಸುಯ್ದುಮತ್ತಿಂತೆಂದನು || ೪೨ ||
ಭೂಸುರಂಬ್ರಹ್ಮಚರ್ಯದೊಳಿರ್ದಪುತ್ರಂಗ | ತಾಸುವಾದೊಡೆರಾಮಚಂ
ದ್ರಂಗೆಮೊರೆಯಿಟ್ಟೊ | ಸುತನಜೀವಮುಂಬರಿಸನೇಪಾರುಷದೊಳಾರಾಘ
ವೇಶ್ವರಂಗೆ || ಪಾಸಟಿಯಲಾನೀನುಮದರಿನೆನ್ನಾತ್ಮಜಂ | ಕೇಸರಿಯುಬಾ
ಯುತುತ್ತಾದನೀದುಃಖದಾ | ಯಾಸಮುಂನಿನಗೊರೆದೆನೀನುಳುಹುವಾಡೆಂ
ದುಕಪಟದ್ವಿಜಂನುಡಿದನು ||೪೩|| ಕೇಳ್ದನವನೀಶ್ವರಂಪ್ರಚ್ಛನ್ನಭೂಸು
ರಂ | ಪೇಳ್ದವೃತ್ತಾಂತಮುಂಕೀರ್ತಿನಿಲುವುದುನರರ | ಬಾಳ್ಕಟಮಿದಲ್ಲೆಂ
ದುನಿಶ್ಚೈಸಿವಿಪ್ರನಂಕರೆದುನಿನಗೀತನುವನು || ಸೀಳ್ದುಕೊಟ್ಟಪೆನೆಂದಭ
ಯವಿತ್ತುಬಳಿಕತಾ | ನಾಳ್ದಿಳೆಯುನಾತ್ಮಜಂಗೊಪ್ಪಿಸಲುಹರುಷಮುಂ | ತಾ
ಳ್ದಿನಿಬರೆಲ್ಲರಂಮಂಟಪದೊಳಿಹುದೆಂದುಕುಳ್ಳಿರಿಸಿಪೂರಮಟ್ಟನು ||೪೪|| ತ

ರಿಸಿಗಂಗಾತೋಯಮಂಮಜ್ಜನಂಗೈದು । ಪರಮಸಾಲಗ್ರಾಮತೀರ್ಥಮಂ
ಕೈಕೊಂಡು ।ತರುಣತುಲಸಿಯಮಾಲೆಯಂಕಂಧರದೊಳಾಂತುಯಾಗಮಂ
ಟಪಕೆಬಂದು ॥ ನೆರೆದಭೂಸುರಸಭೆಗೆಸಾಷ್ಟಾಂಗದಿಂದೆರಗಿ । ಕರಯುಗ
ಳಮಂಮುಗಿದುನಿಂದುಬಿನ್ನೈಸಿದಂ। ಧರಣೀಶ್ವರಾಗ್ರಣಿಮಯೂರಧ್ವಜಂ
ಜನಾಧೀಶಕೇಳ್ಕೌತುಕವನು ॥೪೬॥ ಈಮಹಾಸ್ಥಾನದೊಳ್ನೆರೆದಖಿಳಭೂ
ಸುರ । ಸ್ತೋಮಂನಿರೀಕ್ಷಿಸುವುದೆಂದುಬಲಿಯಧ್ವರಕೆ। ವಾಮನಂಬಂದಂ
ತೆತನ್ನಮುಖಕಿದ್ವಿಜಂತಾನೆಬಿಜಯಂಗೈದನು ॥ ಶ್ರೀಮಾಧವಸ್ವರೂಪ
ದೊಳದರಿಸೀಗತ ।ನ್ನೀಮೈಯೊಳರ್ಧಮಂಕೊಯಿದುಕೊಟ್ಟಪೆನತಿ।ಪ್ರೇ
ಮದಿಂದೀತಂಗೆಬದುಕಲೀತನಸುತಂಪ್ರೊಸತಾಗಲಿಳೆಗೆಂದನು॥೪೭॥ ಭೂನಾ
ಥನೆಂದಮಾತಂಕೇಳ್ದುಸಕಲಪ್ರ । ಧಾನಿಗಳುಮರಸನಪುರೋಹಿತಮಹಾ
ದ್ವಿಜರಿ।ದೇನಿದೆತ್ತಣಕೃತ್ಯಮೀವಿಪ್ರನಂತಕೋಪಮನೆಂದುಭೀತಿಯಿಂದ॥
ದಾನಮಂದೊಡೆರಾಜ್ಯಲಕ್ಷ್ಮಿಧನಕನಕಮಣಿ ।ಧೇನುಗಳನೀವರೀಕಾಯ
ಮಂಕೊಯ್ದುಕೊಡು । ವೀನಿಮಿತ್ತವನರಿಯೆವೆಂದೆಲ್ಲರುಂಕಂಪಿಸಲ್ನೃಪ
ತಿಇಂತೆಂದನು ॥೪೮॥ ಯಾಚಿಸಿದನಂಗಮಂಸುತನನುಳುಹೆಂದೆನಗೆ। ಸೂ
ಚಿಸಿದನೀವಿಪ್ರತಾಂಕೊಡುವೆನೆಂದೊಡನೆ ।ವಾಚಿಸಿದನಿಂತಿದಕೆತಪ್ಪಿದೊ
ಡೆಲೋಕದೊಳ್ತನ್ನಂಸಮಸ್ತಜನರು ॥ ನಾಚಿಸದೆಮಾಣ್ದುಪರೆಪುಸಿದೊ
ಡಂತಕನವ । ರ್ಪಾಚಿಸರೆನರಕದೊಳ್ಮೃಯ್ಯನರಿದೀಯಲಾ । ಲೋಚಿಸ
ಲದೇಕಿನ್ನುತೊಲಗಿನೀವೆಂದುನೃಪನನಿಬರಂಸ್ಥೈಪಿಟ್ಟನು ... ॥೪೯॥
ಆಮಯೂರಧ್ವಜಂಬಳಿಕಲ್ಲಿವಿಪ್ರರ್ಗೆ । ಹೇಮಮಣಿಗವತುರಗವಸ್ತ್ರ
ಭೂಷಣಧೇನು । ಭೂಮಿದಾನಂಗಳಂಪಣಿಸಿನೆಡೆಸಿದನೆರಡುಕಂಭಮಂನೆ
ಡುವೆತನ್ನ ॥ ಕೋಮಲಶರೀರಮಂಪೊಗಿಸಿಕಾಂಚನಮಯಸು । ದಾಮ
ದಿಂತೋಳ್ತೊಡೆಗಳಂಬಿಗಿಸಿಕೊಂಡುನಿಂ । ದಾಮಹೀಸುರನಪದಕಮಲಂ
ಗಳಂತೊಳೆದುಸಾದರದೊಳಿಂತೆಂದನು ॥೫೦॥ ಭೂಸುರೋತ್ತಮನಿನಗೆ
ತಾಂಕೊಡುವದೇಹಾರ್ಧ । ಮೀಸುದಾನದೊಳಧಿಕಯಜ್ಞನಾಯಕನಾದ
ವಾಸುದೇವಂಪ್ರೀತನಾಗಲಸ್ಮತ್ಕುಲೋದವರಾದಜೀವಿಗಳೊಳು ॥ ಲೇಸಿಂ
ದಪೂರ್ವರ್ಗೆತನುಧನವನೀವಡೆಯೊ । ಳೋಸರಿಸದಿರಲಿಬುದ್ಧಿಗಳೆಂದು
ನೃಪತಿಕ । ಟ್ಟಾಸುರದಕೊಯ್ಗಾರರಂಕರೆಸಿತೆಗಿಸಿದಂಮಸದಕೈಗತ್ತಿಗಳ
ನು ॥೫೧॥ ಕೊಡುವನಿರೆತನಗೆಬೇಕಾದುದಂಬೇಡುವಂ । ಬಿಡುವನೇಬೇ
ಡುವಂಬರೆತನೆನ್ನಳಿದುರ್ಗದಂ । ತಡೆದಪನೆಕೊಡುವವಂಕೊಡುವಬೇಡು
ವರೊಳಗೆಕೊಡೆನೆಂಬಬೇಡೆನೆಂಬ ॥ ಎಡೆಕಡೆಗಳಿಲ್ಲೆಂಬನಾಣ್ನುಡಿಯನೀ

ಪಾರ್ಸ | ಪೊಡವೀಶರೊಳ್ಕಂಡೆವೆಂದುನಡನಡುಗಿವೊರೆ |ಯಿಡುತಿರ್ದು
ದವನರಾಷ್ಟ್ರದಜನಂಬೆದರಿಕೂಡಿದಗಣಂಗಳತೆರದೊಳು ॥೫೨॥ ಪೂರ್ವ
ಮಂನೆನೆದುಕಂಬನಿಗಳಿಂಧ್ವನಿಗಳಿಂ | ಜೀರ್ವರಂಪ್ರಜೆಗಳಂಪಾಲಿಸದೆಲಾ
ಲಿಸದೆ|ಜಾರ್ವಪರಿಯೆಂತೆಂದಳಲ್ವರಂನಿಲ್ವರಂಬೆರಗಾಗಿಬೆಗಡುಗೊಂಡು॥
ಸಾರ್ವಭೌಮಕನಿಂನರಕ್ಷೆಯಂಶಿಕ್ಷೆಯಂ|ಮಿಾರ್ವರಲ್ಲೆಂಮನೀಂಬಿಡುವಲ್ಲೋ
ಕೊಡುವರೇ |ಪಾರ್ವಂಗೆಸುವನೆಂದುಬೈವರಂಸುಬ್ವರಂನೋಡಿನೃಪನಿಂ
ತೆಂದನು॥೫೩॥ ಪ್ರಜೆಗಳಿರನೀವಿದಕೆದುಃಖಿಪರೆಥನ್ಯನಾಂ|ನಿಜಶರೀರದೊ
ಳರ್ಧಮಂಕೊಯ್ದುಕೊಡುವನೀ | ದ್ವಿಜನಹಸ್ತದೊಳಿವಂನೃಹರಿಯೆಂದೀ
ತನೆಡವಿಯುಸಿಹ್ಮಕೀಽಯುಲಿದನು ॥ ಗಜಬಜವಿದೇತಕೆಪರೋಪಕೃತಿಗಲ್ಲದ
ವಪು | ನುಜನಬಾಳ್ಕೆಯುಸಣಬುರಿದಬೂದಿಯುಪ್ಪುದಾ | ರಜವಿಲ್ಲದೀ
ಕ್ಷಿಪುದುಕೌತುಕವನೆಂದೊಡಂಬಡಿಸಿದಂನರನಾಥನು ॥೫೪॥ಮತ್ತೆಮನು
ಜೇಂದ್ರನಾವಿಪ್ರನಂಕರೆದುನಿನ |ಗಿತ್ತೆನೀದೇಹಾರ್ಥಮಂಪರಿಗ್ರಹಿಸೆಂದು|
ಚಿತ್ತದೊಳ್ಮಿಗೆಹರುಷಮಂತಾಳ್ದುಪೊರೆಯೊಳಿಹಸೂದಕರ್ಮಜ್ಞರೊ
ಡನೆ॥ ಪೊತ್ತುಗಳೆಯದೆತನ್ನತನುವನೆರಡಾಗಿಮುಸೆ | ವೆತ್ತಕರಪತ್ರತಿಂಸೀ
ಳ್ವುದೆಂದಾಜ್ಞಾಪಿ | ಸುತ್ತಿರೆಶಿಖಿಧ್ವಜನಸತಿಕುಮುದ್ವತಿನುಡಿದಳತಿವಿನಯ
ದಿಂದಪತಿಗೆ ॥೫೫॥ ನೀಂತಿಳಿದುದಿಲ್ಲರಸವಿಪ್ರೇಂದ್ರನರಿಯಂವ | ನಾಂತರ
ದೊಳಾಸಿಂಹಮೆಂದನುಡಿಶಾಸ್ತ್ರ್ರಿಸಿ | ದಾಢಂತಮಂಗನೆಪುರುಷನರ್ಧಾಂಗ
ಮೆಂಬುದಕೆನಿನ್ನವಾಮಾಂಗಿಯಾದ ॥ ಕಾಂತೆಯಂಬೇಡಿದೊಡೆಕೊಯ್ದು
ಕಾಯುವನೀವ|ಭ್ರಾಂತಿಯೇತಕೆತನ್ನಯಸುವೆರಸಿಕೊಟ್ಟುಕಳೆ|ತಾಂತಳವೆ
ನ್ನೈದೆತನದಿಂದಸದ್ಗತಿಯನೆಂದಾಕುಮುದ್ವತಿನುಡಿದಳು ॥೫೬॥ಸಮ್ಮತಮಿ
ದಹುದೆಂದರೆಲ್ಲರುಂಭೂವರಂ | ಸುಮ್ಮನಿರೆಕಂಡನೀತೆಗನಂದ್ವಿಜೋತ್ತ
ಮಂ | ನೆಮ್ಮಿದಮುಕುಂದನೆಲೆರಾಯನಿಂನರಸಿನುಡಿದುತ್ತರವನೊಪ್ಪಬ
ಹುದೆ|ಸುಮ್ಮಾನದಿಂಜನೇಶ್ವರನದಕ್ಷಿಣಭಾಗ|ಮಂಮೆಲ್ವೆನೆಂದುವೀಕ್ಷಣಿ
ಸಿತಲ್ಲದೆಸಿಹ್ಮ|ವೆಮ್ಮೊಡನೆವಾಮಾಂಗವೆಂದಾಡಿತಿಲ್ಲೆನಲ್ನೃಪನಸುತನಿಂ
ತೆಂದನು ॥೫೭॥ಕರುಣಿಸೆಲೆವಿಪ್ರನಿನ್ನಂಬೇಡಿಕೊಂಬೆನಾಂ|ತರುಣಂಸುಪು
ಷ್ಟಿವಪುತುಷ್ಟಿಮೃಗಪತಿಗಾಗ|ದಿರದುತಾತನಖುಣತ್ರಯಕೆಪರಿವಹುದು
ರಾಘವಭೀಷ್ಮರಂತೆಕೀರ್ತಿ॥ಸ್ಥಿರವಹುದುಪಿತನಭಾಷಗೆನಿಲಲ್ಜನಕನವ |
ತರಿಪನಾತ್ಮಜನಾಗಿತಂದೆಮಕ್ಕಳಿವರೊಳ | ಗೆರವಿಲ್ಲತನ್ನಂಗಮಂತೆಗೆದು
ಕೊಳ್ಳೆಂದುತಾಮ್ರಧ್ವಜಂನುಡಿದನು ॥೫೮॥ ಭೂಪಾಲಕೇಳವನಮಾತಿಗೆ
ಮಹೀಸುರಂ|ಕಾಪಟ್ಯಮಿಲ್ಲೆಲೆಕುಮಾರನೀನೆಂದನುಡಿ | ಪಾಪಿಕೇಸರಿತಂ

ನೊಳವನಿಪನಸತಿಯೆಂದುಸುತನೆಂದುಪೇಳ್ದುದಿಲ್ಲ ॥ ಆಪಡೆಮೆಯೂರ
ಧ್ವಜನದಕ್ಷಿಣಾಂಗಮಂ। ಶಾಪುತ್ರನಂಬಿಡುವನೆಂದೊಡಿಲ್ಲಿಗೆಬಂದೆ। ನೀಪ
ರಿಯೊಳಳುಕುವರೆಕೊಡಬೇಡಪೋಪೆನೆನೆನರನಾಥನಿಂತೆಂದನು।೫೯॥ರಾ
ಣಿಯುಂಕೊಡುವುದಿಲ್ಲಾತ್ಮಜನನೀನ್ವುದಿ। ಉಲ್ಲಣಿಯುಂತನ್ನಭಾಷೆಗೆಬಾರ
ದಂತಬ್ಜ।ಪಾಣಿಮುಚ್ಚಿಹ್ವೊಲರ್ಧದೇಹಮಂಕೊಯ್ದುಕೊಟ್ಟಪೆನೀಗಸೈರಿ
ಸೆನುತ॥ ಸಾಣೆವಿಡಿದಿರ್ದಕರಪತ್ರಮಂಕೊಡಿಸಿದಂ। ಪ್ರಾಣಸಾಥೆಯುಕೈ
ಯೊಳೆನ್ನುತ್ತಮಾಂಗಮಂ। ಕೇಣಮಿಲ್ಲದೆತನುಜನಂಕೂಡಿಕೊಂಡುನೀಸೀ
ಳೆಂದುನೇಮಿಸಿದನು ॥೬೦॥ ಬಾಲಲೀಲೆಗಳಿಂದನಂದನಂತರುಣಿರತಿ। ಕಾಲ
ದೊಳ್ಪುಳಿದಿಂಗಸೀಳಲ್ಕೆನೋನ್ವುದೆವಿ। ಶಾಲಾಕ್ರಿತನಗಿದುವಿನೋದಮೆಸಿಪ
ತ್ರದಿಂಸೂನುಸಹಿತೀಗನೀನು ॥ ಆಲಸ್ಯಮಂಮಾಡದರಿವುದೀಸಮಸ್ತಕದ
ಮೇಲಣಿಂದಿಳೆಯುಮುಂತಾಗಿತನ್ನಂಗಮಂ। ಪಾಲೆರಡುಸಮಮಾಗೆಗರುಡ
ಹನುಮಂತರ್ಗೆಚಕ್ರಿಪಣ್ಬಾಂಚಿದಂತೆ ॥೬೧॥ ಆಮಹೀಪಾಲನೀತೆರದೊ
ಳ್ಕುಮುದ್ವತಿಗೆ। ನೇಮಿಸೆಕುಮಾರನಂಕೂಡಿಕೊಂಡವಳತಿ। ಪ್ರೇಮದಿಂಕ
ರಪತ್ರಮಂಕೊಂಡುಮುನ್ನದೈತ್ಯನನಿಂತುಸೀಳ್ದನೆಂದು ॥ ಆಮಹಾಸಭೆ
ನಾರಸಿಹ್ಮನಂನೆನೆವಂತೆ। ರಾಮರಾಮೆಂದುಜಪಿಸುತಕೊಯ್ವಳವನಿಪಶಿ।
ರೋಮಣಿಯುಮಸ್ತಕವನೆರಡಾಗಿಸರಿಸದಿಂದೋರೆಪೋರೆಗಳಿಲ್ಲದೆ ॥೬೨॥
ಸ್ತಂಭದ್ವಯದನಡುವನಿಂದನೃಪನಂತನ್ನ। ಸಂಭವಂಮಡದಿಪಿಡಿದೊಬ್ಬ
ರೊಂದೊಂದುಕಡೆ। ಯಿಂಭಾಳಮಧ್ಯಮಂತೀಕ್ಷ್ಣಕರಪತ್ರದಿಂಘರಿಘರಿಸೆ
ಸೀಳುತಿರಲು ॥ ಜಂಭರಿಪುನಂದನಮುರಾರಿಗಳ್ಬೆರಗಾದ। ರಂಭೋದಿಘೋ
ಷದಿಂದೆದ್ದುಹಾಹಾಕಾರ । ದಿಂಭಯಂಗೊಂಡೊರಲುತಿರ್ದದಾಸ್ಥಾನ
ದೊಳ್ಭೂಪಕೇಳ್ಕೌತುಕವನು ॥೬೩॥ ಪೆಂಡತಿಯೊಳಾತ್ಮಜನೊಳರಸ
ನೊಳ್ಮಿಗೆನೋಡಿ। ಕಂಡುದಿಲ್ಲೊಂದಿನಿಸುಭಯಕೋಡಿಯುಂಬಳಿಕ। ಪುಂ
ಡರೀಕಾಂಬಕಂನೃಪನವಾಮಾಕ್ಷಿಯೊಳ್ಕಂಬನಿಗಳೊಸರುತಿರಲು ॥ ಅಂ
ಡಲೆದುಮಳುತಳುತಕೊಡುವವನದಾನಮಂ । ಕೊಂಡಪರೆಬುಧರಕಟ
ಲೋಕದೊಳ್ಬೀಡುವಂ। ಭಂಡನೆನುತೊಡೆಮುರಿದುತಿರುಗಿದಂತನಯಸಂ
ತಿನಲಿಕರಿಬನದೊಳೆನುತ ॥೬೪॥ ಚಿರಗಾದಳಾಕುಮುದ್ವತಿನುಡಿದಳರಸಂ
ಗೆ। ಬರಿದೆಕೊಯಿಸಿದೆನಿನ್ನಮಸ್ತಕವನೆಪಗಂಣೊ। ಳೊರವಕಂಬನಿಗಳಂ
ಕಂಡಾದ್ವಿಜೋತ್ತಮಂನೀನಳುತಕೊಡುವೆಯೆಂದು॥ ಪೊರಮಟ್ಟುಪೋದ
ನೊಲ್ಲದೆವಿಫಲಮಾದುದ। ಕ್ಕರೊಳಿತ್ತದಾನಮಿದಕೆಂತೆನಲ್ಭೂವರಂ। ಮ
ರುಗಿಕರೆಸಾತನಂತಿಳುಪುವೆಂಪ್ರೋಳ್ಗೆರಡಂಕೂಡಿಪಿಡಿಯೆಂವನು ॥೬೫॥

ಬಳಿಕಾಕುಮುದ್ವತಿನರೇಂದ್ರಮಸ್ತಕದಪೋ। ಳ್ಗಳನೊಂದುಗೂಡಿಪಿಡಿದಾ
ಗನಿಹತನಯನಂ । ಕಳುಹಲವನಾಪಾರ್ಥನಂತಡೆದೊಡಂಬಡಿಸಿವಿನಯದಿಂ
ಕರೆತರಲ್ಕೆ ॥ ತಿಳುಪಿದಂಭೂಪನೆಲೆವಿಪ್ರಕರಧಪತ್ರಹತಿ। ಗಳುಕಿದಲ್ಲುಪಕಾ
ರಕಾಯ್ತು ದಕ್ಷಿಣಭಾಗ । ಮುಳಿದದುನಿರರ್ಥಕಕೆವಾಮಾಂಗವೆಂದೊಸಂ
ತೆಡಗಣ್ಣಪೀವೊಂದನು ॥೬೬॥ ಮೆಚ್ಚಿದಂನೃಪನೆಂದವಾತಿಗೆಮುರಧ್ವಂ
ಸಿ। ಹೆಚ್ಚಿದರ್ಪರಾಯನಕಳೇಬರದಪೋಳ್ಗಳಂ । ಬೆಚ್ಚಿ ಕಾರುಣ್ಯದಿಂಮೃದ
ಡವಿತಕ್ಕೈಸಿನಿನ್ನಂಪರೀಕ್ಷಿಸಿದೆನು॥ನಿಚ್ಚಟದಭಕ್ತಿಯಂಕಂಡೆನಿವನರ್ಜು
ನಂ। ಮುಚ್ಚಿ ಮರೆಯೇಕಿನ್ನುತಾನೀಗಕೃಷ್ಣನೆಂ । ದೆಚ್ಚರಿಸಿನಿಗಮದರಿಕೆ
ಯತನ್ನಸಾಕಾರಮೂರ್ತಿಯಂತೋರಿಸಿದನು ॥೬೭॥ ವರಸುಪ್ರಸನ್ನವ
ದನವಿಕಮಲನೇತ್ರದಮ। ಕರಕುಂಡಲದಲಲಿತನಾಸಿಕದಪಣೆಯಕ। ಸ್ತೂರಿ
ಯತಿಲಕದಮುರಿದಪುರ್ಬುಗಳಸುಳಿಗುರುಳಮಣಿಮಕುಟದಳಿತುಲಸಿಯ॥
ಕೊರಳವನಮಾಲೆಗಳಕೌಸ್ತುಭದಶ್ರೀವತ್ಸ। ದುರದಚಂದನದನಳಿತೋಳ್ಗ
ಳಘನಾಂಗಸೌಂ। ದರಿಯುದವಯುವದಸರ್ವಾಭರಣಭೂಷಿತದಹರಿನೃಪನ
ಮುಂದೆಸೆದನು ॥೬೮॥ ಹೇಮಾಂಬರದಲಲಿತಕಾಂತಿಹೊಳಹೊಳೆವಸೌ।
ದಾಮಿನಿಯೊಲಿರೆಯೊಸರ್ವಕರುಣಾರಸನೃಸುಧಾ। ರಾಮಯುದಮಳೆಯೊ
ಲಿರೆನುಡಿವಗಂಭೀರವಾಕ್ಯಂಕೊಡೆಮೊಳಗುವೊಲೆರ ॥ ಕೋಮಲಶ್ಯಾಮ
ಲಾವಣ್ಯತನುಮುಂಗಾರೆ। ಜೀಮೂತದೊಡ್ಡೋಲಿರೆನಲಿಯುದಿರ್ದಪನೆಬಳಿ।
ಕಾಮಯೂರಧ್ವಜಂಪೇಳೆನಲ್ಕೃಷ್ಣನಂಕಂಡುಪುಳಕಿತನಾದನು॥೬೯॥
ಜಯಜಯಜಗನ್ನಾಥವರಸುಪರ್ಣವರೂಥ । ಜಯಜಯರಮಾಕಾಂತಶ
ಮಿತದುರಿತಧ್ವಾಂತ। ಜಯಜಯಸುರಾಧೀಶನಿಗಮನಿರ್ಮಲಕೋಟಿಕೋಟಿ
ಸೂರ್ಯಪ್ರಕಾಶ॥ಜಯಜಯಕ್ರತುಪಾಲತರುಣತುಲಸೀಮಾಲ। ಜಯಜ
ಯಷ್ಮಾಪೇಂದ್ರಸಕಲಸದ್ಗುಣಸಾಂದ್ರ । ಜಯಜಯತುಯದುರಾಜಭಕ್ತ
ಸುಮನೋಭೂಜಜಯಜಯತುಯೆನುತಿರ್ದನು ॥೭೦॥ ನೋಡಿದಂಕಣ್ದ
ಣಿಯೆಬಳಿಕಿಳೆಗೆತನುವನೀ। ಡಾಡಿದಂಡಪ್ರಣಾಮಂಗೈದುಭೂವರಂ। ಮಾಡಿ
ದಂನಿಗಮಾರ್ಥದನುಪಮಸ್ತುತಿಗಳಂಮುರಹರನಮುಂದೆನಿಂದು ॥ ಕೂಡೆ
ತಾಮ್ರಧ್ವಜಕುಮುದ್ವತಿಗಳೆರಗಿದ । ಮೂರ್ಡಿದಾನಂದದಿಂತಮತಮಗೆ
ಕೈಮುಗಿದು । ಬೇಡಿಕೊಳುತಿರ್ದುದುಮಹಾಸಭೆಮುಕುಂದನಂಜಯಜ
ಯನಿನಾದದಿಂದ ॥೭೧॥ ಪನ್ನಗಾರಿಧ್ವಜಂಬಳಿಕಾನೃಪಾಲನಂ । ಮನ್ನಿ
ಸಿಕೃತಾರ್ಥನಹೆನೀನರ್ಧದೇಹವುಂ। ನನ್ನಿಯಿಂದೀಯೆಮೆಚ್ಚಿದೆನಿನಗೆಸಮ
ರದೊಳ್ತವಸೂನುತಾಪ್ರಕೇತು ॥ ನಿನ್ನಪಡೆಯಲ್ಲಮನುವೀಸವ್ಯಸಾಚಿ

ಯನು।ಮನ್ನನುಂಮೂರ್ಛೆಗೊಣಿಸಿಕೆಡಹಿಬಂದುದಕೆ। ಮನ್ನಹರುಷಿತ
ನಾದೆನಿನ್ನ ಸತಿಸುತರೊಡನೆಮಾಡುಯಜ್ಞವೆನೆಂದನು ॥೨೨॥ ಧರ್ಮಜ
ನತುರಗಮಿದೆನಿನ್ನಹಯಮಿದೆನೀನೆ। ನಿರ್ಮಲಾಧ್ವರಮೆರಡನುಂಸಮಯ
ಮಾಗಲ್ಕೆ । ಕರ್ಮಕಧಿಪತಿಯಾಗಿಮಾಳ್ಪುದೆಂದಚ್ಯುತಂನುಡಿದೊಡೆಮ
ಯೂರಕೇತು ॥ ಚರ್ಮಶೃಂಗಮನಾಂತುಮಖದೀಕ್ಷೆಯಂಕೊಂಬ । ದು
ರ್ಮತಿಗಳುಂಟೆನಿನ್ನಂಕಂಡಬಳಿಕದರ। ಮರ್ಮಮಂಬಲ್ಲೆನಾನೆಲೆದೇವತ
ನ್ನಬಿನ್ನಪವನವಧರಿಸೆಂದನು ।೨೩॥ ವಿಶ್ವೇಶನಿನ್ನಶಾಶ್ವತಮೂರ್ತಿಯಂ
ತಳೆವ। ವಿಶ್ವಾಸದಿಂದನಿನಗೊಪ್ಪಿಸಿದೆನೀಗಳೀ । ನಶ್ವರಶರೀರಮಂಸಾಕ
ದಂತಿರಲಿನ್ನುತಾಂಕರ್ಮಕರ್ತೃವಾಗಿ॥ ಅಶ್ವಮೇಧಂಗಳಂಮಾಡಿದೊಡನ
ಗದೆನಿಂ।ನುಶ್ವಾಸದಿಂದೊಗೆದಮಂತ್ರಾದಿಗಳ್ಮಾತ ।ವಿಶ್ವಮಿತ್ರಜಮ್ಮಾಲೆಪೂ
ರೆಯೊಳಿರೆಭೇಷಜವನರಸುವರೆಹಿಮಕೆಂದನು ।೨೪॥ ದೇವಕಿತ್ತೈಸನ್ನ
ನಂದನಂನಿನ್ನ ಸಮ।ರಾವನಿಯೊಳಗಾದನಿವ್ಯಾರ್ಮರ್ಪರಂಬಿಟ್ಟ । ಭಾವದಿಂ
ಬಂದನಿಲ್ಲಿಗೆತನ್ನಪುಣ್ಯಾದಿಂತನಗನುಗ್ರಹಿಸಲೆಂದು ॥ ನೀವಬಿಜಯಂಗೈದಿ
ರದರಿಂದಸಲೆಧನ್ಯ।ರಾವುನರನಾರಾಯಣರ್ಕಳಂಕಂಡೆವಿ॥ನ್ನಾವಕಲ್ಪಿತವೆ
ನಗೆಧರ್ಮಜಂಮಾಡಿಬದುಕಲಿಮಖಂಗಳನೆಂದನು ॥೨೫॥ ಸುರನದಿಯ
ತೋಯಮಿರೆನೀರಡಸಿಹಿಮಜಲಕೆ । ಪರಿವಂತೆನಿನ್ನದರುಶನಮಿರ್ದುಮ
ಹಾ। ಧ್ವರಕೆಳಸುವವನಲ್ಲತನ್ನನುಂತನ್ನಸತಿಸುತರನುಂತನ್ನೊಳಿರ್ದ ॥
ತುರಗಂಗಳಂತನ್ನಯಜ್ಞಮಂಯಜ್ಞೋಪ।ಕರಣಂಗಳಂತನ್ನರಾಜ್ಯಮಂ
ತನ್ನಮಂ । ದಿರದಸರ್ವಸ್ವಮಂನಿನ್ನಪದಕರ್ಪಿಸಿದೆನೆಂದವಂಕೈಮುಗಿದ
ನು ॥೨೬॥ ಇಂತೆಂದುಭೂವರಂನುಡಿಯೆಹರುಷಿತನಾಗಿ। ಕುಂತೀಸುತಂಗ
ವನಭಕ್ತಿಯಂತೋರಿಸುತ । ನಂತರದೊಳಾನೃಪನನಗರದೋಳ್ಮರುದಿ
ನಮಿರ್ದುನಿಜಸೇನೆಬರಲು॥ದಂತಿಪುರಕಲ್ಲಿಯಸಮಸ್ತವಸ್ತುಗಳೈದು ।ವಂ
ತೆನೇಮಿಸಿಮಯೂರಧ್ವಜಂಸಹಿತನಡೆ । ದಂತುರಗಮೆರಡನುಂಬಿಡಿಸಿ
ಮುಂದಕೆದೇವಪುರದಲಕ್ಷ್ಮೀಕಾಂತನು ॥ ... ॥೨೭॥

ಸಂಧಿ ೨೬ಕ್ಕೆ ಪದ್ಯ ೧೪೪೯ಕ್ಕೆ ಮಂಗಳಮಸ್ತು.

## ಇಪ್ಪತ್ತೇಳನೆಯ ಸಂಧಿ.

ಸೂಚನೆ॥ ಹರಿಗಳಂತಡೆಯಲ್ಕೆಸಾರಸ್ವತಾಖ್ಯಪುರ। ವರ
ದೊಳಂತಕನವೃತ್ತಾಂತಮಂಕೇಳ್ದು ಸಂ।ಗರದೊಳಚ್ಯುತನಮ
ತದಿಂವೀರವರ್ಮನಂಜಯಿಸಿದಂಕಲಿಪಾರ್ಥನು ॥

ಸೋಮಕುಲತಿಲಕಜನಮೇಜಯನರೇಂದ್ರಕೇ ।ಳಾಮಯೂರಧ್ವಜಾ

ತನ್ನನಗರದೊಳತಿ ।ಪ್ರೇಮದಿಂಮೂರುದಿನಮಿರ್ದ್ದುನಮುರಾರಿಗಳನಿರಿಸಿ
ಕೊಂಡಿರ್ದಬಳಿಕ ॥ ಭೀಮಾನುಜನಕೂಡೆಪೊರಮಟ್ಟನನುಸಾಲ್ವ । ಕಾ
ಮಕರ್ನಜಬಭ್ರುವಾಹನನುಮೇಗನಿ । ಸ್ಸೀಮನೀಲಧ್ವಜಮುರಾಳಧ್ವಜಾದಿ
ಗಳ್ವೆಡೆವೆರಸಿನಡೆದರೊಪನೆ ॥೧॥ ತುಂಬಿತುಮಹೀಮಂಡಲವನತುಲಸೇನೆ
ನಡೆ । ಗೊಂಬುದಿನ್ನೆಲ್ಲಿಗೆಮಹಾದೇವಕೌತುಕಮಿ ।ದೆಂಬತೆರನಾಗೆನುಂ
ದಕೆತಳೆವಕುದುರೆಗಳಜೂಡೆಸಾರಾಷ್ಟ್ರಕಾಗಿ ॥ ಬೆಂಬಿಡದೆಬಂದುದ
ರ್ಜುನನಬಲಮಲ್ಲಿ ಸುಖ।ದಿಂಬಾಳ್ವಭೂವರಂವೀರವರ್ಮಂಜನಾ। ಡಂಬ
ರದೊಳಿರ್ದಪಂಸಾರಸ್ವತಾಖ್ಯನಗರದೊಳತಿವಿಲಾಸದಿಂದ ॥೨॥ ನೆರೆನಾ
ಲ್ಕುಚರಣದಿಂಧರ್ಮಮಡಿಯಿಡುತಿರ್ಪುದು। ಮರೆದುಕನಸಿನೊಳಾದೊಡಂ
ಪಾತಕದಕೃತ್ಯ। ಕೆರಗುವರಿಲ್ಲಪುರುಷಸ್ತ್ರೀಕದಂಬದೊಳ್ವ್ಯಾಧಿಗಳಪೀ
ಡೆಗಳನು ॥ ಅರಿಯರಾರುಂದುಃಖಶೋಕಸಂತಾಪದಿಂ । ಮರುಗುವವರಂ
ಕಾಣೆನಾನೃಪನರಾಷ್ಟ್ರದೊಳ್ । ಸ್ಥಿರೆಯಾಗಿವೈವಸ್ವತಂಮನೆಯಳಿಯುತನ
ದೊಳಿರುತಿರ್ಪಂಭೂವರಂಗೆ ॥೩॥ ಆವೀರವರ್ಮನೀಪಾಂಡವನಕುದುರೆಗ ।
ಳ್ಕಾವಪಡೆಸಹಿತನಿಜರಾಷ್ಟ್ರಕೈತಂದನೆಂ।ಬೀವಾರ್ತೆಯಂಕೇಳ್ದುನಗುತ
ಖತಿಗೊಂಡುಕೃಷ್ಣಾರ್ಜುನರಸಾಹಸವನು ॥ ನಾವರಿದುಕೊಂಬೆವಶ್ವಂ
ಗಳಂಕಟ್ಟುವುದು।ನೀವೆಂದುಕಳುಪಲಾನೃಪನಪರಿವಾರಂಮ। ಹಾವಿಭವ
ದಿಂದಕರಿತುರಗರಥಪಾಯದಳವೊತ್ತರಿಸಿಪೊರಮಟ್ಟುದು ॥೪॥ ಸುಲಭ
ನೆಂದನುಪಮಸುಲೋಭನೆಂದುನ್ನತಕು ।ವಲನೆಂದುನೀಲನೆಂದಗ್ಗದಸರ
ಳನೆಂದು। ಬಲವಂತರಿವರ್ವೈವರಾನೃಪನಸೂನುಗಳ್ಪೊರಮಟ್ಟುಸೇನೆಸಹಿ
ತ ॥ ಕೆಲವರಿದಡರ್ದುಕೈದುಡುಕಿತುಸಮಾತ್ರನೆನೆ।ಫಲುಗುಣನತುರಗಂ
ಗಳಂತಂದುನಿಮಿಷದೊಳ್।ಕ್ಕಿಲಿಸಿದರ್ಪಿತನನಸನ್ನಿಧಿಯೊಳದನರ್ಜುನನಪ
ಡೆಕಂಡುಕವಿದುದೊಡನೆ ॥೫॥ ಮೋಹರದನಡುವೆನಡೆತರುತಿರ್ದಕಲಿಬ
ಭ್ರುವಾಹನಂಕೇಳ್ದುಕಡುಕೋಪದಿಂದೊದಗಿಬಂ।ದಾಹವಕೆಶಂಖನಾದಂ
ಗೈಯೆಬೆದರಿತುಜಗತ್ರಯಂಪರಬಲದೊಳು ॥ ಸಾಹಸಿಗಳೊದಗಿದರ್ಬಳಿ
ಕೆರಡುಚೂಣಿಗಳ।ಕಾಪುರದಕಲಿಗಳೆಡೆವೆರಸಿಹೊಯ್ದಾಡಿದ । ರ್ಬಾಹುನ
ಖಮುಷ್ಟಿಕೇಶಾಕೇಶಿಮಲ್ಲಯುದ್ಧದಹತಾಹತಿಗಳಿಂದ ॥೬॥ ಬಳಿಕೆರಡುಕ
ಡೆಯುಭಟರುಬ್ಬರದೊಳಬ್ಬರದೊ।ಳೆಳಸಿಹೊಯಿದಾಡುತಿರಲಾಚೆಯಿಂದೀ
ಚೆಯಿಂ। ತಳತಂತ್ರವೊಡನೊಡನೆಮುಗ್ಗಿದುದುಮುಗ್ಗಿದುದುಬಹಳಕೋ
ಲಾಹಲದೊಳು ॥ ಖಳಿಖಟಲುಖಟಲೆಂಬರವದಿಂದಜವದಿಂದ। ಕಳಿವರಿಮ
ಘೋರಪ್ರಹಾರದಿಂವೀರದಿಂ।ಬಳಸಿಬಿದ್ದುದುಮುಂದಿಹೆಣಮಯದರಣಮ

ಯುದತಾಕುಳಿದರಚನೆನುರೆಯೆ ||೭|| ಮತ್ತೆ ಪುರದಿಂದಯುತನಿಯುತಸಂ
ಖ್ಯೆಯರಥದ | ಮೊತ್ತದಿಂಕುದುರೆಮಂದಿಗಳಸಂದಣಿಗಳಿಂ| ಮತ್ತಗಜಘ
ಟೆಗಳಿಂದಾನೃಪನಸುತರೈವರುಂಪಚಾರಿಸುತಬಂದು ||ಬಿತ್ತಿಯುಮಂಮಾ
ಡೆಬಭ್ರುವಾಹಂಕನ|ಲ್ಪುತ್ತುಂಗಚಾಪದಿಂಕಣೆಗರೆವುತಿರಲನಿಬ| ರೆತ್ತಲಡೆ
ಗಿದರೊಪೇಳೆನೆವುಡಿದುದರಿಚಾತುರಂಗಮದನೇವೇಳ್ವೆನು ||೮|| ಕಲಿಬ
ಭ್ರುವಾಹನನಕೋಲ್ಗಳಿಂನಿಜಸೇನೆ|ಖಿಲವಾಗುತಿರೆಕೇಳ್ದು ವೀರವರ್ಮಂತಾ
ನೆ | ಬಲಸಹಿತಪೊರಮಟ್ಟುತನಗಳಿಯನಾಗಿರ್ದಕಾಲಂಗೆತೋರಿಸಲ್ಕೆ ||
ಕೊಲತೊಡಗಿದಂಬಳಿಕಧರ್ಮರಾಜಂಮುಳಿದು| ಫಲುಗುಣನತಳತಂತ್ರ
ಮಂತನ್ನವಾವಂಗೆ| ಗೆಲವಾಗಬೇಕೆಂದುಜೀವಿಗಳವಧೆಗೆಜವನಳುಕುವನೆ
ಜಗದೊಳೆನಲು ||೯|| ಎಂದಿರೊಡ್ಡಾಪ್ರಾಣಿಗಳನೆಲ್ಲರಂಕೊಲ್ವ|ದಂದುಗಂ
ತನಗೆಬಿಡದೆಂದುಮುಳಿದಂತಕಂ| ಬಂದುಪೊಕ್ಕನೊಕಿರೀಟಿಯದಳವನೆನೆ
ಹತಾಹತಿಗಳಂಮಾಡುತಿರಲು || ನಿಂದುಕಾದುವರಿಲ್ಲದಂಕಂಡುಫಲುಗು
ಣನು|ಕುಂದನಂಚಿಸಗೊಂಡನೆಲೆದೇವಸೈನ್ಯಮಂ| ಮುಂದುಗೆಡಿಸುವಪ
ರಾಕ್ರಮದಕಟ್ಟಾಸುರದವೀರನಿವನಾರೆಂದನು ||೧೦|| ತಾತಕೇಳೈಪಾರ್ಥ
ನಿನಗೆಹಿರಿಯಯ್ಯನಹ|ನೀತಂಕಣಾಧರ್ಮರಾಜನೀನೃಪನಜಾ|ವಾತನಾ
ಗಿರ್ದಪಂಮಾವಂಗೆಹಿತವಾಗಿನಮ್ಮಚಾತುರ್ಬಲವನು || ಘಾತಿಸುವನೆಂ
ದುಹರಿನುಡಿದೊಡೆಧನಂಜಯನಿ|ದೇತಕೆಮಹೀಪತಿಗೆತಾನಳಿಯನಾದನೀ|
ಭೂತಳದೊಳಿದನರುಹಬೇಕೆಂದುಬೇಡಿಕೊಳಲಸುರಹರನಿಂತೆಂದನು ||
ಆಲಿಸಾದೊಡೆಪಾರ್ಥವೀರವರ್ಮಕಮಹೀ|ಪಾಲಕನತನುಜೆಮಾಲಿನಿಯೆಂ
ಬನಾಮದಿಂ|ದಾಲಯದೊಳಿರುತಿರ್ದೊಡಾದುದಾಕನ್ನಿಕೆಗೆಯೌವನಪ್ರಾ
ಪ್ತಿಬಳಿಕ || ಬಾಲಕಿಗೆಪತಿಯಾಗಬೇಕೆಂದುನರನಾಥ | ನಾಲೋಚಿಸಿದೊ
ಡಾಗಪಿತನೊಡನೆಮಾನವರ|ಮೇಲೆನಗೆಮನವೆರಗದೆನಲವಂಮತ್ತೆವರನಾ
ರೆಂದೊಡಿಂತೆಂದಳು ||೧೨|| ಬೆಪ್ಪಕೇಳ್ಮನುಜರ್ಗೆಮರಣವೆಂದಿರ್ದ್ದ
ಡಂ|ತಪ್ಪದದರಿಂದಮಾನವರಪಾಣಿಗ್ರಹಣ|ಕೊಪ್ಪಿನಾಪತಿಯೊಳುರಿಪೊ
ಗುವೇಳ್ಪುದಲ್ಲದೊಡೆವಿಧವೆಯಾಗಿರವೇಳ್ಪುದು || ಅಪ್ಪುವೊಡೆನಿಜಕಾಂ
ತನಿಲ್ಲದೊಡೆಮನ್ಮಥಂ|ನಿಪ್ಪಸರದಿಂದೆಸೆವಕುಸುಮಾಸ್ತ್ರಕನ್ಯರಂ| ಬಪ್ಪ
ನರಕವನರಿಯದೊಡಗೂಡುವೇಳ್ಪುದಿದಕಂಜುವೆಂತಾನೆಂದನು ||೧೩||ನಿ
ಜನಾಥನಿರ್ದಲ್ಲಿಮರಣವಾದೊಡೆಪುಣ್ಯ| ಮುಜನಾದರಿಪನವನಕೂಡೆತಂ
ನಂಗಮಂ| ತ್ಯಜಿಸದೊಡೆವಿಧವೆಯಾದೊಡೆಸತಿಗೆಪಾತಕಂಬಂದಲ್ಲದಿರದು
ಬಳಿಕ || ಪ್ರಜೆಗಳಂಪಡೆದುಸದ್ಗತಿಗೈದವೇಳ್ಪುದಿದು | ರುಜುವಲ್ಲಮಾನು

ಷ್ಯಮಾರ್ಗಮಿದಕಾರಣಂ ।ಭಜಿಸುವೆಂಧರ್ಮರಾಜನನೆನ್ನ ನಾತಂಗೆಕೊ
ಡುಮದುವೆಯಹೆನೆಂದಳು ॥೧೪॥ ಮೃತವಾದೊಡವನಪೊರೆಗೈದುವಸುರ
ಕೃತದು।ಷ್ಕೃತವನಾತನೆಬಲ್ಲನದರಿಂದತನಗೆರವಿ । ಸುತನೆವರನಾದಪಂ
ವ್ರತದಾನಜಪತಪದೊಳಾತನಂಮೆಚ್ಚಿಸುವೆನು ॥ ಅತಿಶಯಮಿದೆನ್ನದಿರ್ಪಿ
ನ್ನಪುಣ್ಯದಫಲಂ।ಪ್ರತಿಕೂಲಮಾಗದೆನಗಿನ್ನುವೈವಸ್ವತಂ। ಪತಿಯಾಗದಿ
ರನವನಕಾಯುವಂತಳಿದುಜಸವಡೆದಪೆಂತಾನೆಂದಳು॥೧೫॥ ಇಂತೆಂದುಮಾ
ಲಿನಿಮಹೀಪತಿಗೆವಿನಯದಿಂ।ದಂತಸ್ಥಮಾಗಿಹಮನೋರಥವನೊರೆದಿನ್ನು।
ಸಂತತಂಬಿಡದೆನಾನಾವಿಧದಪುಣ್ಯಕರ್ಮಂಗಳಂನೇನೆರಚಿಸಿ॥ ಎಂತಾದೊ
ಡಾಂಧರ್ಮರಾಜಂಗೆಮದುವೆಯು । ಪ್ಪಂತೆಮಾಡೆಂದುಕಾಲ್ಗೆರಗಿದೊಡೆತನ
ಯಳಂ । ಸಂತೈಸಿತೊಡಗಿದಂಯಮಸೂಕ್ತದಿಂದವೈವಸ್ವತನಪ್ರಾರ್ಥನೆ
ಯನು ॥೧೬॥ ಅಂದುಮೊದಲಾಗಿಮಾಲಿನಿದಿವಾರಾತ್ರಿಯೋ। ಳ್ಕುಂದದೆಕೃ
ತಾಂತನಂನಾನಾವಿಧಾನಂಗ।ಳಿಂದಪೂಜಿಸುತಿರ್ದಳನ್ನೆಗಂದಿನದಿನಕೆಯೌ
ವನಂಪ್ರಬಲಮಾಗೆ ॥ ಇಂದುವದನೆಯನೆನಹಿಂಗೊಳಗಾಗಿತರಣಿಜಂ । ಬಂ
ದುಮೈದೋರದಿರೆಧರ್ಮದಸಹಾಯಕ್ಕೆ । ಮುಂದುವರಿವಮರಮುನಿನಾರ
ದಂತಿಳಿದನೀವೃತ್ತಾಂತಮಂಮನದೊಳು ॥೧೭॥ ನಾರದಮುನೀಶ್ವರಂಕಾ
ಲನಲ್ಲಿಗೆಬಂದು।ವೀರವರ್ಮಕನೃಪನತನುಜೆಮಾಲಿನಿಯುಂವಿ । ಚಾರಿಸದೆ
ಸುಮ್ಮನಿರ್ದಪರೆನೀಥರೆಯಮಾನವರನೊಲ್ಲದೆನಿನ್ನನು ॥ ಹಾರೈಸಿಪತಿ
ಯಾಗಬೇಕೆಂದುಭಜಿಸುವ।ಳ್ಚಾರಿತ್ರಗುಣಶೀಲಸತ್ಯಧರ್ಮಂಗಳಿಂ । ಸಾರ
ಸ್ವತಾಖ್ಯಪುರಮಂಪಾವನಂಗೈವಳಾಕೆಯಂವರಿಸೆಂದನು ॥೧೮॥ ನಿಜವಾ
ಗಿಮನದೊಳನ್ಯವನುಳಿದುತನ್ನನೇ।ಭಜಿಪಶರಣಾಗತರನಾದರಿಸದಿರ್ದಪ
ರೆ। ಸುಜನರೆನೆತರಣಿಸುತನಾಲ್ಕುಚರಣವನೂರಿನಡೆವಧರ್ಮದೊಳಡರ್ದ ॥
ಪ್ರಜೆಗಳಿಂದೆಸೆವಸಾರಸ್ವತಪುರಕ್ಕೆಲೆಮ । ನುಜವೇಷಮಂತಾಳ್ದುನೀಂ
ಪೋಗಿವರಿಸುಘೂ।ಭುಜನಕುವರಿಯನೆಂದಡೊಪ್ಪಿವೈವಸ್ವತಂಕಳುಹಿದಂ
ಸುರಮುನಿಯನು ॥೧೯॥ ಅಸ್ವಭಾವಿಕಮಲ್ಲನೈಜಮಿದುತನಗೆನೆತ।ಪಸ್ವಿ
ಗಳಮೌಳಿಮಣಿನಾರದಂಪೋಗಿವೈ।ವಸ್ವತಂಗರುಪಿಮಾಲಿನಿಯಭಾವವನ
ಲ್ಲಿಬೀಳ್ಕೊಂಡುಖೇಚರದೊಳು॥ ಸುಸ್ವರದವೀಣೆವಿಡಿದಾನಂದದಿಂದಸಾ। ರ
ಸ್ವತಪುರಕೆಬಂದುಕಾಲನಾಡಿದುದಂಯಶಸ್ವಿಯಾಗಿಹವೀರವರ್ಮನಂಕಂ
ಡುಸತ್ಕೃತನಾಗಿವಿವರಿಸಿದನು ॥೨೦॥ ಧರ್ಮರಾಜನಪೊರೆಗೆಪೋಗಿರ್ದನೆ
ಲೆವೀರ।ವರ್ಮಕೇಳಿಂನೆಗಂನೀಸಾರ್ಜಿಸಿದಪುಣ್ಯ। ಕರ್ಮಫಲದಿಂದವೈಶಾ
ಖಮಾಸದಶುಕ್ಲಪಕ್ಷದೊಳ್ದರೆಗೆಬಂದು॥ನಿರ್ಮಲಚರಿತ್ರೆವ್ರತವತನುಜೆಮಾಲಿ

ನಿಯುಂಜ|ನೆರ್ಪುಜ್ಜೆ ಮದುವೆಯಾದಪೆನೆಂದನಂತಕಂ | ಪೇರ್ವ್ಪಖಿಂದಾ
ದರಿಸುವಂತೆಸಂಪಾದಿಸುವುದೆಂದುಮುನಿಪತಿನುಡಿದನು ||೧೧|| ಸುರಮುನಿ
ಯವಾಕ್ಯಮಂಕೇಳಿದಂತಾಳಿದಂ| ಪರಿತೋಷಮಂಭೂಪನೊಲವಿಂದನಲ
ವಿಂದ|ಪುರವರದನ್ಯೈದೆಸಿಂಗರಿಸಿದಂತರಿಸಿದಂಬೇಕಾದವಸ್ತುಗಳನು||ಸರಸ
ಗುಣಸೌಂದರ್ಯಶಾಲಿನಿಗೆಮಾಲಿನಿಗೆ|ತರಣಿಜನಕೊಡೆವೈವಾಹಮುಂಮೋ
ಹಮುಂ |ದೊರಕೊಂಬುದೆಂದುವಿಸ್ತರಿಸಿದಂಕರೆಸಿದಂಬಾಂಧವರನುತ್ಸವ
ದೊಳು ||೧೨|| ರಿಪುಮಥನಕೇಳಿತ್ತುಮಾಲಿನಿಯುಪರಿಣಯಕೆ|ತಪನಜಂಪೊ
ರಮಟ್ಟುತನ್ನಮನ್ನಣೆಯವರ | ನಪರಿಮಿತಪರಿವಾರಮಂಕರೆಸಿಬಹುದು
ನೀವೆಮ್ಮೊಡನೆಮದುವೆಗೆನಲು || ಕುಪಿತವದನದಕೋರೆದಾಡಗಳಕಾರೊ
ಡಲ|ವಿಪರೀತವಿಕ್ರಮಭಯಂಕರದವೀರಭಟ|ರುಜಮಿಸುವಡರಿದೆನಲ್ ಕ್ಷೆ
ಯನೆಂಬಮಂತ್ರಿಯೊಡನೈತಂದರಾಕ್ಷಣದೊಳು ||೧೩|| ದುರಿತಕೋಟಿಗ
ಳೊಡನೆಪಂಚಘಾತಕಮುಖ್ಯ | ದೊರೆಗಳಿಟ್ಟಣಿಸಿತಗಣಿತರೋಗಸಂಕು
ಲಂ|ವೆರಸಿಮಿಗೆರಾಜಕ್ಷಯಾದಿನಿಖಿಳವ್ಯಾಧಿನಾಯಕರ್ಸಂದಣಿಯಲು|| ಉ
ರುತರದರುಜೆಗಳರಸಿಯುರಸಂಖ್ಯಾತದಿಂ|ನೆರೆದುದಗಣಿತಸೂಚಿಕಾಗ್ರಹ
ಣ್ಯಾದಿಭಿಃ | ಕರವದನೆಯರಕೊಡೆಬಳಿಕಂತಕಂಗೆಬಿನ್ನೈಸಿದಂಕ್ಷಯಸಚಿ
ವನು ||೧೪|| ದೇವನಿಮ್ಮೊಡನೆಮದುವೆಗೆಬಂದೊಡೆಮಗೇ| ದಾವಳಿಯ
ಘೋಷಶ್ರವಣಮಹುದುಹೋಮಧೂ | ಮಾವಲೋಕನಮಹುದುಪುಣ್ಯ
ಕರ್ಮಿಗಳಸೋಂಕಿನಘಾಳಿಮೇಲೆಬಹುದು || ಆವೀರವರ್ಮಕಂಧಾರ್ಮಿ
ಕಂಗೋವಿಪ್ರ|ಸೇವಕಂಪ್ರಜೆಗಳುಂದ್ವಿಜಹಿತವರತಿಶುಚಿಗ| ಳಾವೆಂತುಬ
ಹೆವಲ್ಲಿಗೆಂದೊಡೆಕೃತಾಂತಕಂಕ್ಷಯಗೆಮಗುಳಿಂತೆಂದನು ||೧೫|| ಕ್ಷಯಕೇ
ಳ್ಸಮಸ್ತಘಾತಕರೋಗನಾಯಕ | ರ್ಭಯಮಯಾಕಾರಂಗಳಂಬಿಟ್ಟುದಿ
ವ್ಯಾಕೃ| ತಿಯನಾಂತುತಂನಪಟ್ಟಣದೊಳೆಂತನವರತಮಿರುತಿರ್ಪರಂತನಿಬ
ರು || ಪ್ರಿಯದಿಂದಬರಲೆಮ್ಮೊಡನೆಮದುವೆಗಾಪುಗಾ|ಶ್ರಯದನರರೆಲ್ಲರುಂ
ಪುಣ್ಯಕರ್ಮಿಗಳವರ | ನಯನಾವಲೋಕನಕೆಸೊಗಸಾಗಬೇಕೆಂದುವೈ
ವಸ್ವತಂನುಡಿದನು ||೧೬|| ಆಲಿಸುವುದೆಲ್ಲರುಂಪಾಪಿಗಳಕಣ್ಗೆತಾಂ | ಕಾ
ಲಾಗ್ನಿಸದೃಶಮಾಗಿರ್ದಪೆಂಪುಣ್ಯಾತ್ಮ | ರಾಲಿಗಳ್ಗತಿಸೌಮ್ಯನಾಗಿಹೆಂ
ನೀವುಮೆನ್ನಂತೆರಮಣೀಯ್ಯಮಾದ|| ಶಾಲಿಸೌಂದರರದರೂಪಂಗಳಂತಳೆದು
ದಿ|ವ್ಯಾಲಂಕೃತಿಗಳಿಂದವೀರವರ್ಮಕಧರಾ|ಪಾಲಕನಪಟ್ಟಣಕೆಬಹುದೆಂ
ದುಭೃತ್ಯರ್ಗೆತರಣಿಜಂನೇಮಿಸಿದನು ||೧೭|| ವಿಜಯಕೇಳಿಂತೆಂದುಬಳಿಕ
ದಿವ್ಯಾಕೃತಿಯ|ನಿಜಭೃತ್ಯರೊಡನೆಶಮನಂವೀರವರ್ಮಭೂ | ಭುಜನಪಟ್ಟ

ಣಕೆಬರಲಾನೃಪನಿದಿರ್ಗೊಂಡುನಾರದಂಮೊದಲಾಗಿಹ॥ದ್ವಿಜರಮುಂದಗ್ನಿ ಸಾಕ್ಷಿಕದೊಳಂತಕಂಗೆಪಂ । ಕಜವದನೆಮಾಲಿನಿಯನಿತ್ತುವಿಧಿವಿಹಿತದಿಂ। ತ್ರಿಜಗಕಿದುಪೊಸತೆನೆ ವಿವಾಹಭವನದೊಳಂದುಮದುವೆಯಂ ಮಾಡಿಸಿದ ನು ॥೨೮॥ ಅಚ್ಚರಿಯೊಳಾದನ್ವೈವಾಹದುತ್ಸವಕೆಸಲೆ। ಮೆಚ್ಚಿವೈವಸ್ವತಂ ನುಡಿದನೆಲೆರಾಯನಿ। ನ್ನಿಚ್ಛೆಯಾವುದುಬೇಡುಕೊಡುವೆನಿನ್ನಲ್ಪಕಾಲಕೆಬ ಹುದುಮೃತ್ಯುನಿನಗೆ ॥ಎಚ್ಚರಿಂದರಿದಿರ್ಪುದೆನೆವೀರವರ್ಮಕಂ।ನಿಚ್ಚಟದೊ ಳೀಮಗಳನಿತ್ತುಮಗುಳೀಸಿಕೊಂ। ಬಚ್ಚಿಗದವರಮಿದೇಕೆನಗೆಕನ್ಯಾಶುಲ್ಕ ಮತಿದೋಷಕರವೆಂದನು ॥ ಎಂದೊಡಂತಕನೆಂದನೆಲೆಮಹೀಪಾಲನಿನ। ಗಿಂದುಪುರುಷಾರ್ಥಮಿಲ್ಲೀವರಂಕರೆದುಲೇ। ಸಿಂದಕೊಟ್ಟಾತನಂಮಿಗೆಪರ ಸದಿರ್ದಪನೆತೆಗೆದುಕೊಂಡವನಿಳೆಯೊಳು ॥ ಹಿಂದುಗಳೆಯದಿರೆನ್ನಮಾತ ನೆನೆಭೂವರಂ।ಮುಂದೆತನಗಲ್ಪಕಾಲಕೆಮೃತ್ಯುಬಯದನರಿ।ದೊಂದುಪಾ ಯಾಂತರವನೆಣಿಸಿನಸುನಗುತಶಮನಂಗೆಬಳಿಕಿಂತೆಂದನು ॥೩೦॥ ಆದರಿಲ್ಲಿ ಗೆಬರಲಿನಿಂನಕೃಪೆಯಿಂದಮಘು। ಸೂದನಂತನಗನ್ನೆಗಂಮರಣಮಾಗದಿರ ಲಾದೈತ್ಯಮರ್ದನಂಕಾಣ್ಬಪರಿಯಂತರಂನೀನುನಂಮಿಾಪುರದೊಳು॥ ಕಾ ದುಕೊಂಡಿಹುದೆಂನನೀವುದೀವರವನೆನೆ।ಸಾದರದೊಳಿತ್ತಂದುಮೊದಲಾಗಿ ನಾನಾವಿನೋದದಿಂಮಾಲಿನಿ।ಯೊಡನೆರಮಿಸುತಿರ್ದನೀಪಟ್ಟಣದೊಳನತ ನುಜನು ॥೩೧॥ ಇನ್ನರಿದಲೈಪಾರ್ಥರವಿತನಯನೀಪುರದೊ।ಳಿನ್ನೆಗಂಬಿಂ ದಿರ್ದವೃತ್ತಾಂತಮಂನೋಡು । ತಂನವಮಾವನಸಹಾಯಕೆನಮ್ಮಸೇನೆಯುಂ ಸಹ್ಮರಿಸುತಿಹನಿತ್ತಲು ॥ ಸಂನದ್ಧನಾಗಿತಂನಂಕಾಣ್ಬಲವಲವಿಕೆ। ಯಿಂನ ಡೆತಹಂವೀರವರ್ಮನೀಕ್ಷಿಸುಘುರಕೆ । ನಿನ್ನಕೋದಂಡಮಂನುಡಿಸೆನುತಹರಿ ಧನಂಜಯನರಥಕೈತಂದನು ॥೩೨॥ ವೀರವರ್ಮನಕಾಳಗಕೆಹರಿಫಲುಗು ಣನ। ತೇರನೇರಲ್ಕಂಡುತಮತಮಗೆನೂಕಿತುಮು । ಯುೂರಧ್ವಜಾದಿಭೂ ಪಾಲಕರ್ರ್ಗೊಲಗಲಂತಕಂತಾನಾದೊಡೆ ॥ ನಾರಕಿಗಳಂಬಾಧಿಸುವದಲ್ಲದ ಸುರಸಂ।ಹಾರಕನಸೇವೆಯುಂಮಾಡುತಿಹನೆಂಮಪರಿ।ವಾರಮಂಕೊಲ್ವೊ ಡಧಿಕಾರಮೆತ್ತಣದೆನುತಮುಂಕೊಂಡುಕವಿದೆಚ್ಚರು ॥೩೩॥ ಅನಿರುದ್ಧ ಸಾ ತ್ಯಕಿಪ್ರದ್ಯುಮ್ನಕೃತವರ್ಮ । ನಿನಜಸುತಗದಸಾಂಬಹೈಡಿಂಬಿಬಭ್ರುವಾ। ಹನಯೌವನಾಶ್ವಪ್ರವೀರಹಂಸಧ್ವಜಸುವೇಗಸಮನೀಲಕೇತು ॥ಅನುಸಾ ಲ್ವತಾಮ್ರಕೇತನಮಯೂರಧ್ವಜ । ರ್ತನತನಗೆಕಣೆಗರೆಯಲಾವೀರವರ್ಮ ನೆ । ಚ್ಚನಿಬರಂಮುರಿದುಕೃಷ್ಣಾರ್ಜುನರಸರಿಸದೋಳ್ಪಿಂದುನಗುತಿಂತೆಂ ದನು ॥೩೪॥ ಈವೀರರೋರ್ವರುಂತನಗೆಪಾಡಲ್ಲಗಾ। ಜೀವಲೋಚನನಿಂ

ನೊಳೀನರನೊಳೀಧ್ವಜದ। ಪಾವಮಾನಿಯೊಳುನೆರೆಕಾದಿಮುದ್ಭುಜದಕಂ
ಡೊತಿಯಂಕಳೆವುದೀಗೆ ॥ ಮೂವರುಂತೊಲಗದಿರಿಸಾಕೆನುತಕೃಷ್ಣಗಾಂ
ಡೀವಿಮರುತಜರನಾರೇಳೆಂಟುಸರಳಿನೆ। ಚಾಪವಸುಮತೀಶನುಳಿದವರನ್ನೈದೈ
ದುಬಾಣಂಗಳಿಂಘಾತಿಸಿದನು ॥೩೫॥ ಈತನೀಗಲೆದೇವವೀರವರ್ಮಕನೆಂಬ।
ಭೂತಳಾಧಿಪನಾದೊಡೊಳ್ಳಿತಿವನತಿಬಲಂ। ಮಾತುಲನೆಲಾಧರ್ಮರಾಜಂಗೆ
ಕಟ್ಟಿಕೊಳಬಹುದಿವಂಕುದುರೆಗಳನು ॥ ಘಾತಿಸಿದೊಡೆಮಗೆತಪ್ಪಿಲ್ಲಲಾಬಿ
ಸಗೊಂಬ । ಮಾತಾವುದಶ್ವಂಗಳಂಬಿಡನೆಭುಜದಕಂ । ಡೊತಿಯಂಕಳೆ
ದಪಂಗಡನೋಲ್ಪೆವೆನುತನರನೆಚ್ಚನಾಭೂಪತಿಯನು ॥೩೬॥
ಕಟಕಿಯೇಕೆವ್ಯೊಮ್ರಡನೆಪಾಂಡುಸುತನೀನೆಸಟು । ಭಟನಪ್ಪೆಮೂಜಗಕೆ
ಕೃಷ್ಣನಸಹಾಯದಿಂ । ಘಟಿಸಿದಗ್ಗಳಿಕೆಗೇತಕೆಬೆರೆವೆಸ್ಸೈರಿಸೆನುತಾಸ್ತ್ರಪಂ
ಕೋಪದಿಂದ ॥ ಚಟುಲಚಾಪದೊಳುರುಳ್ಚಿದನಂಬನಖಿಳದಿ । ಕ್ತಟದೋ
ಳ್ಗಗನಮಂಡಲದೊಳಹಿತಬಲದೊಳು । ತ್ಕಟಬಾಣಮಯಮಾಗೆಹರಿನರ
ಕಪೀಂದ್ರರಥವಾಜಿಗಳ್ಭ್ರಮಿಸುವಂತೆ ॥೩೭॥ ನೆರೆಮಂತ್ರಿಮಂತ್ರದಿಂದಹಿ
ತರುತ್ಸಾಹಮಂ । ಬರಿಗೈವತೆರದಿಂದನರನವನಕಣೆಗಳಂ ।ತರಿದೊಟ್ಟುತಿ
ದರೊಳೀನಾದಪುದುಸಾಕಿನ್ನುಬಿಡುನಮ್ಮಕುದುರೆಗಳನು ॥ ಬಿರುಸರಳ
ಬಿಡಯಕೆಡೆಗೊಡದಿರೊಡಲಂಕಡೆಯೊ । ಳುರುಬೆಗರಗದೆಹರಿಯುದರಿದು
ಕೊಳ್ಳೆನುತಕೋ । ಲ್ಗರೆದೊಡಾನೃಪತಿಪಾರ್ಥನಬಾಣಮಂಕಡಿದುನಸು
ನಗೆಯೊಳಿಂತೆಂದನು ॥೩೮॥ ಎಲೆಪಾರ್ಥವಿನಯದಿಂನೀಂಬೇಡಿಕೊಂಡೊ
ಡೆಮೊ ।ದಲೆಬಿಡುವೆನಶ್ವಂಗಳಂಬರಿದೆಕಾಳಗಕೆ। ಬಲಸಹಿತಬಂದೆನೀನಿನಿ
ತುರುಬೆಗೆರಗುವರೆನೆಲದಾಣ್ಮರಕಟನಿನಗೆ ॥ಕಲಿತನದಪಂಥಮುಂಟಾದೊ
ಡಿದುಸಮಯಮೈ । ಸಲೆಕಾಣಬಹುದೆನುತಕಣೆಗಳರವತ್ತರಿಂ । ಫಲುಗು
ಣಮುರಧ್ವಂಸಿವಾನರಹಯಂಗಳಂಕೆಡೆಯೆಚ್ಚುಬೊಬ್ಬಿರಿದನು ॥೩೯॥ ಅ
ರಸಕೇಳವನಬಾಣದಘಾತಿಗರ್ಜನಂ । ಕೊರಗಿದಂಮೇಲೆಪಲ್ಗಿರಿದನಾಕ
ಪಿಚಕ್ರ। ಧರನ್ನೈದೆಕೈಮರೆದುವಾಘೌಯಂಸಡಲಿಸೆರಥಾಶ್ವಂಗಳಸ್ತ್ರಹತಿಗೆ॥
ತರಹರಿಸಲರಿಯದೋಡಿದುವೊಂದುಕಡೆಗೆಬಳಿ । ಕುರುವಣಿಸಿಪಾಂಡವಪ
ತಾಕಿನಿಯಸುಭಟಪ್ರ। ಕರವನರೆಯಟ್ಟಿದಂತಿರುತಿರುಗಿಚಾರಿವರಿದೇವೇಳ್ವಿ
ನದ್ಭುತವನು ॥೪೦॥ ಅಭ್ರದೋಳ್ಮಿಂಚುಸುಳಿವಂತೆಪರಬಲದೋಳ್ಪ।ರಿಭ್ರ
ಮಿಸಿತವನರಥಮರಗುತಿಹಸಿಡಿಲಂತೆ । ವಿಭ್ರಾಜಿಸಿತುಘೋಷದೊಡನೆಬಿ
ರುವಳೆಯಂತೆಕರೆದವಂಬಿನಸರಿಗಳು ॥ ಬಭ್ರುವಾಹನಮಯೂರಧ್ವ
ಜಾದಿಗಳಾಹ ।ವಭ್ರಷ್ಟರಾದರಿದಕರ್ಜುನಂರೋಷಬ। ದ್ಧಭ್ರುಕುಟಿಮುಖ

ಭಯಂಕರನಾಗಲಸುರಾರಿಕಂಡುಬಳಿಕಿಂತೆಂದನು ‖೪೧‖ ಖಾತಿಬೇಡೆಲೆ ಪಾರ್ಥನಿನಗೆನಗೆಮಣಿಯಂಮ|ಹಾತಿಬಲನೆಲ್ಲರಂತಲ್ಲಧಟುಪಾಯಂಗೆ|ಳೀ ತನೋಳ್ಕೊಳ್ಳ ದುಜಯುದ್ಧಧನತಲೆಯನರಿದಂಬಿವನೆಡೆಗೆಪೋಗದು ‖ ಸೂತಜನರಥದಕಾಲಿಗೆಸಿಕ್ಕನಿಕ್ಕಿದವ । ಹೀತಳದೊಳೆಡರಿಲ್ಲಿವಂಗೆನಾಂಮುಳಿದೊಡೆಸು । ನೀತನಶಿರಚ್ಛೇದನಂಗೈದಚಕ್ರವಿವನಂಮುಟ್ಟದೇವೇಳ್ವೆನು‖ ಇಂತೆಂದುಹರಿಪಾರ್ಥನಂನಿಲಿಸಿನೋಡಿಪನು। ಮಂತನಂಕರೆದುನೀನೀತನ ವರೂಥಮಂ । ತೊಂತಿವಾಲ್ಗೃದಿಂಗೆಗನದೋಳ್ತಿರುಪಿಡುಮಹಾರ್ಣವ ಕೆಪೋಗಲೆನಲು ‖ ಎಂತಿವನರಥವನೀಡಾಡುವೆಂದಶವದನ|ನಂತೆಯುಂಜಂಬುಮಾಲಿಯತೆರದಿರಾಮಸೀ । ಮಂತಿನಿಗೆಕಾವಲಿರ್ದಸುರೆಯತೆರದೊಳುಂ ಖಳನೀತನಲ್ಲೆಂದನು ‖೪೨‖ ವಾಯುಸುತಶಂಕೆಬೇಡೆನ್ನಾಜ್ಞೆ ಧರ್ಮದಸ| ಹಾಯಮಿದುನಿನಗೆಮಗೆಬೇಕಾದಕಜ್ಜಮಂ । ದಾಯದುಕುಲಾಧಿಪಂನೇಮಿಸಿದೊಡಾಕಪಿವರಂತನ್ನವಾಲಧಿಯನು ‖ ಆಯತಂಗೈದುಸಾರಥಿಕುಪುರೆಗಳ್ಸಹಿತ । ಜೀಯುವಾಗಿಹನೃಪನರಥವುಂತೊಡದಾರ್ಗಂಜ| ನೇಯಂನಭಸ್ಥಳಕೆಚಿಗಿದಂಪಯೋನಿಧಿಗೆಬಿಸುಡುವುದ್ಯೋಗದಿಂದ ‖೪೪‖ ಅನ್ನೆಗಂತನ್ನರಥಮಂಬಿಟ್ಟುವೀರವ । ರ್ಮಂನರನಮಣಿಮಯವರೂಥಮಂತೆಗೆದುಕೊಂ । ಡುನ್ನತಪರಾಕ್ರಮದೊಳಾಗಸದೆಡೆಗೆಚಿಗಿದುಬಂದೆಲೈವಾನರೇಂದ್ರ ‖ ನಿನ್ನೊಳಿರ್ದಪುದುಬರಿದೇರೆನ್ನಕೈಯೊಳಿದೆ । ಪನ್ನಗಾರಿಧ್ವಜಕಿರೀಟಿಗಳ್ವೆರಸಿರ್ದ । ಸನ್ನುತಸ್ಯಂದನಂನೋಡೆಂದುಗಗನದೊಳ್ನಪಿಯಂಪಚಾರಿಸಿದನು ‖೪೫‖ ಎಲ್ಲಿಗೆನ್ನಯುವರೂಥವನಿಡುವೆಕೀಶನೀ|ನಲ್ಲಿಗೀಡಾಗುವೆಂಸವ್ಯಸಾಚಿಯುರಥವ ।ನಲ್ಲದೊಡೆಪಾಲ್ಗಡಲಶೇಷತಲ್ಪದೊಳೆಸೆವಯಿಂದಿರಾದೇವಿತನ್ನ ‖ ವಲ್ಲಭನಗಲ್ದುಪಾರ್ಥನಭಕ್ತಿಗೊಲಿದಿರ । ಲ್ಲಲ್ಲಣಿಸಿವಿರಹದಿಂತಪಿಸುತಿಹಳಾರಮೆಗೆ । ನಲ್ಲನೊಡಗೂಡುವಂತಮೃತಾಬ್ಧಿಗಿಡುವೆನೆಂದುಬ್ಬಿದಂಭೂಪಾಲನು ‖೪೬‖ ನಾಗರಕೆಲಂಘಿಸಿದನಾಹಸಕೆಚಿರವೆನೀ । ನಾಗಸದೊಳಾದಿತ್ಯನಿರೆಚಂದ್ರನೊಪ್ಪುವುದೆ ।ಪೋಗೆಲೆಮರುಳೆತನ್ನ ಮುಂದಣಪರಾಕ್ರಮಿಗಳುಂಟೆಮೂಜಗದೊಳೆನುತ ‖ ತಾಗಿದಂನೃಪತಿಹನುಮಂತನಂಬಳಿಕನಾ । ವೀಗಣವರಂತಲ್ಲತಾನೆತನ್ನಂಪೊಗಳು। ವೀಗರುವಿಕೆಯನರಿಯೆವತಿವೃದ್ಧರೆಂದೆರಗಿದಂಕಪಿಮಹೇಶ್ವರನನು ‖ಆವೀರವರ್ಮಂಕನಲ್ದಾಗಪಾರ್ಥರಾ । ಜೀವಾಷ್ಟಕಪಿಗಳಂಕರೆದುಲೋಕತ್ರಯಕೆ ।ಮೂವರಂಗೆಲಿವತಿಪರಾಕ್ರಮಿಗಳಾನೋರ್ವನಾಹವದೊಳೆನ್ನಕೂಡೆ ‖ಸಾವಧಾನದೊಳೊಡಗಿಪೆನೋಡೆಕಾಣಬಹುದೆನುತ|ಪಾವನಾನಿಯುನಡಸಿದೊಡೆಮು

ಷ್ಟಿಘಾತದಿಂ । ದಾವಾಯುಜಂತೊಲಗಲಸುರಹರನಾನೃಪನವಕ್ಷಸ್ಥಳವ
ನೊದೆದನು ॥೪೮॥ ಹರಿಯುಪದಘಾತಿಗಾನೃಪತಿಮೂರ್ಛಿತನಾಗಿ । ಧರೆಗು
ರುಳ್ದೊಡನೆಚೇತರಿಸುತೆಲೆವೀರರ್ಕಳ । ಕಿರನೀವುಮೂವರಾನೋರ್ವನೆಂದಾ
ಹವದೊಳುರವಣಿಸಬೇಡಿಬರಿದೆ॥ ಮುರಹರನದರುಶನಂದೊರಕೊಳ್ವನಿಂ
ತನಗೆ। ಮರಣಮಿಲ್ಲಂತಕನವರದಿಂದಬಳಿಕೀಗ । ಪುರುಷೋತ್ತಮಾಂಘ್ರಿ
ಸ್ಪರ್ಶನವಮಾದುದೆನಗಿನ್ನುಮೃತ್ಯುವೆತ್ತಣದೆಂದನು ॥೪೯॥ ಎಂದೊಡಸು
ರಾಂತಕಂನೋಡಿದಂಕಾರುಣ್ಯ । ದಿಂದನಿಜರಥದೊಳಿದಿರಾಗಿಸಮರಕೆಮ
ತ್ತೆ । ನಿಂದಿಪನರೇಂದ್ರನಂನಸುನಗುತನುಡಿದನೆಲೆಪಾರ್ಥನಿನಗೆನಗಿವನೊ
ಳು ॥ ಕುಂದದೆಸಹಸ್ರವರುಷಂಪೋಣರ್ದೊಡೆತೀರ । ದೆಂದಿಗುಂಲಘುಹಸ್ತ
ಸತಿಬಲಂಶಸ್ತ್ರಾಸ್ತ್ರ।ದಿಂದಧಿಕನಖಿಳವೀರರ್ಕಳಂಗೆಲ್ದನಿವನಾಂತೋಷಿಸು
ವೆನೆಂದನು॥೫೦॥ ದೇವನೀನಾವನಂತೋಷಿಸುವೆಜಗದೊಳವ ।ನೇವಿಜಯ
ಮೇಣವನೆಬಲವಂತನೆಂದೊಡಿಂ । ನೀವಸುಮತೀಶ್ವರಂಧುರದೊಳೆನ್ನಾಳ್ತ
ನಕೆಸೋಲ್ದಪನೆನಾಕಿದೆಂದು॥ ಶ್ರೀವಲ್ಲಭನೊಳರ್ಜುನಂಪೇಳ್ದೊಡಾವಾ
ತ । ನಾವೀರವರ್ಮ್ಮಕಂಕೇಳ್ದುಮಿಗೆಮುಚ್ಚಿಗಾಂ । ಡೀವಿಗಭಿನಮಿಸಿತಾಂಬೆ
ರಳ್ಗೊನೆಯುನೊರದೊಲೆದುಕೊಂಡಾಡುತಿಂತೆಂದನು ॥೫೧॥ ಎಲೆಧನಂಜ
ಯಚರಾಚರವೆಲ್ಲಮಂಬಾಹು । ಬಲದಿಂದಗೆಲ್ವೆನೆಂಬಗ್ಗಳಿಕೆಯುಂಬಿಟ್ಟು
ಜಲಜಾಯತಾಕ್ಷನಾಡಿದಮಾತಿಗನುಸಾರಿಯಾಗಿನೀನೆಂದನುಡಿಗೆ ।ಸಲೆಸೊ
ಗಸಿತೆನ್ನಮನಮಿನ್ನುಕಾದುವೆನೆಂಬ ।ಛಲಮಿಲ್ಲತನಗೆನುತಕರದಚಾಪವ
ನಿಳುಹಿ। ನಲವಿಂದಬಂದುಕೃಷ್ಣನಪಾದಕೆರಗಿದಂವೀರವರ್ಮಂಪ್ರಿಯದೊ
ಳು ॥೫೨॥ ತಾಮರಸಲೋಚನಂತೆಗದುಬಿಗಿದಪ್ಪಿದರೆ। ಪ್ರೇಮದಿಂದಾನೃ
ಪನನರ್ಜುನಂಮನ್ನಿಸಿದ । ನಾಮಯೂರಧ್ವಜಾದಿಗಳೆಲ್ಲರುಂಕೂಡಿಭಾ
ವಿಸಿವರುಚಿತದಿಂದ ॥ ಜಾಮಾತನಾಗಿರ್ದವೈವಸ್ವತಂಬಂದು । ಭೂಮೀ
ಶನಂಮುಕುಂದನಕೈಯೊಳಿತ್ತುಸು ।ತ್ರಾಮಸುತಮುಖ್ಯರಭಿವಂದಿಸಲ್ಪುರ
ಸಿನಿಜನಗರಕ್ಕೆಬೀಳ್ಕೊಂಡನು ॥೫೩॥ ಬಳಿಕವಂತನ್ನತನುದೇಶಕೋಶಂ
ಗಳಂ । ಬಳುವಳಿಗಳಂಮಾಡಿತುರಗಂಗಳಂತರಿಸಿ।ನಳಿನೋದರನಕೈಯೊ
ಳಿತ್ತುಮಿಗೆಭಕ್ತಿಯಿಂದುಪಚರಿಸಿಮುರಹರನನು ॥ ಉಳಿದನೃಪರೆಲ್ಲರಂಸ
ತ್ಕರಿಸಿವಿನಯದಿಂ ।ಪೊಳಲೊಳಾರ್ದಿನಮಿರಿಸಿಕೊಂಡಿರ್ದುಪಾರ್ಥನಂ।ದ
ಳಸಹಿತಪೊರಮಟ್ಟನಾವೀರವರ್ಮಂಕಂಕುದುರೆಗಳರಕ್ಷೆಗೊಡನೆ॥೫೪॥ ಭ
ದ್ರಲಕ್ಷಣದಿಂದಶುಭ್ರಮಾಗಿಹಕರ್ಣಂಗ ।ಳದ್ರಿಸಮಮಾದವಪ್ಪತ್ತೊಂದುಸಾ
ವಿರವ । ನುದ್ರಿತಮಹಾವೇಗದೇಕಕರ್ಣಶ್ಯಾಮದಗಣಿತಸುವಾಜಿಗಳನು॥

ಗಜಮಸ್ತಕದಮೇಲೆನೃಪಸುತೆಸಹಿತಪೊರಮಟ್ಟನುತ್ಸವದೊಳು ॥ ಥ
ಟ್ಟಸಿದವಾದ್ಯರವವೊದರಿತೀವಾರ್ತೆಕಿವಿ । ದಟ್ಟದರೆದುಷ್ಟಬುದ್ಧಿಗೆಮ
ತ್ತೆಭೀತಿಹೊ । ಯ್ದಟ್ಟತೇನೆಂಬೆನದುಪೊಸತೆಲಾದೈವಕೃತವೆಂದುಸ್ವೈ
ವೆರಗಾದನು ||೫೦|| ಗಾಲವನವುತದೊಳೆನ್ನಂಕರೆಸದಿಂದುಭೂ । ಪಾ
ಲಂಕುಳಿಂದತನಯುಗೆಧರೆಯುನೊಪ್ಪಿಸಿವ । ನಾಲಯುಕೆತೆರಳಿದನೆಮದ
ನನಿದ್ದಗೈದನೆಂದುಪಲ್ಮೊರೆದುಮಗನ ||ಮೇಲೆಕೋಪಿಸುತಿರ್ದನನ್ನೆಗಂ
ಭ್ರಮುರಾರಿ । ಮಾಲಿನಿವೆರಸಿಮಾವನಂಕಾಣಲೆಂದುಶುಂ । ಡಾಲಮಸ್ತಕ
ದಿಂದಲಿಳಿತಂದುಶಶಿಹಾಸನೆರಗಿದಂಸಚಿವನಡಿಗೆ ||೫೧|| ಕಳಿವರಿವಕೋಪ
ದಿಂಮಂತ್ರಿವಂಶಾಚಾರ । ಮುಳಿಯಲಾಗದುಚಂಡಿಕಾರ್ಚನೆಗೆನಡೆಯೆಂ
ದು । ಕಳುಹಿದೊಡೆನೀಮಾಡಿದುಜ್ಜುಗವಿದೇನೆಂದುಕೇಳ್ದೊಡಾಶಶಿಹಾಸ
ನು ॥ ಆಳವಡಿಸಿಕೊಂಡುನಾಂಪೋಗುತಿರೆನಡುವೆಕುಂ। ತಳರಾಜನರಮ
ನೆಗೆತನಗವಸರನಿತ್ತು । ತಳೆದನೋರ್ವನೆನಿನ್ನಮಗನಂಬಿಕಾಪೂಜೆಗಿಂತಾ
ಯ್ತುಬಳಿಕಿತೆಂದವನು||೫೨||ಹಂಮ್ಮೈಸಿದಂದುಷ್ಟಬುದ್ಧಿನಯುದೊಳಗಳಿಯು।
ನಂಮನೆಗೆಬೀಳ್ಕೊಟ್ಟನರಿದರಿದುಪರಹಿಂಸೆ। ಯುಂಮಾಡಿಮಾನವಂಬಾಳ್ದ
ಪನೆದೀಪಮುಂಕೆಡಿಸುವಪತಂಗದಂತೆ ॥ ನಮ್ಮುಮ್ರಪಾಯುವೆನಮಗಪಾಯು
ಮಂತಂದುದೆಂ । ದೊಮ್ಮೆನಿಜಸದನಮಂಪೊಕ್ಕಾರುಮರಿಯುದೋ । ಉ
ಮ್ಮಳಿಶೋಕದಿಂಪೊರಮಟ್ಟು । ನೇರಿಳಿದುಕೋಂಟೆಯುಂಕತ್ತಲೆಯೊಳು॥
ವಿಾಂಟುವಗ್ಗದಶೋಕದಿಂದಿರದೆಪೊರಮಟ್ಟು । ನಾಂಟುವೊತ್ತುವಮುಳ್ಳ
ಕಲ್ಗಳಂಬಗೆಗೊಳದೆ ।ದೀಂಟುಗುಳಿಗಳನರಿಯುದೇಳುತ್ತಬೀಳುತ್ತತಲೆಗೆದ
ರಿಬಾಯಿವಿಡುತ ॥ ಕೋಂಟೆಗಳನೇರಿಳಿದುಪರಿಘೆಯುಜಲಂಗಳಂ । ದಾಂ
ಟಿಕತ್ತಲೆಯೊಳೋರ್ವನೆಮಂತ್ರಿವೊಳಪೊರ ।ದೋಂಟದೆಡೆಯೋಳ್ನೆಲಸಿ
ದಂಬಿಕಾಭವನಮಂಸಾರ್ದನದನೇವೇಳ್ವೆನು॥೫೪॥ಪರಿದಪೂಮಾಲೆಗಳಬಂ
ಣಗಳ್ಗಳಬಲಿಯು । ಮೊರದಪಳೆಗೊಳ್ಳಿಗಳಭಸ್ಮವಾದೊಡಲುಗಳ।ಮು
ರಿದಗೂಡುಗಳಂಕಳಲ್ದಸಿಬಿಕೆಗಳಚಿತಿಯೋಳ್ಬೀವಕುಣಪಂಗಳ ॥ ತುರು
ಗಿದೆಲುವಿನಜಂಬುಕಾವಳಿಯುಗೂಗೆಗಳ ।ಬಿರುದನಿಯುಭೂತವೇತಾಳಸಂ
ಕುಲದಡಗಿ । ನರಕೆಗಳಸುಡುಗಾಡೊಳಾಮಂತ್ರಿಚಂಡಿಕಾಲಯುದೆಡೆಗೆನ
ಡೆತಂದನು ||೫೫|| ತಂಡತಂಡದಭೂತವಿತತಿಗಳ್ತಲೆಗೆದರಿ । ಕೊಂಡುಪೇ
ರ್ಮರುಳ್ಗಳಂತೆಬಹದುಷ್ಟಬುದ್ಧಿಯುಂ । ಕಂಡುತಾವತಿಪಾತಕಂಗಳಂಮಾ
ಡಿಗಪಿಶಾಚರಗ್ಗಳೆಯುರೆಮ್ಮ॥ಹಿಂಡೊಳಿವನವೊಲಾರುಮಿಲ್ಲಾವಪಾಪದು।
ದ್ದಂಡವೊಹಿರಂಣ್ಯಕಶಿಪುವಿನೆದೆಯುನುರೆಬಗಿದ । ಚಂಡದೈವದಪೆಸರನು

ಸುರುವನದೆಸೆಗಲ್ಲದಳುಕನಿವನೆನುತಿರ್ದುವು॥೫೬॥ಪಾಕಶಾಸನತನಯಕೇ
ಳ್ಬಳಿಕವಂತ್ರಿಸುತ।ಶೋಕದಿಂದಲ್ಲಿಹಮರುಳ್ಗಳಂಕಾಣದವಿ।ವೇಕದಿಂಬೇ
ವಕುಣದದಚಿತಿಯೊಳುರಿವಕಾಷ್ಠಂಗಳಂತೆಗವುಕೊಂಡು ॥ ಆಕಾಳಿಕಾ
ಲಯಕೆಬಂದದರಬೆಳಕಿನೋ। ಳ್ವ್ಯಾಕೀರ್ಣಕೇಶದನಿಮಿರ್ದಕೈಕಾಲುಗ
ಳ। ನೇಕಾಯುಧದಘಾಯದೊಡಲರುಧಿರದಪೊಸಲಸುಕುಮಾರನಂಕಂಡ
ನು ॥೫೭॥ ಉನ್ನಿಸಿದನಿಜಮನೋರಥಮುಡಿದೊರಗಿದಂತೆ। ತನ್ನಕುಲತ
ರುಮುರಿದುಬಿದ್ದಂತೆಸೌಭಾಗ್ಯ। ದುನ್ನತಪ್ರಾಸಾದವ್ರೋರ್ಗ್ಗುಡಿಸಿಕಂಡಂ
ತೆಮುರಿದವಿಾಸೆಗಳವೊಗದ ॥ ಬಿನ್ನಣದಬಿಟ್ಟಕಂಗಳಬಿಗಿದವುರ್ಬ್ಬುಗಳ।
ಕೆನ್ನೀರೊಳದ್ದಕೇಶದಶೋಣಿತಾಂಬರದ। ಪೊನ್ನದೊಡಿಗೆಯನಂದನಂ
ಚಂಡಿಕಾದೇವಿಮುಂದೆಸೈಗೆಡದಿರ್ದನು ॥೫೮॥ ಕೈಯೊಳಿಹಕಾಷ್ಠಂಗಳಂ
ಬಿಸುಟುತನುಭವನ।ವೈಯಘಾಯಂಗಳಂತಡಹಿತಕ್ಕೈಸಿಮುಗುಳ್ದೊಯ್ಯ
ನೊಯ್ಯನೆಕುಳ್ಳಿರಿಸಿವೊಗಕೆವೊಗವಿಟ್ಟುಚುಂಬಿಸಿಕುಮಾರನಿನ್ನ ॥ ತ್ರೈ
ಯ್ಯನಾಂಬಂದೆನೇಳ್ಕೈತಂದೆನಾಡನಾ।ರಯ್ಯಬೇಡವಕಂದಕುಂತಳಾಧೀಶನೇ
ಗಯ್ಯುಹೇಳಿದನೆನಗೆವಿವರಿಸನೆಸುಮ್ಮನಿರ್ದಪೆಯೆಂದೊರಲ್ದನವನು॥೫೯॥
ಬಂದನಿದೆಶಶಿಹಾಸಗನುಜೆಯಂಕೊಡುವಿಪ್ರ। ವೃಂದಮಂದಣಿಸುಬಹುವಿ
ಧದಿಂದವುನಾಂಬೈದೆ। ನೆಂದುನಿದಿರಬೇಡವೈಷ್ಣವದ್ರೋಹದಿಂದೆನಗಿಂತು
ಟಾಗದಿಹುದೆ ॥ಕೆಂದನೀನಚ್ಯುತಪರಾಯಣಂಶಿವಪೂಜ। ಕಂದೇವಗುರುಧ
ರಾಮರಸೇವಕಂವೋಸ। ದಿಂದಳಿವುದುಚಿತವೆಮನದತಂನವರಿಯಾನೆ
ಹಾಯೆಂದೊರಲ್ದನಂದು ॥ ಮಿತ್ರಪ್ರಿಯಂರಾಜತೋಷಿತಂಮಂಗಳಚ।
ರಿತ್ರಂಬುಧಾಶ್ರಯಂಗುರುಭಾವಿಕವಿನುತವಿ। ಚಿತ್ರಗುಣಿಮಂದರನಿಭಂ
ಭೋಗಿಸಂತತಂಧ್ವಜವಜ್ರಶುಭಶರಣನು ॥ ಪುತ್ರನಿನಗಿರ್ದಪುದುನವಗ್ರ
ಹಸ್ಥಿತಿಗಳ್ಪ। ರಿತ್ರಾಣವುಂಮಾಡಿದವರಿಲ್ಲನಿನಗಾನೆ।ಶತ್ರುವಾದೆಂಮಗನೆ
ಹಾಯೆಂದುಹಲುಬಿದಂಮಂತ್ರಿಶೋಕಾರ್ತನಾಗಿ ॥೬೦॥ ಕಂಬನಿಗಳರು
ಣಾಂಬುವಂತೊಳೆಯೆಮುಂಡಾಡಿ। ಪಂಬಲಿಸಿಹಲುಬಿದಂಮರುಗಿತನ್ನಿಂ
ದಳಿದ। ನೆಂಬಳಲ್ಮಿಗೆಮಂತ್ರಿಸೈರಿಸದೆಕೆಲಬಲದಕಂಬಂಗಳಂಪಾಯಲು॥
ಕುಂಬಳದಕಾಯಂತೆಚಿಪ್ಪಾಗಿನಿಜಮಸ್ತ। ಕಂಬಿರಿದುಬಿದ್ದನುರ್ವಿಗೆಪ್ರೋ
ದುದಸುಕಾಯ।ದಿಂಬಳಿಕಸಂದಿದಸೊಡರ್ಗ್ಗಳೆನೆವ್ಮೃತರಾಗಿಸುತತಾತರಿರು
ತಿರ್ದ್ದರು ॥೬೧॥ ಆರಿಯರಾರುಂಪುರದೊಳಿವರಿಲ್ಲಿಮಡಿದುದಂ। ತುರುಗಿದ
ತಪೋಂಧವೊಯ್ಯನೆಜಾರಿತಳಿಕುಲದ।ಸೆರೆಬಿಟ್ಟುದಂಬುಜದೊಳ್ದೊಡನೆ
ತಲೆದೋರಿದಂತರಣಿಮೂಡಣದೆಸೆಯೊಳು ॥ ಪೊರೆಮಟ್ಟುಚಂಡಿಕಾಲಯ

ಕೆಸ್ಪೊಸಪೂಗಳಂ । ತಿರಿತಂದುಪೂಜಿಸುವಡೊಳಪೊಗುವತಾಪಸಂ। ಬೆರತು ಬಿದ್ದಿಹತಂದೆಮಕ್ಕಳಂಕಂಡುಹಂವ್ಯೈಸಿವಿಸ್ಮಿತನಾದನು ॥ ಪಟ್ಟಣದೊಳಿ ರುಳೊಸಗೆಪಸರಿಸಿತುರಾಜ್ಯವುಂ। ಬಿಟ್ಟುವನಕ್ಕೈದಿದಂಕುಂತಳಾಧೀಶ್ವರಂ। ಪಟ್ಟಮಾದುದುಚಂದ್ರಹಾಸಂಗೆಸೂನುಸಹಿತೀದುಷ್ಟಬುದ್ಧಿಗಿಲ್ಲಿ॥ ಕೆಟ್ಟಿಣಿ ಸಿದವರಾರೊಶಿವಶಿವಾದ್ಭುತಮೆನುತ । ನೆಟ್ಟನೆನೃಪಾಲಯಕೆತಾಪಸಂಬಂ ದುವೊರೆ ।ಯಿಟ್ಟಡೆಕುಳಿಂದಜಂಕೇಳ್ದಿರದೆಪೊರಮಟ್ಟುಕಾಲ್ವಡೆಯೊಳೈ ತಂದನು ॥೬೪॥ ಚಂಡಿಕಾಲಯಕಖಿಳಜನಸಹಿತನಡೆತಂದು । ದಿಂಡುಗೆಡ ದಿಹವಾವವ್ಯೈದುನರಹಾನಿಯುಂ । ಕಂಡುಕಡುಶೋಕದಿಂದುರೆನೊಂದು ಚಂದ್ರಹಾಸಂದೇವಿಯುಂನೋಡುತ ॥ಖಂಡಿಸಿದೆಲಾತನ್ನಭಾಗ್ಯಮಂತಪ್ಪಾ ವು। ದಂಡೆಳೆದುಪಡೆವೆನಿವರಸುಗಳಂವಿಾರಿದೊಡೆ । ಪುಂಡರೀಕಾಂಬಿಕನ ಸಾಯುಜ್ಯಮೆನಗಾಗಲೆಂದುನಿಶ್ಚಿತನಾದನು ॥೬೫॥ ರಭಸದಿಂದೈತಂದು ಗೋಳಿಡುವಬಂಧುಜನ । ಕಭಯಮಂಕೊಟ್ಟುನಿಶ್ಚಲನಾಗಿಶಶಿಹಾಸ। ನ ಭವನರಸಿಯುಮುಂದೆಚತುರಶ್ರದೋಳ್ಕುಂಡಮಂತೆಗೆಸಿಬಳಿಕದರೊಳು॥ಅ ಭಿಶೋಭಿಸುವೊಲಗ್ನಿಯುಂಪ್ರತಿಷ್ಠಿಸಿವಿಪ್ರ । ಸಭೆಸಹಿತಕುಳ್ಳಿರ್ದುಬಲಿ ದೀಪಮುಂತಾದ। ವಿಭವಂಗಳಂಮಾಡಿಘೃತಪಾಯಸಾಜ್ಯತಿಲಹೋಮಂ ಗಳಂಚೇಳ್ದನು ॥೬೬॥ ಹೇಳಲೇನೈಪಾರ್ಥಚಂದ್ರಹಾಸಂಬಳಿಕ । ಬಾ ಳಿಂದನಿಜದೇಹಮಾಂಸಮಂಕೊಯಿಕೊಯಿದು । ಚೇಳಿಪೂರ್ಣಾಹುತಿಗೆ ಶಿರವನರಿದಪೆನೆಂದುಖಡ್ಗಮಂಗೋಣ್ಗೆಪೂಡಿ ॥ ಕಾಳಿನೀನಖಿಳಶಕ್ತಿಗಳ ರೂಪಂಗಳಂ। ತಾಳಿಸರ್ವಾತ್ಮಕನಕೂಡೆರಮಿಸುವೆಯಲಾ । ವ್ಯಾಳಶಾ ಯಿಗೆಸಮರ್ಪಿತಮಾಗಲೊಪ್ಪಿಗೊಳ್ಳೆಂದರಿಯಲನುವಾದನು ॥೬೭॥ ಬೆ ಚ್ಚಿದಂತೆಸೆವಪೀಠವನಿಳಿದುರುದ್ರಾಣಿ । ಬೆಚ್ಚರದೊಳೈತಂದುಕಯ್ಯಬಾ ಳಂಪಿಡಿದು । ನಿಚ್ಚಟದಹರಿಭಕ್ತಿಗಾಂಪ್ರೀತಿಯಂತಳೆದೆನಾತ್ಮವಧೆಬೇಡನಿ ನಗೆ ॥ ಪೆಚ್ಚಿಸಿದಕುಮಂತ್ರಪಾಪದೊಳಳಿದನೀಮಂತ್ರಿ । ವೆಚ್ಚಿಸಿದನಸುವ ನಾತನಸುತಂನಿನಗಾಗಿ । ಮಚ್ಚಿಸಿದೆನೀಂಮಗನೆಬಯಕೆಯುಂಪೇಳೆರಡುವೆ ರವನಿತ್ತಪೆನೆಂದಳು ॥೬೮॥ ದೇವಿಯಪದಾಂಬುಜದೊಳೆರಗಿಕೈಮುಗಿದು ನಿಂ । ದಾವಾವಜನ್ಮಜನ್ಮಾಂತರದೊಳೆನಗೆರಾ । ಜೀವನಾಭನಭಕ್ತಿದೊ ರಕೊಳಲಿದೊಂದುಮಡಿದಿಹಮಂತ್ರಿಮಂತ್ರಿಸುತರು ॥ ಜೀವಿಸಲಿದೊಂದೀ ಗಲಿಂತೆಗಡುವರಮಂಕೃ । ಪಾವಲೋಕನದೊಳಿತ್ತಪುದೆಂದುಮತ್ತೆಚರ ಣಾವನತನಾಗಲ್ಕೆಪಿಡಿದೆತ್ತಿಕ್ಷತಮುಡಗೆವ್ಯೈದಡವುತಿಂತೆಂದಳು ॥೬೯॥ ಜ ಗದೊಳಾರಚ್ಯುತಪ್ರೀತಿಯುಂಮಾಡುವ । ರ್ಮಗನೆತನಗಿಷ್ಟರರ್ವಾಬಾಲ್ಯ

ದಿಂದನೀ । ನೆಗಘರಥ್ಯಾನಪರನಾಗಿರ್ಪೆನಿನ್ನ ಚರಿತವನೋದಿಕೇಳುವರ್ಗೆ॥
ಮಿಗೆವರ್ಧಿಪುದುಮುಕುಂದಾಭಿರತಿಮುಂದಕಲಿ । ಯುಗದೊಳೆನ್ನಾಜ್ಞೆ
ಯಿದುಹರಿಭಕ್ತಿನಿನಗೆಬೆಳ । ವಿಗೆಯಾಗದಿರ್ದಪುದೆನಿನ್ನ ವಾಂಛಿತಕಿನ್ನಕ
ಡೆಯುಂಟೆಹೇಳೆಂದಳು ॥೨೦॥ಎಂದುಕಾರುಣ್ಯದಿಂತಾನೊಮ್ಮೆ ಕಣ್ಮುಚ್ಚಿ ।
ನಿಂದುಧ್ಯಾನಿಸಲಾಗತಲೆದೋರಿತಾಕ್ಷಣದೊ ।ಳೊಂದುವೈಷ್ಣವಶಕ್ತಿ ಬೆಳ
ಸಿದಾಯುಧಜಾಲದಿಂಪರಸಿಕೊಟ್ಟು ಬಳಿಕ ॥ ಇಂದುಹಾಸನಮಸ್ತಕದಮೇ
ಲೆನಿಜಕರವ । ನೊಂದಿಸಿತದೀಯ್ಯಮಂತ್ರೋಪದೇಶಂಗೈದ ।ಳೆಂದುಕರ್ಣ
ದೊಳಾನತಪ್ರೀತೆಗಿರಿಜಾತೆವಿಖ್ಯಾತೆಲೋಕಮಾತೆ ॥೨೧॥ ತಾಯೆಪಾರ್ವತಿ
ಪರಮಕಲ್ಯಾಣಿಶಂಕರ । ಪ್ರಿಯೆಸರ್ವೇಶ್ವರಿಜಗನ್ಮಾತೆಸನ್ನುತ । ಛಾ
ಯೆಸಾವಿತ್ರಿಶಾರದೆಸಕಲಶಕ್ತಿರೂಪಿಣಿಕಾಳಿಕಾತ್ಯಾಯನಿ ॥ ಶ್ರೀಯೆವೈ
ಷ್ಣವಿವರದೆಚಂಡಿಚಾಮುಂಡಿನಿರ । ಪಾಯೆನಿಗಮಾಗಮಾರ್ಚಿತೆಮಂತ್ರ
ಮಯೆಮಹಾ । ಮಾಯೆರಕ್ಷಿಪುದೆಂದುಕೈಮುಗಿದುಚಂದ್ರಹಾಸಂಬೇಡಿ
ಕೊಳುತಿರ್ದನು॥೨೨॥ ಹರಿಯುವಕ್ಷಸ್ಥಳವನಜನವದನಾಬ್ಜಮಂ । ಗಿರಿಶನ
ಕಳೇಬರಾರ್ಧವನಿಂಬುಗೊಂಡೆಸೆವ। ಪರಮಕಲ್ಯಾಣಿಕಾಲತ್ರಯದುಪಾ
ಸ್ತಿಗಧಿದೇವಿಗಾಯತ್ರಿವರದೆ। ಗರುಡವಾಹನೆಹಂಸಗಮನೆವೃಷಭಾರೂಢೆ।
ನಿರುಪಮಫಲಪ್ರದಾಯಕಿಪುಣ್ಯಮಯೆಸಕಲ । ದುರಿತಹರೆತನ್ನನುದ್ಧರಿ
ಸೆಂದುಚಂದ್ರಹಾಸಂಬೇಡಿಕೊಳುತಿರ್ದನು ॥೨೩॥ ಮೊಳಗಿದುವುದೇವದುಂ
ದುಭಿಗಳಂತಾಗಪೂಮಳೆಗರೆದುದಭ್ರದೋಳೊಕ್ಕಂಡಾಡಿತ್ತಮರತತಿ ।ಬಳಿಕ
ಕಾಂಭವಿಮಾಯವಾದಳಸುಪಸರಿಸಿತುಮದನಮಂತ್ರಿಗಳೊಡಲೊಳು ॥ ಬ
ಲರೂಪಕಾಂತಿಗಳ್ಮನ್ನಿಸಂದದೊಳೆಸೆಯೆ । ಮಲಗಿದವರೇಳ್ವಂತೆಕಣ್ದೆ
ರೆದುಕುಳ್ಳಿರ್ದ।ರೊಲವಿನಿಂಚಂದ್ರಹಾಸಂಮಾಪನಡಿಗೆಮಣಿದಪ್ಪಿದಂಮೈ
ದುನನನು ॥೨೪॥ ಭೂವಲಯಕಿದುಪೊಸತುಮರಣವಾದೊಡೆಮತ್ತೆ ।
ಜೀವಮಂಬರಿಸಿದವರುಂಟೆನಿನ್ನವೋಲೆಂದು । ಕೈವಾರಿಸುವನಿಖಿಳಪೌರ
ಜನಪರಿಜನಕೆಚಂದ್ರಹಾಸಂಮುದದೊಳು ॥ ಕಾವರಾರ್ಕೊಲ್ವರಾರಳಿವ
ರಾರುಳಿವರಾ । ರ್ಭಾವಿಪೊಡೆವಿಷ್ಣುಮಾಯಾಮಯಮಿದೆಂದರಿದು ।ನೀವೆ
ಲ್ಲರುಂಕೃಷ್ಣಭಜನೆಗೈದಪುದೆಂದುಸಾರಿದಂಬೇಡಿಕೊಳುತ ।.೨೫॥ ಆಮ್ಮ
ಡಿಸಿತುತ್ಸವಂಬಳಿಕನಿಬರೆಲ್ಲರುಂ । ಸುಮ್ಮಾನದಿಂದನಗರಪ್ರವೇಶಂಗೈದ।
ರುಮ್ಮಳಿಸುತಿರ್ದಂಕುಳಿಂದಕಂಪಾರ್ಥಕೇಳಾಚಂದನಾವತಿಯೊಳ್ಳು ॥ ಸ
ಮ್ಮತದೊಳಾತನಂಕರೆಸಿಕೊಂಡಾರಾಜ್ಯ । ಮಂಮಹಾವಿಭವದಿಂವರಿಸಿ
ದಂಚಂದ್ರಹಾ । ಸಂಮುದಾನ್ವಿತನಾಗಿವಿಷಯೆಚಂಪಕಮಾಲಿನಿಯುರಸಂ

ಭೋಗದಿಂದ ॥೨೭॥ ನಂದನಂಜನಿಸಿದಂಬಳಿಕವಿಷಯಾಗರ್ಭ । ದಿಂದಮ
ಕರಧ್ವಜಾಖ್ಯಂಕೂಡೆಸೌಭಾಗ್ಯ । ದಿಂದಚಂಪಕಮಾಲಿನಿಯುಬಸುರೊ
ಳುದಿಸಿದಂಪದ್ಮಾಕ್ಷನೆಂಬಸೂನು ॥ ತಂದೆಗಿಮ್ಮಡಿಪರಾಕ್ರಮಿಗಳಾದರ್ಧ
ರೆಯೊ । ಳಿಂದುಹಾಸಂಗೆಸಮನಾದದೊರೆಯಿಲ್ಲಾದು । ದಿಂದುವರೆಗಾತಂ
ಗೆಮೂನ್ನೂರುವರುಷಮಿರ್ದಪನೀಗವೃದ್ಧನಾಗಿ ॥ ಬುದ್ಧಿಪೂರ್ವಕವಿಲ್ಲದಿ
ಹಬಾಲಕಂಗೆಸರಿ । ಶುದ್ಧಸಾಲಗ್ರಾಮಶಿಲೆಯಸಂಸರ್ಗದಿಂ । ದುದ್ಧತದ
ಸಾಮ್ರಾಜ್ಯಪದವಿಕೈಸಾರ್ದುದೆನಲಿನ್ನುಪೇಳ್ಕೆಂದುಬಯಸಿ ॥ ಶ್ರದ್ಧೆಯಿಂ
ಪ್ರತಿದಿನದೊಳರ್ಚಿಸುವನರಸಾವ । ಸಿದ್ಧಿಯಿಂಪಡೆದಪನೋತನಗೆದರಪು
ಣ್ಯಾದಭಿ । ವೃದ್ಧಿಯಂಬಣ್ಣಿಸುವೊಡರಿದೆಂದುಫಲುಗುಣಂಗಾನಾರದಂಪೇ
ಳ್ದನು ॥೨೮॥ ಹರಿಯಸಾಲಗ್ರಾಮಶಿಲೆಯಮಹಿಮೆಗಳನಾ । ದರದಿಂದವಿ
ಸ್ತರಿಸಿಚಂದ್ರಹಾಸನಪೂರ್ವ । ಚರಿತಮಂಪೇಳ್ದುವಂದನೆಗೊಂಡುದೇವ
ಮುನಿಸರಿದನಂಬರಪಥದೊಳು ॥ ವರಭಾಗವತಶಿರೋಮಣಿಯುದರುಶನ
ದಿಂದ । ಪರಮವೈಷ್ಣವಸಂಗತಿಯುಸಾಲಿಸಿದನೆಂದು । ಸುರನಗರದೊಡೆ
ಯಲಕ್ಷ್ಮೀಪತಿಯುಮೈದುನಂಪರಿತೋಷಮಂತಾಳ್ದನು .. ॥೨೯॥

ಸಂಧಿ ೩೧ಕ್ಕೆ ಪದ್ಯ ೧೨೫೧ಕ್ಕೆ ಮಂಗಳಮಸ್ತು.

---

## ಮೂವತ್ತೆರಡನೆಯ ಸಂಧಿ.

ಸೂ॥ ವರಚಂದ್ರಹಾಸನಂಪ್ರೀತಿಯಿಂದೊಡಗೊಂಡು । ಶ
ರನಿಧಿಯಮಧ್ಯದೊಳ್ಬಕದಾಲ್ಭ್ಯನಂಕಂಡು । ಮರಳಿಕೃಷ್ಣಾ
ರ್ಜುನರುಸಿಂಧುದೇಶದಮೇಲೆಗಜನಗರಿಗೈತಂದರು

ಕೇಳ್ದಿಲಾನರನಾಥಪಾರ್ಥಂಗೆನಾರದಂ । ಪೇಳ್ದವೃತ್ತಾಂತಮಂಬಳಿ
ಕಸಂತೋಷಮಂ । ತಾಳ್ದುಕುಂತೀಸುತಂಚಂದ್ರಹಾಸನಪುರಕೆಮುಖಮಾ
ಗಿನಡೆವುತಿರಲು ॥ ಆಳ್ದೇರಿತನುತಮಗೆಭೂಪಾಲರೈದಕೆಂ । ಧೂಳ್ದೀವ
ಲೋಕಮಂಕಿತ್ತೆತ್ತಿಕೊಂಡೊಯ್ದು । ದಾಳ್ಬದಿನ್ನೇನಂಬುಧಿಯೊಳವನಿ
ತಳಮಂಬಚ್ಚರನಾಗೆಪದಹತಿಯೊಳು ॥೧॥ ಬರುತಿರ್ದುದರ್ಜುನನಸೈನಿಕಂ
ಕುಂತಳನ । ಗುಂಗಾಗಿಜನಮೋಜಯುಕ್ತಿಪಕೇಳಿತ್ತು । ನರನವಾಜಿಗಳೂ
ರಪ್ಪೊಗವಳಯದುಪವನದನಡುವೆತಮ್ಮಿಚ್ಛೆಯಿಂದ ॥ ತಿರುಗುತಿರೆಕಂಡವ
ರ್ಕೌತುಕಮನಾಂದುಬಂ । ದೊರೆಯೆಪದ್ಮಾಕ್ಷಮಕರಧ್ವಜರ್ಪಿಡಿದದರ । ಶಿ
ರದಪಟ್ಟದಲಿಪಿಯನೋಡಿವಿಸ್ಮಿತರಾಗಿತಂದೆಗೊಪ್ಪಿಸಿನುಡಿದರು ॥೨॥ ಪೇ

ಯುಬಿನ್ನಪವನನವಧರಿಸಿಳಿಯುಮೇಲೆಕೌಂ। ತೇಯುನಮಹಾಧ್ವರದವಾಜಿಗೆ
ಳ್ತಿರುಗಿತರು। ವಾಯೊಳಿಲ್ಲಿಗೆಬಂದೊಡಾವ್ರಕಟ್ಟದಪಿನ್ನುಬಿಡಿಸಿಕೊಂಬ
ತಿಬಲರನು ॥ ಸಾಯಕದವೊನೆಯೊಳ್ಳೈಸಲೆಕಾಣಬೇಕೆನ। ಲ್ಪ್ರೀಯದಿಂ
ತನುಮರಂತೆಗೆದಪ್ಪಿತಾನಭಿ। ಪ್ರಾಯುಮಂತಿಳಿದುಹರುಷಿತನಾಗಿಚಂದ್ರ
ಹಾಸಂನಯದೊಳಿಂತೆಂದನು ॥೩॥ ಮಕ್ಕಳರಕೇಳಿತಾನಾಬಾಲ್ಯದಿಂದಬಿ
ಡ। ದಕ್ತರಿಂಪಿತ್ತದೋಳ್ಶಾಧ್ಯನಿಸುವದೇವನಿನಿ। ತಕ್ಕೆವ್ಯೈದೋರುವಂ
ಪಾರ್ಥನಸಹಾಯಕ್ಕೈತಂದುನಿಮಗೆರಿವನಿದನು ॥ ಸಿಕ್ಕಿದರೆಕೃಷ್ಣದರುಶ
ನದಪುಣ್ಯವೇನಾಕು। ಮಿಕ್ಕಸುಕೃತದಫಸಣಿಯೇಕಿನ್ನುಧಮಾರ್ಧ್ವ। ರ
ಕ್ಕೆತಿರುಗುವಕುದುರೆಗಳನಿಲ್ಲಿಕಟ್ಟದರೆಪುರುಷಾರ್ಥಮೇನೆಂದನು ॥೪॥ ಧ
ರಣಿಯೊಳ್ಪ್ರತ್ಯಕ್ಷಧರ್ಮದಾಕೃತಿಯುಧಿಷ್ಠಿರಭೂಪನಾತನಹಯಂಗಳಂತ
ಡೆದಪರೆವ। ಪಿರಿದಾಯುಸಳಛಳವರ್ಷಾಲಿಸಿದರಿನ್ನೆಗಂದಶಮಾಸದಿಂದಮೀ
ರೆ॥ ಅರೆದಿಂಗಳಾದುದಿಂನಿಹುದುಪಕ್ಷತ್ರಯಂ।ವರುಷಕಲ್ಲಿಂದಮುಂದಲ್ಲಿಸೀ
ಕ್ಕಿರ್ದಡ್ರ। ಧ್ವರಮುಳಿವುದದರಿಂದನೀವೆರಕ್ಷಿಸಿಪಾಂಡವಂಗಕೊಟ್ಟಪುದೆಂ
ದನು ॥೫॥ ತನ್ನಹೇಳಿಕೆಯೊಳಲ್ಲದೆಕೃಷ್ಣಫಲುಗುಣ। ಗಿನ್ನುಸಿಕ್ಕಿದಹ
ರಿಗಳಂಬಿಡದೆಭೂಮಿಯೊ। ಳ್ಸನ್ನದ್ಧರಾಗಿಪಾಲಿಸಿನೀವುಯಜ್ಞಕಾಲಕ್ಕೆ
ಧರ್ಮಜಂಗೆಕೊಡಲು॥ಉನ್ನತದಸುಕೃತಮೊದಪ್ರದುನಮಗೆಂದುಸಂ। ಪ
ನ್ನಮತಿಚಂದ್ರಹಾಸಂನಿಜಕುಮಾರರಂ। ಮನ್ನಿಸಿತುರಂಗರಕ್ಷೆಗೆಕಳುಹಿಂಬ
ಲಸಹಿತಪೊಳಲಪೊರಗಿರುತಿರ್ದನು ... ... ॥೬॥

ತುರಗಂಗಳಂಬಿಟ್ಟದರಕೂಡೆಸೇನೆಸಹಿ। ತಿರದೆಪದ್ಮಾಕ್ಷಮಕರಧ್ವಜ
ಪ್ರೋದಬಳಿ।ಕರವಿಂದನಾಭದರ್ಶನಕೆಲೋಲುಪನಾಗಿಚಂದ್ರಹಾಸಂಮು
ದದೊಳು॥ ಪುರದಹೊರವಳಯದೊಳ್ಸೇನೆಯಂಕೂಡಿಕೊಂ।ಡಿರುತಿರ್ದ
ನನ್ನೆಗಂಮೇರೆದಪ್ಪಿದಮಹಾ। ಶರಥಿಯಂತರ್ಜುನನಮೋಹರಂತಲೆದೋ
ರಿತೆತ್ತಣಾಶ್ಚರ್ಯಮೆನಲು ॥೭॥ ಸಮತಳಿಗೆಫಲುಗುಣನಸೇನೆಬಹುದಂ
ಕಂಡು। ಸಮರಕಭಿಮುಖನಾಗಿತನ್ನಮೋಹರಸಹಿತ। ಸಮಚಂದ್ರಹಾಸ
ನೈತರಲಾಗಿಮುರಹರಂಸಕಲಭೂಪಾಲಕರನು ॥ ಕ್ರಮದಿಂದನಿಲಿಸಿಪಾ
ರ್ಥಂಗೆಸಾರಥಿಯಾಗಿ। ಕಮಲಸುಗದಾಶಂಖಚಕ್ರದಚತುರ್ಬುಜದ। ಕಮ
ನೀಯರೂಪಮುಂಕೈಗೊಂಡುಬಿಟ್ಟನಾತನಸಮ್ಮುಖಕೆರಥವನು ॥೮॥
ನೋಡಿದೈಪಾರ್ಥನೃಪಶ್ಣವಶಿರೋಮಣಿಯುನೆನ।ಮೂಡಿಮುಳುಗುವಮಾ
ಧವಧ್ಯಾನಚೇತನದ। ಸೂಡಿದಮುಕುಂದಪಾದಾಬ್ಜತುಲಸಿಯುಪೂತಮಸ್ತ
ಕದಸತ್ವಗುಣದ॥ಬೀಡೆನಿಪಕಲಿಚಂದ್ರಹಾಸನಂಕಂಡುತಾಂ।ಮಾಡಿದಗ್ಗ

ದಪುಣ್ಯದಿಂಜನ್ಮಸಫಲವಾ । ಯ್ತಾಡಲೇನೆಲೆದೇವತನ್ನಬಿನ್ನಪವನವಧರಿ
ಸೆಂದನಿಂದ್ರಸೂನು ॥೮॥ ಜ್ಞಾನವೃದ್ಧಂತಪೋವೃದ್ಧಂವಯೋವೃದ್ಧ । ನೀ
ನರೇಶ್ವರನೀತನೊಳ್ಕಾದಿಜಯಿಸುವವಿ । ಧಾನವೆಂತನಗೆಬೆಸಸೆಂದರ್ಜು
ನಂಕೇಳ್ದೊಡಸುರಾರಿಕರುಣದಿಂದ॥ಧ್ಯಾನಿಸುವನಾಬಾಲ್ಯದಿಂದೆನ್ನನೀತಂ
ಗೆ।ತಾನೊಲಿದೆನೆಂದುನಿಜರೂಪಮಂತೋರಲಾ ।ಭೂನಾಥನಂಬುಜಾಕ್ಷ
ನದಿವ್ಯಮೂರ್ತಿಯಂಕಂಡುಪುಳಕಿತನಾದನು ॥೯॥ ಕಂಬುಚಕ್ರಾಬ್ಜಕೌ
ಮೋದಕಿಗಳಂಧರಿಸಿ।ಪೊಂಬಟ್ಟೆಯಂತಾಳ್ದುಕೌಸ್ತುಭದಶೋಭಾವ।ಲಂ
ಬದಿಂಸರ್ವಾಭರಣದಿಭೂಷಿತನಾಗಿದಿವ್ಯಮಾಲೆಗಳನಾಂತು ॥ ತುಂಬಿದವ
ಯುವದಲಾವಣ್ಯಲಹರಿಗಳವಿಸ। ಟಂಬರಿವಕರುಣಾರಸದೆಳೆನಗೆಯುಸಿರಿಮೊ
ಗದ।ಶಂಬರಾರಿಯುಪಿತಂಪಾರ್ಥನರಥಾಗ್ರದೊಳ್ಕಣ್ಗೆಸೆದನಾನೃಪತಿಯು ॥
ಕಂಗಳನಿರೀಕ್ಷಣದಸೌಖ್ಯಮಂಸೂಸುವ್ರದ।ಕಂಗಳಪೊನಲ್ತೊಡೆಯೆಹರುಷ
ದಿಂದೇಳ್ವಪುಳ । ಕಂಗಳನೆಗಳ್ಕೆಯಿಂಭಯಭರಿತಭಕ್ತಿಬಾರಿಸೆರಥವನಿಳಿದು
ಬಂದು ॥ ಮಂಗಳಪವಿತ್ರಕೋಮಲಪಾದಪದ್ಮಯು । ಗ್ಮಂಗಳಸಮೀಪ
ದೊಳ್ಚಂದ್ರಹಾಸಂಪ್ರಣಾ।ಮಂಗಳವಿಧಾನಮಂಮಾಡುತಿರೆಹರಿತೆಗೆದುಬಿ
ಗಿಯಪ್ಪಿದಂಕೃಪೆಯೊಳು ॥೧೧॥ ಅಸುರಾರಿಬಳಿಕರ್ಜುನನವದನಮಂ
ನೋಡಿ।ನಸುನಗುತನುಡಿದನೇತಕೆಸುಮ್ಮನಿಹೆಧರ್ಮಿ । ಶಶಿಹಾಸನತಿಬಲಂ
ಪರಿಣತಂಧ್ರುವಸನ್ನಿಭಂತನಗೆಭಕ್ತನಿವನು ॥ ಒಸೆದುನೀನಾಲಿಂಗಿಸೆನೆದೇ
ವನಿಮ್ಮಡಿಗ।ಳುಸುರಿದಿರಲಾತನ್ನಮಾರ್ಗಗತಿಲೇಸನ್ಯ । ರೆಸಗುವಂದದೊ
ಳಾಚರಿಸೆಭಯಾವಹಮೆಂದುಭೀಷ್ಮಸಂಗರದೊಳೆನಗೆ ॥೧೨॥ ಅದರಿಂದ
ಕಾಳಗವೆತನಗೆಕರ್ತವ್ಯವಿಾ । ಪದದೊಳಾಲಿಂಗನಮುಚಿತಮಲ್ಲವೃದ್ಧನ
ಹ।ನದರಿಂದಬೇಕಾದೊಡೀತಂಗೆವಂದಿಸುವನೆನೆತನ್ನಕಿಂಕರರ್ಗೆ ॥ಮುದ
ದೊಳೆರಗಿದೊಡೆಮೇಣವರನಪ್ಪಿದೊಡೆತ।ಪ್ಪದುಮಾನವರ್ಗೆಕಾಪಿಲಗೋ
ಸಹಸ್ರದಾ।ನದಪುಣ್ಯಮೆನ್ನಭಕ್ತರನಾದರಿಪುದಧರ್ಮವೆಪಾರ್ಥಹೇಳೆಂದ
ನು ॥೧೪॥ ತನ್ನಶರಣರಜೀವನವೆತನಗೆಜೀವನಂ । ತನ್ನಶರಣರುಬೇರೆತೆಳಿ
ಯೆತಾಂಬೇರಲ್ಲ।ತನ್ನಶರಣರಹೃದಯಕಮಲದೊಳ್ಪ್ರತ್ಯಕ್ಷಮಾಗಿತಾ
ನಿರುತಿರ್ಪನು॥ನಿನ್ನತೆರದಲಮರುಳರಾರುಂಟುಲೋಕದೊ। ಳ್ನಿನ್ನತೆರ
ದಿಂದೀತನೆನಗೆಬೇಕಾದವಂ।ನಿನ್ನತೆರನೇನೆಂದುಜರೆದುಕೌಂತೇಯನಂಕೇ
ಳ್ದನಸುರಾರಿನಗುತ ॥೧೫॥ ಭೂಪಾಲಕೇಳ್ಬಳಿಕಫಲುಗುಣಂಕೃಷ್ಣನನಿ
ರೂಪಮಂಕೈಕೊಂಡುಹರುಷದಿಂದಾಗನಿ । ಷ್ಪಾಪನಾಗಿಹಚಂದ್ರಹಾಸ
ನಂಬಂದುಗಾಢಾಲಿಂಗನಂಗೈಯ್ಯಲು॥ ಆಪೊಡವಿಪತಿನುಡಿದನೆಲೆಪಾರ್ಥ

ಕದನದಾ। ಶಾಪಮಂ ನಿನ್ನೊಡನೆ ಮಾಡಿದೊಡೆ ನೃಪಮುಖಂ । ಲೋಪವು
ಹುದೆಂದು ಕಳುಹಿದೆನೆನ್ನ ತನುಜರಂ ತುರಗರಕ್ಷಾರ್ಥವಾಗಿ ॥೧೬॥ ಹಲವು
ಮಾತುಗಳೇಕೆನಮಗೆ ನಿಮಗಾಶ್ರಯಂ । ಜಲಜಾಕ್ಷನಾಗಿರ್ದ ಬಳಿಕಾವಧ
ರ್ಮಕಾ। ಶಲಮುಕಟನಾಕಿನ್ನು ಪಾರ್ಥ ನಿನ್ನ ಶ್ವಂಗಳಂತರಿಸಿಕೊಡುವನೆ
ನುತ॥ ಬಲಸಹಿತ ಕುದುರೆಗಾವಲ್ಗೆ ಪೋಗಿ ಹಸುತರ। ಬಳಿಗೆ ಚರರಂ ಕಳುಹಿ
ಕರಸಲವರೈತಂದು। ಫಲುಗುಣನ ವಾಜಿಗಳನೊಪ್ಪಿಸಿ ಮುರಾರಿಯಂ ಕಂಡ
ರತಿಭಕ್ತಿಯಿಂದ ॥೧೭॥ ನರನೊಡನೆ ಸಖ್ಯಮಾದುದು ಬಳಿಕ ಬಂದ ನೃಪ ।
ವರರೆಲ್ಲರಂ ಪ್ರಿಯದೊಳಾದರಿಸಿದಂ ಕೂಡೆ । ಹರಿಯನತಿಭಕ್ತಿಯಿಂ ದೈದೆ
ಕೊಂಡಾಡಿದಂ ನಿರುಪಮಸ್ತುತಿಗಳಿಂದ॥ ಪರಿಪರಿಯ ಗುಡಿ ತೋರಣಾವಳಿ
ಯ ರಚನೆ ಮಿಗೆ। ಪುರಕೆ ಬಿಜಯಂಗೈಸಿ ತಂದನುತ್ಸವದಿಂ। ದಸಿರಿಯನುರೆ ವಿಸ್ತ
ರಿಸಿ ಭೂಪ್ರರಂದರನಂತೆ ಚಂದ್ರಹಾಸಂ ಮೆರೆದನು ॥೧೮॥ ಇಂದುಹಾಸಾಶ್ರ
ಯದೊಳಿರ್ದಖಿಳ ಪುರಜನಂ। ಕಂದರ್ಪತಾತನಂ ಕಂಡು ಕೃತಕೃತ್ಯಮಾ ।
ಯ್ತಿಂದಿರಾವಲ್ಲಭನ ಸಂದರ್ಶನಕೆ ದುಷ್ಟಬುದ್ಧಿ ನಿಜಸೂನುಸಹಿತ॥ ಬಂದು
ನಿರ್ಧೂತಕಿಲ್ಬಿಷರಾದರಾಗಲ್ಕೆ। ತಂದು ಗಾಲವನಸುರಮರ್ದನನ ಪಾದಾರ
ವಿಂದಮಂ ವಿವಿಧಾಗಮೋಕ್ತಿಯಿಂ ಪೂಜಿಸಿದನತಿಭಕ್ತಿಭಾವದಿಂದ ॥೧೯॥
ಪ್ರೀತಿಯಿಂ ಚಂದ್ರಹಾಸಂ ತನ್ನ ರಾಜ್ಯಮಂ। ಪೀತಾಂಬರನ ಚರಣಸರಸಿರುಹ
ಕರ್ಪಿಸಿದ । ನಾತಂ ಧನಂಜಯನ ಸಮ್ಮತದೊಳಿಸೆದಂ ವಿಷಯಾಕುಮಾರಂಗೆ
ಕೊಟ್ಟು ॥ ಖ್ಯಾತಮಾದಖಿಳವಸ್ತುಗಳೊಡನೆ ಗಜಪುರಕೆ । ದೂತರಂ ಕಳು
ಹಿ ಸತ್ಕೃತನಾಗಿ ಭೂಪತಿ । ವ್ರಾತಸಹಿತಲ್ಲಿ ಮೂರಿರುಳಿರ್ದು ಪೊರಮಟ್ಟನೈ
ದೆ ಕುದುರೆಗಳ ಕೂಡೆ ॥೨೦॥ ಮುಪ್ಪಾದೆನೆಲೆ ಮಗನೆ ಕೃಷ್ಣದರುಶನದಿಂದ।
ತಪ್ಪದೆನಗಿನ್ನು ಮೋಕ್ಷದ ಲಾಭ ಮುಸುದಾರಿ । ಗೊಪ್ಪಿಸುವೆ ನೀತನುವನಿವ
ರಧ್ವರಂ ಮುಗಿದ ಬಳಿಕ ವನಕಾಂ ಪೋಪೆನು ॥ ಬಪ್ಪುದಿಲ್ಲದರಿಂದ ನಗರಕರ
ಸಾಸುಖಮಿಪ್ಪುದೆಂದಿರಿಸಿ ನಿಜತನಯರಂ ಶರಧಿಗೆಣೆ । ಯಪ್ಪ ಸೈನಿಕದೊಡ
ನೆ ಪೊರಮಟ್ಟನಾ ಚಂದ್ರಹಾಸನರ್ಜುನನ ಕೂಡೆ ॥೨೧॥ ಪುತ್ರಸಂಪದಮಾ
ಯುರಾರೋಗ್ಯಮರಿವುಶತ । ಪತ್ರನಾಭನ ಭಕ್ತಿ ದೃಢಮಾಗಲೀತನ ಚ। ರಿತ್ರ
ಮಂ ಕೇಳ್ದವರ್ಗೆಂದು ಹರಿ ವರವನಿತ್ತಾತನಂ ಕೂಡಿಕೊಂಡು ॥ ಸುತ್ರಾಮ
ಸುತನ ಕುದುರೆಗಳೊಡನೆ ತೆರಳ್ದಂಥ । ರಿತ್ರಿಯೊಳ್ದೇಶದೇಶದೊಳಿರ್ದ ಭುಜ
ಬಲದ । ಕ್ಷತ್ರಿಯೋತ್ತಮರಂಜೆ ತುರಗಂಗಳಂ ತಡೆಯ ಬಳಿನಮಿಸಿ ಬಿಡುತಿ
ರ್ದರು ॥೨೨॥ ರಾಯ ಕೇಳಾಶ್ಚರ್ಯಮಂ ಬಳಿಕ ವಾಜಿಗಳ್ವಾಯುವೇಗದೊಳೈ
ದಿ ಬಡಗಣ ಪಯೋನಿಧಿಯ । ತೋಯಮಂ ಪೊಕ್ಕು ನಡೆದುವು ಕೂಡೆ ಸಾಗ

ರಗವಾರಿಯೊಳ್ಕಾಲಿಡುವರೆ ॥ ದಾಯುಮಂಕಾಣದೆಧನಂಜಯಾದಿಗಳಿದ
ಕು । ಪಾಯಮಿನ್ನೇನೆಂದುಬೆಸಗೊಂಡೊಡಂಬುಜದ । ಳಾಯತಾಕ್ಷಂ
ಪೇಳ್ದನಿಂತೆಂದುನೆರೆದಿರ್ದಸಕಲಭೂಪಾಲಕರ್ಗೆ ॥೨೩॥ ಶುಭ್ರವಾಹನ
ಮಯೂರಧ್ವಜಪ್ರದ್ಯುಮ್ನ । ಬಭ್ರುವಾಹನಹಂಸಕೇತುನೃಪರಿವರ್ರ್ಯವ ।
ರಭ್ರವಾಹನನಂತೆಸರ್ವತ್ರಗಮನದವರೂಥದಮಹಾವೀರರು ॥ ವಿಭ್ರಾಜಿ
ಸುವಸಮುದ್ರದಮೇಲೆನಡೆಸುವಗ । ತಿಭ್ರಷ್ಟರಲ್ಲೆಂದುರುಕ್ಮಿಣೀಮುಖಪಂ
ಕ। ಜಭ್ರಮರನಾಪಂಚರಥಿಕರಂಕೂಡಿಕೊಂಡಂಬುನಿಧಿಯಂಪೊಕ್ಕನು ॥
ಸಾಗರದನಡುವೆಕುರ್ವ್ಕೆವರಹಯಂಗಳತಿ । ವೇಗದಿಂದೈದಲದರೊಡನೆ
ಪಾರ್ಥಾದಿಗ । ಳ್ಪೋಗಿಬಕದಾಲ್ಭ್ಯಋಷಿಯಂಕಂಡರಲ್ಲಿಕಣ್ಣೆವೆಗಳಂಮು
ಚ್ಚಿಕೊಂಡು॥ ಯೋಗದಿಂದಿರುತಿರ್ದನಧ್ರುವದಕಾಯಮಂ । ಸಾಗಿಸಲ
ದೇಕೆಂದುಕೊಳತೊಣಗಿಛಿದ್ರಂಗ । ಳಾಗಿದುರ್ದೊಂದಾಲದೆಲೆಯಂಬಿಸಿಲ್ಗ
ಳ್ಕಿತ್ತಲೆಮರೆಗೆಕಯ್ಯ್ಯಾಳಾಂತು ॥೨೪॥ ಸ್ಯಂದನಂಗಳನಿಳಿದುವಿನಯದಿಂ
ದೆಚ್ಚರಿಸಿ । ವಂದಿಸಿದೊಲರ್ಜುನಾದಿಗಳನಾಮುನಿವರಂಕಣ್ದೆ । ರೆದುಕಂ
ಡುಪುರುಷೋತ್ತಮಂಕ್ಷಣಿಕರಿವರ್ರ್ಯವರಂಕೂಡಿಕೊಂಡು ॥ ಬಂದನೀಮಂ
ಡಲದೊಳೆರವಿಲ್ಲತನಗಿನ್ನು । ಮುಂದೆಸುಖಮಾಗದಲ್ಪಾಯುಷದೊಳೇಗೈ
ವೆ । ನೆಂದುಬಕದಾಲ್ಭ್ಯಋಷಿನುಡಿಯೆವಿಸ್ಮಿತನಾಗಿಫಲುಗುಣಂಬೆಸಗೊಂ
ಡನು ॥೨೫॥ ಮೊಳಕಾಲ್ಗಳೆಡೆಯೊಳುದ್ಭವಿಸಿರ್ದಕಿಂಶುಕಂ । ಗಳಮೇಲೆ
ಗೂಡಿಕ್ಕಿಬಾಳ್ದಪುವುಪಕ್ಷಿಗಳ । ಬಳಗಂಗಳೊರಸಿಕೊಂಬುವುತೀಡೆಗಳ
ನಂಗದೋಳ್ಬಂದುಮೃಗತತಿಗಳು ॥ ಬೆಳದಿಹುವುಸುತ್ತಲುಂಪುತ್ತಗಳ್ನಿಮ್ಮ
ತೋ । ಳ್ಗಳಬಳಿಯೊಳಾಡುವುವುಸರ್ಪಂಗಳಿರಲೊಂದು । ನಿಳಯಮಂ
ಮಾಡದೇತಕೆಕಯ್ಯ್ಯೀಪತ್ರಮೆಂದುಪಾರ್ಥಂಕೇಳ್ದನು ॥೨೬॥ ಮುನಿಕಿ
ರೀಟಿಯನುಡಿಗೆನಸುನಗುತದುಃಖಭಾ । ಜನವಲಾಸ್ತ್ರೀಪರಿಗ್ರಹಮದಂ
ಪೋಷಿಸುವ । ಮನುಜನೆಣಿಸುವನೆಕೃತ್ಯಾಕೃತ್ಯಮಂಬಳಿಕವೋಷಮೆತ್ತ
ಣದವಂಗೆ ॥ ಕನಸಿನಸುಖಕ್ಕೆಳಸಿಬಿದ್ದಪನಧೋಗತಿಗೆ । ಜನನಮರಣಂ
ಗಳಬಳಲ್ಕೆಬೆಂಬಿಡದಿಹುದು । ವನಿತೆಯರತೊಡಕಿಂದಕೆಡುತಿಹುದುಲೋ
ಕಮದನೇಂಪಣ್ಣಿಸುವೆನೆಂದನು ॥೨೭॥ ಮಡದಿಮೊಗವೊಂಮೆಂದಿರಂಸಾಗಿ
ಸುವೆನೆಂತೊ । ಪ್ರೌಢವಿಬೆಳೆಬಾಳ್ಕೆಸಿರಿಕೀಲಾರಮನೆಫಳಿಸಿ । ದೊಡವೆಗಳ
ನಾರ್ಯೆವೆನೆಂತೊವೇದಾದಿಶಾಸ್ತ್ರಂಗಳಂಪಠಣದಿಂದ ॥ ಕಡೆಗಾಣಿಸುವೆನೆಂ
ತೊತಸಗೆಂದುಬಾಳುವಿಗೆ । ಬಿಡದೆಚಿಂತಿಸಿತಾಪಕೊಳಗಾಗಿಧರ್ಮದೋ ।
ಳ್ನಡೆಯದಾಶಾಪಾಶದಿಂದಸಂಸಾರದೋಳ್ಕೆಡುತಿಹುದುಜಗವೆಂದನು॥೨೮॥

ಅಂತಾಗಿದಾರಸಂಗ್ರಹಚರ್ಣಶಾಲೆಗಳ । ನಿಂತೊಲ್ಲದಚಿರಕಾಲದೊಳಳಿವ
ಕಾಯುಮಿದ । ಕೆಂತಿರ್ದೊಡೇನೆಂದುತಲೆಗೆತರಗೆಲೆವಿಡಿದುತಾಂಪೊತ್ತುಗಳ
ವೆನೆನಲು ॥ ಕುಂತೀಸುತಂಮತ್ತೆ ಕೇಳ್ದನಲ್ಪಾಯುಷ್ಯ । ಮಂತಳೆವುದೀಮ
ಹಾತ್ಮರಿಗೇಕೆಶಿವಶಿವಾ । ಪಿಂತೇಸುದಿನಮಾದುದೆಂದಿನಿಂದೀಪತ್ರಮಸ್ತಕ
ದೊಳಿಹುದೆಂದನು ॥ ೩೦॥ ಅತ್ಯಲ್ಪರಾಗಿಮಾರ್ಕಂಡೇಯರೋಮಶ । ಪ್ರ
ತ್ಯೇಕರಳಿದರಿವರೆನಿಬರೆಂದರಿಯೆನಾಂ । ಸತ್ಯಲೋಕವನಾಳ್ದರಿಪ್ಪತ್ತುಕ
ಮಲಸಂಭವರಿನಿತರೊಳ್ಮಡಿದರು॥ ಕ್ಷಿತ್ಯಾದಿಸೃಷ್ಟಿಗಳ್ವಾರಿಮಯಮಹ
ದಾದಿ । ಪತ್ಯದಚತುರ್ವರ್ಧನರವೆಸಾನವಾದೆಂದು । ನಿತ್ಯಮಾಗಿರದುಪದ
ವಿಗಳಿಂದುತಾನಿಲ್ಲಿಬಯಲೊಳಿರ್ದಪೆನೆಂದನು ॥೩॥ ಭಾರಿಭಾರಿಗೆಜಲಪ್ರಳ
ಯಂಗಳಾಗಲ್ಕೆ । ಭೂರಿಶಾಖೆಗಳಿಂದತಳಿತೆಸೆವುದೊಂದುವಟ । ಭೂರುಹ
ವದರದೊಂದೆಲೆಯುಮೇಲೆತನ್ನಮೃದುಪದಕಮಲದುಂಗುಟವನು ॥ ಚಾ
ರುತರಕರತಾಮರಸದಿಂದಪಿಡಿದುವದ । ನಾರವಿಂದದೊಳಟ್ಟುನಗುತಳುತಲೀ
ಲೆಯಿಂ । ದೋರಂತೆಮಲಗಿಕೊಂಡಿಹನೋರ್ವಬಾಲಕಂತಾನಾತನಂಕಂಡೆ
ನು ॥೩೦॥ ಅಂದುಸಲಿಲದೊಳಾಳ್ದತನಗಾಲದೆಲೆಯುಮೇ । ಲೊಂದೊಂ
ದುಭಾರಿಬಾಲಕನಾಗಿಮೈದೋರಿ । ನಿಂದುಮಾತಾಡಿಸದೆನೋಡದೆವಿಚಾ
ರಿಸದೆದೂರದೂರದೊಳಿರ್ಪನು॥ ಅಂದುನಿಮ್ಮ ಮೈವೆರಂಕೂಡಿಕೊಂಡಿಲ್ಲಿಗೈತಂ
ದುಕರುಣಿಸಿದನೀಹರಿಕೃಷ್ಣರೂಪದಿಂ । ಸಂದುದಿನ್ನೀತನೆಸದಾಶ್ರಯಂಮೊ
ರೆಯೊಗುವಡೆನಗೆಂದುಮುನಿನುಡಿದನು ॥೩೩॥ ಬಕದಾಲ್ಭ್ಯಮುನಿಬಳಿಕ
ಕೃಷ್ಣನಂನೋಡಿಬಾ । ಲಕನಾದರೂಪಮಂವಟಪತ್ರಶಯನದೋ । ಳ್ಸ
ಕಲಜನದಳಿವಂದುನೆನಗೆಕಾಣಿಸಿದೆಯಲ್ಲದೆರಮಾರಮಣನಾಗಿ । ಪ್ರಕಟತಧ
ರ್ಮಸಂತತಿಗಳಂಪಾಲಿಸುವ । ಸುಕುಮಾರಮೂರ್ತಿಯಿಂಕೃಪೆಯಿಂದನಿನ್ನ
ಸೇ । ವಕಜನಕೆತೋರುವಂತೆನಗೆತೋರಿದುದಿಲ್ಲತಾನಿನ್ನುಬಿಡನೆಂದನು॥ ಜ
ನಪಕೇಳಿಂತೆಂದುಹರುಷದಿಂಬಕದಾಲ್ಭ್ಯ । ಮುನಿಬಂದುಕೃಷ್ಣನಂತಕ್ಕೈಸಿ
ಮತ್ತೆಪಾ । ರ್ಥನಕೂಡೆಪೇಳ್ದಂಸದಾವಾಸಕೀಹರಿಯುದೇಹವಿದುಗೇಹಮೆನ
ಗೆ॥ ಅನುಕೂಲೆಯಾವಸತಿಮುಕ್ತಿಯಲ್ಲದೆಬೇರೆ । ಮನೆಯಿಲ್ಲಮಡದಿಯಿಲ್ಲದ
ಕಾಗಿತಾನೀಸುದಿನಮಿಲ್ಲಿತಲೆಗೆತರಗೆಲೆವಿಡಿದುಕೊಂಡಿರ್ದೆನೆನಲರುಜನಂನುಡಿ
ದನು॥ ಇಪ್ಪತ್ತುಕಮಲಜರಬಾಳ್ಕೆಯಂಕಂಡನಿವು । ಗೊಪ್ಪದೆಗುರುತ್ವಂಮ
ಹಾಪುರುಷರೀಸುದಿನ । ಮಿಪ್ಪದಚ್ಚರಿಯಲಾಶಿವಶಿವಾನೀವನಮ್ಮಲ್ಲಗರ್ಪೂ
ಜ್ಯರೆಂದು ॥ ತಪ್ಪನೀಕ್ಷಿಸಲಾಗದರಸನಮುಖಂಸಫಲ । ಮಪ್ಪದಿನ್ನೆಂದುನ
ರ್ತನಭಿವಂದಿಸಲ್ಕೆನಮ । ಗಪ್ಪಿಸದಿರೊಂದುಗರ್ವದಭಾವಮಂಕೃಷ್ಣನಿರಲೆಂ

ಗುಮುನಿನುಡಿದನು ||೩೬|| ಸರ್ವವೇದದಮೂಲನೀಕೃಷ್ಣನಾವೆಂಗೆ । ಗ
ರ್ವಮಿನ್ನೆಲೆಪಾರ್ಥಕೇಳಾದೊಡೀಕಡಲ । ಕುರ್ವದೊಳಗಾನಿರುತಿರಲ್ಕ
ಹಾಕಲ್ಪದೊಳ್ಕದ್ಮಾಭಿಧಾನದಿಂದ ॥ ಉರ್ವನಾಲ್ವತ್ತನೆಯುವಾರುಷಿಕ
ನಾಗಿಹಚಿ । ತುರ್ವದನನಿಲ್ಲಿಗೆಮರಾಳವಾಹನದೊಳ।ಕ್ಕರ್ವರಸಿಬಂದೆನ್ನ
ಮುಂದೆನಿಂದಾಗಳಧ್ಯಕ್ಷದೊಳಗಿಂತೆಂದನು ||೩೭|| ಎಲೆವಿಪ್ರನೀನಾರದೇತ
ಕೀಪರ್ಣಮಂ । ತಲೆಗೆವಿಡಿದಿಹೆಘೋರತಪಮೇಕದೇಂಬಯಕೆ । ಸಲೆಮ
ಚ್ಚಿ ಬಂದೆನಾಂಕಮಲಜನುಸುರ್ದೊಡಿತ್ತಪೆನೀಗವರವನೆನಲು ॥ ತೊಲಗ
ತ್ತಸಾನೀನ್ನತೆರದನಾಲ್ಕೊಗದರಂ । ಪಲಬರಂಕಂಡರಿವೆನೆನಗೀವ್ರುದಂ
ಮತ್ತೆ । ಕೆಲಬರ್ಗೆಕೊಟ್ಟುಕಳೆಪೋಗೆಂದುನಾನೆಂದೆನಾಪದ್ಮಸಂಭವನೊ
ಳು ||೩೮|| ಆನೆಂದುದಂಕೇಳ್ದುಗರ್ವದಿಂದಾಪದ್ಮ । ಸೂನುತೋರಿಸುತ
ನ್ನ ತೆರದನಾಲ್ಕೊಗದರಂ । ನೀನೆಂದುಪೇಳ್ವನ್ನೆಗಂಬಂದುದೊಂದುಸುಳಿ
ಗಾಳಿಧರೆನಡುಗುವಂತೆ ॥ ನಾನಾದ್ರುಮಂಗಳಂಕಿತ್ತೆತ್ತಿಮಿಗೆಮಿಾರ್ದು।ಬಾ
ನೆಡೆಗೆನವಿಾರ್ವರಂಕೊಂಡಡರ್ದುದದ । ನೇನೆಂಬೆನದ್ಭುತವನೆಲೆಪಾರ್ಥ
ತೊಳಲಿಸಿತಜಾಂಡಶತಕೋಟಿಗಳನು ||೩೯|| ಶೀವಿದೌದುಂಬರದದ್ರುಮ
ದಫಲದಂತೆರಾ।ಜೀವನಾಭನಮುಯ್ಯೊಳಡಿದಿಹವಜಾಂಡಂಗ।ಳಾವಾಯು
ವಶದಿಂದತೊಳಲಿದೆವುಪೊಕ್ಕೆಪೊಂದರೊಳಷ್ಟಮುಖವಿರಿಂಚಿ ॥ ಜೀವಜಾ
ಲದಸೃಷ್ಟಿಗೊಡೆಯನಾಗಿರ್ದನವ । ನಾವೀರ್ವರುಂಬರಲ್ಕಂಡುವಿಸ್ಮಿತನಾ
ಗಿ । ನೀವದಾರೆತ್ತಣಿಂದೈದಿದಿರಿನಿಮ್ಮಪೆಸರೇನೆಂದುಬೆಸಗೊಂಡನು ||೪೦||
ಚತುರಾಸ್ಯನಾಂಸತ್ಯಲೋಕದಿಂಬಂದೆನೀ । ಪ್ರತಿಶಿಷ್ಯನೆನಗೆಬಕದಾಲ್ಯನೆಂ
ಬವನೆಂದು । ಶತಪತ್ರಜಂಪೇಳ್ದೊಡಪಹಾಸಮಂಮಾಡುತಷ್ಟವದನದವಿ
ರಿಂಚಿ ॥ ಅತಿಗರ್ವಭಾವದಿಂನೀನಜಂಶಿಷ್ಯನಿವ । ನತುಳರೈಗುರುಶಿಷ್ಯ
ರೀರ್ವರುಂನಿಮ್ಮಸಂ ।ಪ್ರತಿಗೆಶೌಚದಸಲಿಲದೊಳಗದವಟುಗಳಿದೆನವ್ಮೋ
ಳ್ಕೆಲಬರೆಂದನು ||೪೧|| ಆನಿತುಗರ್ವದೊಳಷ್ಟವದನದವಿರಂಚಿನುಡಿ । ವ
ನಿತರೋಳ್ಪರೆವೊಳಿಹನಾವುಸಹಿತಾತನಂ । ಘನರಭಸದಿಂದಸುಳಿಗಾ
ಳಿಕೊಂಡೆದ್ದುದಾಗಸಕತಿಕಠೋರದಿಂದ ॥ ಅನಿಲವಶದೋಳ್ಪೋಗಿಮೂವ
ರುಂಮತ್ತೊಂದು । ವನಜಭವಲೋಕಮಂಕಂಡೆವಲ್ಲಿಯುಪ್ರುಣ್ಯ । ಜನ
ರೆಮ್ಮನೆಷ್ಟಣವಿಕಾರಿಗಳುನೀವೆಂದುನಗುತಲೋಲಾಡಿಸಿದರು ||೪೨|| ಅಲ್ಲಿ
ಷೋಡಶಮುಖದಬ್ರಹ್ಮನಂಕಂಡವನ । ಮೆಲ್ಲಡಿಗೆನಮಿಸೆಗರ್ವದೊಳವಂ
ನುಡಿಸದಿರೆ । ತಲ್ಲಣಿಸಿನಾವಂಜಲವನಪೊರೆಯುವರೆಮ್ಮನಾರೆಂದುಬೆಸಗೊ
ಳಲ್ಕೆ ॥ ಬಲ್ಲಿದಷ್ಟಾನನಚತುರ್ವದನಬಕದಾಲ್ಯ । ರಿಲ್ಲಿಗರಿಯದೆಬಂದೆ

ವೆಂದುನಾವುಸುರಲ್ಕೆ । ಮಲ್ಲಿಗೆಯಲರ್ಗಿದರಿದಂತಟ್ಟಹಾಸದಿಂನಗುತಿರ್ದ
ನಾವಿರಿಂಚಿ ॥೪೩॥ ಈವಿರಿಂಚಿಗಳನೀಕ್ಷಿಸಿತನ್ನಮಹಿಮೆಯನ । ದೇವಂಣಿ
ಸುವನೆಂದುಕೆಲದವರೊಳಾಡುವಕ । ಲಾವಕ್ತ್ರನೆಂಮತ್ತೆಸುಳಿಗಾಳಿಕೊಂ
ಡಡರ್ದುದುನಭಸ್ಥಳಕೆಬಳಿಕ ॥ ಮೂವತ್ತೆರಡುಮೊಗದಕಮಲಜನ
ಲೋಕಮಂ । ನಾನ್ನುತಲೆಕೆಳಗಾಗಿನಾಲ್ವರುಂಪೊಗಲೆಮ್ಮ । ನಾವಿಧಾತ್ರಂ
ಕಂಡುಕರುಣದಿಂಕೇಳೊಡ್ಡಾವಿನಿತೆಲ್ಲಮಂಪೇಳ್ದವು ॥೪೪॥ ಏತಕ್ಕೈತಂದಿರಿ
ಲ್ಲಿಗೆರವಿಯುಮುಂದೆಮ । ದ್ಯೋತಂಗಳೆಸೆದಪವಿತನಗೆಸರಿಯಾರೆಂಬ । ಮಾ
ತುಮುಗಿಯದಮುನ್ನಕೊಂಡೆದ್ದಾವರ್ತಮಾರುತಂನಾವುಬಳಿಕ ॥ ಆ
ತನಂಕೂಡಿಕೊಂಡರವತ್ತುನಾಲ್ಕುಮುಖ । ದಾತನಂಕಂಡೆವಾತನಗರ್ವ
ದಿಂದಮುಂ । ದೀತೆರನೊಳೆಮ್ಮತಿಸಿದಾಸ್ಯದವಿರಿಂಚಿಗಳಲೋಕಂಗಳಂ
ಕಂಡೆವು ॥೪೫॥ ತೊಳಲಿದೆವುಪಾರ್ಥಕೇಳಿಂತುನಾವೆಲ್ಲರುಂ । ಬಳಿಕನಾವಿ
ರಮೊಗದೊಳೆಸೆವಪರಮೇಷ್ಟಿಯಂ । ಬಳಸಿದಸಮಸ್ತಸುರಮುನಿಗಳಪ್ರೊ
ಗಳ್ವಸನಕಾದಿಗಳಗಡಣದೊಡನೆ ॥ ನಳಿನಸಖಶತಕೋಟಿತೇಜದಿಂತೊಳ
ತೊಳಗಿ । ಬೆಳಗುತಿರಲಾವಿನಿಬರುಂಪೋಗಿಕಾಣಲ್ಕೆ ।ಬಳಲಿದಿರಿದೇಕೆಬಂ
ದಿರಿನಿಮ್ಮಕರುಣದಿಂದಿಹೆನೆಂದುಸೈಪಿಟ್ಟನು ॥೪೬॥ ನಿಮ್ಮದೆಸೆಯಿಂದ್ವೈಸ
ಲೇತ್ರನಗೆಸಂತತಂ । ಸುಮ್ಮಾನಮಹುದೆಂದುಮಿಗೆಸುಪ್ರಸನ್ನತೆಯೊ।
ಳೆಮ್ಮನೆಲ್ಲರನಾದರಿಸಿನಿಗರ್ವಿಕೆಯಿಂದಸಹಸ್ರವದನಂಕಳುಹಲು ॥ ಹೆಮ್ಮ
ಗಳನುಡಿದುವಿಸ್ಮಿತರಾದರವರನ್ನೆ । ಗಂಮೊದಲದೆಂತಿರ್ದರಂತೆಕನಸನೆ
ತೋರ್ಪ । ತಂಮಲೋಕಂಗಳಿಗೆಬಂದಿರ್ದರಾನೆಂದಿನೋಲಿರ್ದನೀಕಡ
ಲೊಳು ॥೪೭॥ ಅದರಿಂದಕೋವಿದರ್ಗರ್ವಮಂಮಾಡಲಾ । ಗದುಪಾರ್ಥ
ತಾನೆಂದುಸಂಧಿಸಿದನಾಸಿರರನೊ।ಗದಪುರುಷನೀತನಲ್ಲನೆಕೃಷ್ಣರೂಪದಿಂ
ಕಾಣಿಸುವನೀಜಗದೊಳು ॥ ಉದಧಿಮಧ್ಯದೊಳಿನ್ನೆಗಂಭಜಿಸುತಿರ್ದೊ
ಡಾ । ದುದುಸಫಲಮೆಂದುಬಕದಾಲ್ಭ್ಯಮುನಿನುಡಿಯಲ್ಕೆ। ಮುದದಿಂದಕೇ
ಳ್ದುವಿಸ್ಮಿತರಾಗಿಸಂಭಾವಿಸಿದರರ್ಜುನಾದಿನೃಪರು ॥೪೮॥ ಶ್ರೀಕಮಲಲೋಚ
ನಂಬಕದಾಲಭ್ಯನಂಬ । ಳಿಕಭೂಕಾಂತನಧ್ವರಕೆನೀವುಬಿಜಯಂಗೈಯ।
ಬೇಕೆಂದೊಡಂಬಡಿಸಿವಾಜಿಸಹಿತಂಬುಧಿಯತಡಿಗೆಬಂದಾಋಷಿಯನು ॥
ಲೋಕಮರಿಯಲ್ಕೆಸಿಬಿಕಾರೋಹಣಂಗೈಸ । ಲಾಕುದುರೆಗಳ್ತೆರುಗಿಸಿಂಧು
ದೇಶಕೆಬರಲು । ನೇಕಪೃಥ್ವೀಪಾಲರೊಡನೆಕೃಷ್ಣಾರ್ಜುನರ್ನಡೆತಂದರುತ್ಸ
ವದೊಳು ॥೪೯॥ ಪೃಥ್ವೀಂದ್ರಕೇಳ್ಸಿಂಧುದೇಶದೊಳಗೆಸೆವಜಯ । ದ್ರಥ
ನಪಟ್ಟಣಕೆನಡೆತಂದರರ್ಜುನದೃತ್ಯ । ಮಘನರೀವಾರ್ತೆಯಂಕೇಳ್ದನತಿ

ಬಾಲನಾಗಿಹದುಶ್ಶಳೆಯಸುತನುಜನು ॥ವ್ಯಧಿಸಿವೈಮರೆದನೊಲಗಡಮಂತ್ರಿ
ಗಳಿಣಿಕೆ । ಶಿಥಿಲವಾದುದುಪುರಂತಲ್ಲಣಿಸುತಿರ್ದುದೀ । ಕಥನಮಂಧೃತ
ರಾಷ್ಟ್ರಸುತೆಗರುಪಲಿದಿರಾಗಿಪ್ಪೊರಮಟ್ಟಳುರೆಬೆದರ್ದು ॥೫೦॥ ಎಲ್ಲಿಬಹನ
ರ್ಜುನನರಥದಮೇಲಸುರಹರ । ನಲ್ಲಿಗೈತಂದುಜೀರಿದಳೆಲೆ ಜಗನ್ನಾಥ
ಮಲ್ಲಮರ್ದನಮಾನಿನಿಯುಮೊರೆಯುಲಾಲಿಸಂದೀಸರ್ವಸಾಕ್ಷಿತನ್ನ ॥ ವಲ್ಲ
ಭನಪಗೆಯೆಂದುಕೊಂದನಿಹುದೊಂದುಶಿಶು । ತಲ್ಲಣಿಸುತಿದಕಾಯಬೇಕೆ
ನೆಧನಂಜಯಂ । ನಿಲ್ಲದೆವರರೂಥದಿಂದಿಳಿದುಬಂದಾಕೆಗಭಿನಮಿಸಿಬಳಿಕಿಂ
ತೆಂದನು ॥೫೧॥ ತಾಯೆಪಗೆಗೊಂಡುನಾನಿನಗೆಂದುಮಾಡಿದ। ನ್ಯಾಯಮಂ
ಸೈರಿಪುದುನಿನ್ನತನುಸಂಭವನ । ನೋಯಿಸುವನಲ್ಲರಾಜ್ಯವಗಣಿತಾಶ್ವ
ಮದಕರಿಗಳಂಕೊಟ್ಟುನಿನ್ನ ॥ ರಾಯನಮಹಾಧ್ವರಕೆಕೊಡಿಕೊಂಡೊ
ಯ್ವೆನೆನೆ । ಲಾಯತಾಂಬಕಿಮತ್ತೆಶೋಕವಿಂಮಡಿಸಿನಾ । ರಾಯಣನಪದ
ಕಮಲದೊಳೆಸ್ವರಳಿಕಡಲಿ ಡುಪಕಂಬನಿಯೊಳಿಂತೆಂದಳು ।೫೨॥ ಪ್ರಾಣಿ
ಗಳಹೃದಯದೊಳ್ದೇವನೀನಿರುತಿರ್ದು । ಮಾಣಿಸುವಯುವರವರದುಃಖ
ಗಳೆಂಬುದಂ। ಕಾಣಿಸಿದೆದ್ರೌಪದಿಯುಮಾನವಂಕಾಯ್ದಂದುಶೋಕಾಗ್ನಿಸು
ಡುವದೆಂದು ॥ ಮೇಣಿದಂಬಿನ್ನೈಸಲೇಕಿನ್ನುಸಲೆಸುಖ । ಶ್ರೇಣಿಯುಂನೆನೆ
ದಮಾತ್ರದೊಳೀವನಿನ್ನಕೆ ! ಲ್ಯಾಣಮೂರ್ತಿಯದರ್ಶನದೊಳಾಂಕೃತಾ
ರ್ಥೆಯಲ್ಲವೆಸಲಹಬೇಕೆಂದಳು ॥೫೩॥ ದೇವತನಗೊಡಹುಟ್ಟದವಳೆಂದುನೆ
ರನೆನ್ನ । ನಾವತೆರದಿಂಕರೆವನಧ್ವರಕೆಬರಲಪ್ಪು । ದೇವಿಧವಹಯಹಸ್ತಿಗ
ಗಳನಿತ್ತೊಡಾಳ್ವರಾರ್ಪರ್ತಿಪುತ್ರರಿಲ್ಲತನಗೆ ॥ ಕಾವುದತಿಬಾಲನಾಗಿಹಶಿಶು
ವಿನೆಂದುನಾ । ನಾವಿಧದಶೋಕದಿಂದಳಲ್ವದುಶ್ಶಳೆಯುಂಕೃಪಾವನಧಿಪಿಡಿದೆ
ತ್ತಿ ಸಂತವಿಸಿನಗರಮಂಪೊಕ್ಕಂಕಿರೀಟಸಹಿತ ।೫೪॥ ಬಳಿಕದುಶ್ಶಳೆಕಾಣಿ
ಸಿದಳಾಕುಮಾರಂಗೆ। ನಳಿನಾಕ್ಷನಭಯಮಂಕೊಟ್ಟುಸಂತೈಸಿಕರ।ತಳದಿಂದ
ನ್ಯೈದಡವಿದಂಕೂಡೆಕಂಡುದುಸಮಸ್ತಜನಮುಘೆರಿಪುವನು ॥ ಪೊಳಲೊ
ಳ್ಪೆಗಳ್ದವುತ್ಸವದಗುಡಿತೋರಣಂ । ಮೊಳಗಿದುವುವಿವಿಧವಾದ್ಯಧ್ವನಿಗ
ಳಾಗಮಂ । ಗಳನೃತ್ತಗೀತಂಗಳೆಸಗಿದುವುಹರಿಪಾರ್ಥರಲ್ಲಿಸತ್ಕೃತರಾದ
ರು ॥೫೫॥ ಮರುಗಿಕಂಬನಿದುಂಬಿಮಾಡಿದವಿಘಾತಿಯಂ । ಮರೆದುಸುತ
ನಂಕೂಡಿಕೊಂಡುನೃಪನಧ್ವರಕೆ । ಪೊರಮಟ್ಟುಬಂದುಕಾಂಬುದುಕುಂ
ತಿದೇವಿದ್ರೌಪದೀಪಾಂಚಾಲತನುಜೆಯರನೆಂದು ॥ ನೆರೆನರಂಸಂತೈಸೆಬಳಿಕದುಶ್ಶಳೆ
ಶೌರಿ।ಗೆರಗಿಭಕ್ತರಬೆಳವಿಗೆಗಳನೊಸೆದಾಪಾವ । ತೆರದಿಂದಮಾಡುವಂತೆ
ನ್ನನ್ನುದ್ಧರಿಸೆಂದುನಿರ್ಗಮನಕನುವಾದಳು ॥೫೬॥ ಅಲ್ಲಿಯುಸುವಸ್ತುಸಹಿ

ತಾಕೆಯುಂಕೊಡಿಕೊಂ । ಡೆಲ್ಲಾಮಹೀಶ್ವರರ್ವೆರಸಿಗಜಪುರಕಾಗಿ । ನಿಲ್ಲ
ದೈತಂದುಯೋಜನಮಾತ್ರದೊಳ್ಕಿಂದುವತ್ಸರಂತುಂಬಿತೆಂದು । ಉಲ್ಲಾಸದಿಂ
ಕಿರೀಟಿಗೆನಿರೂಪಿಸಿತಾನೆ । ಸಲ್ಲಲಿತಪರಿಗಳಂಪಿಡಿದುಕಟ್ಟಿದನಿಳಾ । ವಲ್ಲ
ಭರಮುಂದೆಕಾರುಣ್ಯದಿಂದೇವಸಗರೀಶಲಕ್ಷ್ಮೀಕಾಂತನು ॥೪೨॥

ಸಂಧಿ೩೨ಕ್ಕೆ ಪದ್ಯ ೧೮೦೨ಕ್ಕೆ ಮಂಗಳಮಸ್ತು.

---

## ಮೂವತ್ತು ಮೂರನೆಯ ಸಂಧಿ.

ಸೂ॥ ಧರಣಿಪಾಗ್ರಣಿಯುಧಿಷ್ಠಿರಮಹೀವಲ್ಲಭಂ । ತುರಗಮೇ
ಧಾಧ್ವರವನೈದೆವಿಸ್ತರಿಸಿದಂ । ಭರತನಳನಹುಷಾದಿಪೃಥ್ವೀ
ಶರೀತಂಗೆಪಾಸಟಿಯೆಪೇಳಿನಲ್ಕೆ ॥

ಜನಮೇಜಯಕ್ಷಿತಿಪಕೇಳ್ಬಳಿಕದೈತ್ಯಭಂ । ಜನಸಖಿಳಭೂಪಾಲರುಂ ನಾಗಪುರಕೆಯೋ । ಜನದಳತೆಯೊಳ್ಕಲಿಸಿಬೇರೆಬೇರವರವರಪಡೆಗಳಂ ಪಜ್ತೆಗೊಳಿಸಿ ॥ ತನತನಗೆಗಂಧಮಾಲ್ಯಾಂಬರಾಭರಣನೂ । ತನವಿಭವ ದಿಂದಬಹುದೆಂದುನೇಮಿಸಿಧರ್ಮ । ತನಯನಂಕಾಣಬೇಕೆಂಬಲವಲವಿಕೆ ಯಿಂಮುಂದೆಬಿಜಯಂಗೈದನು ॥೧॥ ಸುರನದಿಯತಟಿಯಪುಣ್ಯಕ್ಷೇತ್ರದೊ ಳ್ಸವಿ । ಸ್ತರದಮಣಿಮಂಟಪದೊಳಖಿಳಮುನಿಗಣದೊಡನೆ । ವರುಷದಿಂ ಡೊಡಲದಂಡಿಸಿನೆಲದಮೇಲೆಕುಳ್ಳಿರ್ದುಯಮುನಿಯುಮುದದಿಂದ ॥ ಪರಮ ದೀಕ್ಷಾವಿಧಿಯನನುಕರಿಸಿಸಾಧ್ವಿಯರ । ನೆರವಿಯೊಳೆಸೆವಪತ್ನಿವೆರಸಿತೊಳ ಗುವಯುಧಿ । ಷ್ಠಿರಭೂಪನಂಕಂಡನಸುರಾರಿವಂದಿಸಿತುತತ್ಸಭೆಮುರಾಂತ ಕಂಗೆ ॥೨॥ ಯದುಕುಲಾಗ್ರಣಿಬಳಿಕಭೀಮಸಂಬಿಗಿಯಪ್ಪಿ । ವಿದುರಧೃತ ರಾಷ್ಟ್ರಮಾದ್ರೇಯರಂತಕ್ಕೈಸಿ । ಮುದದಿಂದದೇವಕಿಯಯಶೋದೆಯುಗರ್ಗ ಭಿವಂದನಂಗೈದುಪೃಥಗೆನಮಿಸಿ ॥ ಪದುಳವಿಟ್ಟೈದೆಗಾಂಧಾರಿಯುಂಬಂದು ದ್ರೌಪದಿಸುಭದ್ರೆಯರಂಘ್ರಿಗೆರಗಿದೊಡೆಮಣಿದೆತ್ತಿ । ತದನಂತರದೊಳಖಿಳ ಮುನಿಗಳ್ಗೆವಂದಿಸಿನಗುತಭೂಪಗಿಂತೆಂದನು ॥೩॥ ಅರಸನಿನ್ನಧ್ವರದವಾ ಜಿಭೂಪಲಯುಮಂ । ತಿರುಗಿಬಂದುದುವರುಷಮಾತ್ರದೊಳ್ಮೇದಿನಿಯ । ನ ರಪತಿಗಳೆಲ್ಲರುಂನಡೆತಂದರೊಡನೆಪಾರ್ಥಪ್ರತಾಪದಹರಹಿಗೆ ॥ ಧರಣಿಪಾ ಲುದುನೆರಪಿದೊಡಮೆಗಮರಾಚಲಂ । ಸರಿಯಲ್ಲಬಕದಾಲ್ಭ್ಯಕಾಡಿಮುನಿನಿ ಕರಮಿದೆ । ದೊರೆಯದಿಹಸಂಭಾರವಿಲ್ಲನಡೆಸಿನ್ನುಯಜ್ಞವನೆಂದುಹರಿನು ಡಿದನು ॥೪॥ ಆಮುರಾಂತಕನಮಾತಂಕೇಳ್ದುಹರುಷದಿಂ । ಭೂಮಿಪತಿನು ಡಿದನೆಲೆದೇವತವಕಾರುಣ್ಯ । ಜೀಮೂತಮಿರೆಬೆಳೆಯದಿರ್ದಪುದೆಪಾರ್ಥ

ಪ್ರತಾಪದವೊಲಂತಿಳಿಯಲು ॥ ರೋಮರೋಮದೊಳಡಿದಜಾಂಡಕೋಟಿ
ಗಳಿಹವು । ಹಾಮಹಿಮತಾನೆತ್ತ ನರನಸಂಗಡತಿರುಗು । ಪೀಮನುಜತನ
ವೆತ್ತ ಭಕ್ತರಂಪಾಲಿಪುದೆನಿನ್ನ ಬಾಳುವೆಯೆಂದನು ॥೫॥ ದೇವನಾಕಿನ್ನದರ
ಮಾತೆಮ್ಮ ಪಂಚಕದ । ಜೀವನಂನಿಮ್ಮ ದೈಸಲೆಬಾಸ್ಯವೇತಕೆಳ । ರಾವಲ
ಯದರಸುಗಳನೆಂತುಜಯಿಸಿದರೆಂಬವಿವರಮಂಪೇಳ್ವುದೆಂದು॥ ಭೂಪಲ್ಲ
ಭಂಕೇಳ್ದುಡಿಂದಿರಾಪತಿಹಸ್ತಿನಾವತಿಯನಗರಮಂಪೊರಮಟ್ಟುಮಗುಳಲ್ಲಿ
ಗಾವಾಜಿಗಳ್ಬಂದುಪೊಗುವಿನಿನ್ನಡೆದವೃತ್ತಾಂತಮಂವಿವರಿಸಿದನು ॥ ೬ ॥
ವಾಜಿಸಹಿತರ್ಜುನಂಪೊರಮಟ್ಟನಂದುವಿ। ಭ್ರಾಜಿಸುವಚೈತ್ರದೋಳ್ಕೂ
ಡೆಮಾಹಿಷ್ಮತಿಗೆ । ರಾಜನಹನೀಲಧ್ವಜಂತುರಗಮಂತಡೆದನಗ್ನಿಯಸ
ಹಾಯದಿಂದ ॥ ಈಜಿಷ್ಣುಸಂಗರದೊಳಾತನಂಜಯಿಸಲಾ । ವ್ಯಾಜದಿಂ
ಬಂದುದುಸರಿದ್ವರೆಯುಶಾಪಂ‌ಮ। ಹಾಜವದೊಳಲ್ಲಿಂದಪೋಗಿತಿರುಗಿತುಹ
ಯಂಬಳಿಕವಿಂಧ್ಯಾಚಲದೊಳು ॥೭॥ ಆನಗರಜೀನ್ಗಳಿಂಪಣ್ಗಳಿಂದೋಡ
ರದ । ಪಾನೀಯದಿಂಪಿನಿಂತಂಪಿನಿಂಕುಸುಮಗಂ । ಧಾನಿಲನಪಂಪಿಂದಕಂ
ಪಿಂದನಲವೇರಿಚಂಡಿಯವಿಶಾಪದಿಂದ॥ ಸೇನೆವಿಸ್ಮಯದೊಡನೆಹಯದೊಂ
ಡನೆಮುಂದೆಸಂ । ಮಾನದಿಂನಡೆಯಲ್ಕೆತಡೆಯಲ್ಕೆಸಂಗರದೊ। ಳೀನರಂ
ಜಯಿಸಿದಂಭಲದಿಂದಬಲದಿಂದಹಂಸಧ್ವಜನಸುತರನು ॥೮॥ ಜನಪಕೇ
ಳಾಫಾಲ್ಗುಣಕಾಲದೋಳ್ತುಹಿಗಿನರಿ । ತನುಜೆಯತಪೋವನದವಿಘ್ನಂಗಳಂ
ಕಳೆದು । ವನಿತಾಮಯದಿರಾಜ್ಯದೋಳ್ಪ್ರಮೀಲೆಯನೊಡಂಬಡಿಸಿಗಜ
ಪುರಕೆಕಳುಹಿ ॥ ದನುಜೇಂದ್ರಭೀಷಣನನಾಕ್ರಮಿಸಿಬಭ್ರು । ವಾಹನನ
ಪಟ್ಟಣಕೆನಿಜಹಯದೊಡನೆಬಂದನ । ರ್ಜುನನಬದ್ಧಿಮುತುವಿನೋ
ಳ್ಮೇಫರವನುಮಿಗುವವಾದ್ಯನಿರ್ಘೋಷದಿಂದ ॥೯॥ ಮಣಿಪುರಕೆಬಂದು
ದಾಸಮಯದೋಳ್ಕುದುರೆಫಲುಗುಣನಲ್ಲಿಮಡಿದನಾತ್ಮಜನಿಂದಬಳಿತದಂ
ಫಣಿರಾಜತನುಜೆಪರಿಹರಿಸಿದಳ್ಮುಂದೆನಡೆಯಲಾ ತ್ಯಕೇತುತಡೆದು । ರ
ಣದೊಳೆಮ್ಮಲ್ಲರಂಗೆಲ್ದುಡಾತನಪಿತಂ । ಗುಣನಿಧಿಮಯೂರಧ್ವಜಂತನ್ನ
ಯಜ್ಞಮಂ । ಗಣಿಸದೆಮಗೊಪ್ಪಿಸಿತುರಂಗಸಹಿತ್ಯೆತಂದನರಸಕೇಳ್ತಾ
ತುಕನನು ॥೧೦॥ ಆಮಯೂರಧ್ವಜನುಹರಿಸಹಿತನಡೆಯೆನಿ । ಸ್ಸೀಮನ
ಹವೀರವರ್ಮಂತಡೆಯೆಬಿಡಿಸಲು । ದ್ದಾಮವಾಜಿಗಳೈದಿದುವುಚಂದ್ರಹಾ
ಸನಪುರದೊಳೈದುದಿನಗಳಿರ್ದು ॥ ಹೈಮಂತಶೈಶಿರದವಾಗಿಮಡಲ್ದಿಡೆತರ
ಣಿ । ಸೋಮನಂತಿರೆಬಿಸಿಲ್ಬೆಳದಿಂಗಳೋಲಾಗೆ । ತಾಮರಸರಾಜಿನಸಿದ
ವುಕೊಡೆಕುಗ್ಗಿದುವುಕೋಗಿಲೆಕೊರಲ್ಬ್ವನಿಗಳು॥೧೧॥ ಶೈಶಿರದಕಾಲದೋ

ಳ್ಕಲಿಚಂದ್ರಹಾಸನಂ । ವೈಸಿರಿಯೊಳೊಡಗೊಂಡುಬಕದಾಲ್ಭ್ಯನಂಕಂ
ಡು । ಕೈಸಾರ್ದಪರುಷದಿಂಸಿಂಧುದೇಶದಮೇಲೆಮಖಸಮಯಕಿಲ್ಲಿಗಾಗಿ ॥
ಜೈಸಿಬಂದೆವುನಿನ್ನನುಜನಕೂಡಲೆಕಳುಹಿ । ದೈಸುವೀರರ್ಕಳುಸುಖದೊ
ಳೈತಂದರೊ । ತ್ತ್ರೈಸಿದಗಣಿತವಸ್ತುಸಹಿತಖಿಳನೃಪರೊಡನೆಬಹಳವಿಭ
ವದೊಳೆಂದನು ॥೧೨॥ ಭೂಮಂಡಲದೊಳಿಂತುಮಖಹಯಂತಿರುಗಿದಮ।
ಹಾಮಹೀಶ್ವರರೊಡನೆಬಂದವೃತ್ತಾಂತಮಂ । ದಾಮೋದರಂಪೇಳ್ದು
ರಾಯನಂಬೀಳ್ಕೊಂಡುತನ್ನಮಂದಿರಕೆಬಳಿಕ ॥ಭೀಮನಂಕೈವಿಡಿದುಕೊಂ
ಡುನಡೆತರೆಸತ್ಯ । ಭಾಮಾದಿರಾಣಿವಾಸಂಗಳಿದಿರಾಗಿಸು । ಪ್ರೇಮದಿಂದಾ
ರತಿಗಳಂಕೊಂಡುಬಂದುನಗುತಾತ್ಮಪತಿಯಂಕಂಡರು ॥೧೩॥ ಮಡದಿಯು
ರಮಧ್ಯದೊಳ್ಸತ್ಯಭಾಮಾದೇವಿ । ನುಡಿದಳೆಲೆದೇವನಮಗಹಳುಸೋದ
ರಿಕುಬ್ಜೆಷೊಡವಿಯೊಳ್ಸಲುಗುಣಂತುರಗರಕ್ಷೆಗೆಪೋದಕಥನದಿಂ ಪ್ರಮೀ
ಳೆನಿಮಗೆ ॥ ಒಡಹುಟ್ಟಿದವಳಾದಳಿನ್ನೇನೆನಲ್ಕವಳ । ಮುಡಿಯಮಾತಂ
ಕೇಳ್ದುಮೊಳೆವನಸುನಗೆಯುಬಿ । ಳ್ಪಡಿಯೆಕಮಲಾಂಬಕಂಪವಮಾನನಂ
ದನನಮೊಗನೋಡುತಿಂತೆಂದನು ॥೧೪॥ ಸಂತತಿಗೆಸಂತತಿಗಳಾದವಿನ್ನೇ
ನೆದರ । ಚಿಂತೆಬಾಲ್ಯವೆನಮಗೆಭೀಮನೋಡೀಗನಂ । ಮಂತರವನರಿಯ
ದಿವಳೆಂದಕಟಕಿಯಮಾತನೆಂದುಮುರಹರನೆಂದೊಡೆ ॥ ಅಂತಹುದುಪುಸಿ
ಯಲ್ಲತರಳತನದೊಳ್ಪುರುಷ । ರೆಂತಾದೊಡಂನಡೆವರೀಧರ್ಮಜನಪುರ
ದೊ । ಳಿಂತುಮಾರ್ಗಿಗೆಳಾಗವಿರಬಹುದೆಹೇಳೆಂದಳಾಸತ್ಯಭಾಮೆನಗುತ॥
ಪ್ರಾಣೇಶ್ವರಿಯನುಡಿಗೆನಸುನಗುತಮತ್ತಾಳಿದ । ರಾಣಿಯರಸರಸೋಕ್ತಿ
ಗಳನಾಲಿಸುತಚಕ್ರ । ಪಾಣಿಮಾರುತಿಸಹಿತಭವನದೊಳ್ಕೆಳ್ದುರ್ಸುಖ
ದೊಳಿರಲಾಪಥದೊಳು ॥ 'ಕ್ಷೋಣೀಂದ್ರರೊಡಗೂಡಿಫಲುಗುಣಂಭೂವ
ರನ । ಕಾಣಿಕೆಗೆನಗರದಸಮೀಪಕ್ಕೈತಂದನಾ । ವಾಣಿಯಂದಾರುಕಂಬಂ
ದುಬಿನ್ನೈಸಲ್ಕೆಪೊರಮಟ್ಟನರಮನೆಯನು ॥೧೫॥ ಬಂದನಧ್ವರಕಾಲೆಗ
ಸುರಾರಿಮತ್ತೆಯುಮ । ನಂದನಂಗಿಲ್ಲಿಹುದುನೀನಖಿಳಭೂಪಾಲ । ವೃಂದ
ಮಂಬಕದಾಲ್ಭ್ಯಮುನಿಪನಂನಾವಿದಿರ್ಗೊಂಡುಬಹೆವೆಂದುಸುರ್ದು ॥ ಮುಂ
ದೆಧೃತರಾಷ್ಟ್ರವಿದುರಾದಿವೃದ್ಧರ್ಕ್ಕಹೀ । ವೃಂದಾರಕಪ್ರತತಿಸಹಿತಪೊರ
ಮಟ್ಟುನಡೆ।ತಂದನುತ್ಸವದಿಂದಬರಲೈದೆಸಕಲಜನಮಂದುನೇಮಿಸಿಮುದ
ದೊಳು ॥೧೬॥ ಅಸುರಹರನಾಜ್ಞೆಯಿಂದಾಗಪಟ್ಟಣದೊಳಗೆ । ಪೊಸತಾ
ಯ್ತುಗುಡಿತೋರಣದರಚನೆಬೀದಿಗಳೊ । ಳಿಸೆದುವುಸುಮಂಗಳದ್ರವ್ಯಂ
ಗಳೊಪ್ಪಿದುವುಪನ್ನೀರಚಳಕಂಗಳು ॥ ಮುಸುಕಿದುವುಧೂಪವಾಸನೆಗಳಿ

ಡಿದುವುವಿವಿಧ। ಕುಸುಮಗಂಧೋತ್ಕರಂಘನಸಾರಕುಂಕುಮದ । ಕೆಸರುಗಳುಪರಿಮಳಂತೀಡಿದುವುಕರ್ಪುರದಸೂಡರ್ಗಂಪುರಂಜಿಸಿದುವು॥೧೮॥ ಪೊರಮಟ್ಟುದಖಿಳಪುರಜನನೃದೆಸಿಂಗರದ । ಮುರಹುಗಳಮೌಳಿಯಿಂ ಮೇಳವದರಚನೆಗಳ । ತರತರದವಿದ್ಯಾವಿನೋದದಿಂನಟನರ್ತಕೀಜನದ ಗೀತದಿಂದ ॥ ತುರುಗಿದವೃದಂಗಾದಿವಾದ್ಯಧ್ವನಿಗಳಿಂದ । ಮಿರುಗುವವಿಲಾಸಿನಿಯರೋಳಿಯಿಂವಾರ್ಗದೋಳ್ । ತೆರಪಿಲ್ಲನೆಕ್ಕೆವೈಭವದಿಂದವಾರ್ಥನನಿದಿರ್ಗೊಂಬಸಂಭ್ರಮದೊಳು ॥೧೯॥ ದಂತಿಗಳಮೇಲೆದೇವಕಿಯ ಶೋದಾದೇವಿ। ಕುಂತಿಯರ್ಪೊರಮಟ್ಟರದರಬಳಿವಿಡಿದುಸೀ । ಮಂತಿನೀಗಣಸಹಿತರುಕ್ಮಿಣಿಯುದಂಡಿಗೆತೆರಳ್ದುದತಿವಿಭವದಿಂದ ॥ ತಿಂತಿಣಿಸಿಗಗನದೋಳ್ತುಂಬಿಗಳ್ಝೇಂಕಾರಮುಗಿ । ಲಂತೆನವಪಾರಿಜಾತದಕುಸುಮಪರಿಮಳಕೆ । ಸಂತತಂಮುಸುಕಲಂದಣದೊಳ್ಬೈದಿದಳಾಳಿಯುರ್ವರಸಿಸತ್ಯಭಾಮೆ ॥ ಜಾಂಬವತಿಮೊದಲಾದಪಂಕರುಹಪತ್ರಾಕ್ಷಿಯು । ತಾಂಬಿಕನರಾಣಿಯರ್ಪರಿಪರಿಯೊಳೆಸೆವದಿ । ವ್ಯಾಂಬರಸುಗಂಧಮಾಲ್ಯಾಭರಣಮುಕ್ತಾವಳಿಗಳಸಿಂಗರವನಾಂತು ॥ ತಾಂಬೂಲರಾಗರಸದೋಳ್ಪಿಡಿದೆಲಲಿತವದ । ನಾಂಬುಜದಕಾಂತಿಗಳಕಳೆವೆತ್ತುತಮತಮಗೆಜಾಂ । ಬೂನದಾಲಂಕೃತಾಂದೋಳಿಕಾರೋಹಣಂಗೈದುಪೊರಮಟ್ಟರು ॥೨೧॥ ಇಟ್ಟಣಿಸಿತಮರೇಂದ್ರತನಯನನಿದಿರ್ಗೊಂಬ । ಬಟ್ಟೆಯೋಳ್ಪ್ರಾರೀಸಮೂಹಮೊರಸೊರಸಿನೋ ।ಳ್ತೊಟ್ಟವೈದೊಡಿಗೆಗಳಮಸೆದಪೊಂಬುಡಿಯುಂತೆಕುಂಕುಮರಜಂಗಳೊಗಲು ॥ ಕಟ್ಟಿದರ್ದಹಾರಾದಿಗಳ್ಪರಿದುದುರ್ವವೋ । ಲ್ದಿಟ್ಟಗೊನೆಗಳಕಾಂತಿಸೂಸುತಿರೆತನುರುಚಿಯೊ । ಳುಟ್ಟವಸನದ್ಯುತಿವಿರಾಜಿಸುತ್ತಿರೆ ಹಾವಭಾವದವಿಲಾಸದಿಂದ ॥೨೨॥ಬಂದುದುಪುಹಾಜನಂಬಹಳವೈಭವದಿಂದ । ನಿಂದುದುಚತುರ್ಬಲಂಕೆಲಕೆಲದೊಳೊಡ್ಡಾಗಿ । ಸಂಧಿಸಿದರವರೀರ್ವರುಂಬಳಿಕಲಶ್ವಯುಗೆಸಹಿತಬಹಫಲ್ಗುಣಂಗೆ ॥ ಚಂದನದಮುತ್ತಿನಕ್ಷತೆಯಕುಂಕುಮಮಿಶ್ರ । ದಿಂದದಧಿಲಾಜೆದೂರ್ವಾಂಕುರಗಳಿಂದಸೆವೆ ।ಪೊಂದಳಿಗೆವಿಡಿದಾರತಿಯನೆತ್ತಿಮುತ್ತುಗಳಸೇಸೆದಳಿದರ್ಸತಿಯರು ॥೨೩॥ ವಿಜಯಹರಿಸುತಯೌವನಾಶ್ವಸಾತ್ಯಕಿವೃಷ । ಧ್ವಜಸಾಂಬಕೃತವರ್ಮಹೈಡಿಂಬಿಸಾಲ್ವಾನ ।ರಜಸುವೇಗಾನಿರುದ್ಧಾದಿಗಳ್ಧೃತರಾಷ್ಟ್ರಭೂಪನಂಕಂಡುಬಳಿಕ ॥ ಅಜವಾಹನಧ್ವಜಮಯೂರಧ್ವಜಾರುಣ । ಧ್ವಜಚಂದ್ರಹಾಸನೀಲಧ್ವಜಧನಂಜಯಾ । ತ್ಮಜವೀರವರ್ಮಪ್ರಮುಖರಾದರಾಯರಂಕಾಣಿಸಿದರುಚಿತವಿಂದ ॥ ೨೪ ॥ ವಂದನೀಯರ್ಗೆಪಂದಿಸಿವಂದಿಸುವಜನದ । ವಂ

ದನೆಗಳಿಂಕೊಂಡು ಸಮಬಂಧುಗಳನಪ್ಪಿ।ಸಂದರ್ಶನೋತ್ಸವದೊಳನ್ಯೋ
ನ್ಯಸಂಭಾಷಣೆಗಳಿಂದಮುದಿತರಾಗಿ॥ ಮೆದಿಸಿದರೆಲ್ಲರುಂ ಬಿಕದಾಬ್ಲಿವ್ಯಮು
ನಿಗೆಬಳಿ । ಕಂದಣಂಗಳನಿಳಿದುಮುರಹರನನೇಮದಿಂ। ಬಂದರಧ್ವರಶಾ
ಲೆಗರಸನಂ ಕಾಣಲ್ಕೆ ಗೋಧೂಳಿಲಗ್ನವಾಗೆ ॥೫೬॥ ತರತರದಛತ್ರಚಮ
ರಂಗಳವಿಡಾಯಿಗಳ । ಪರಿಪರಿಯಸಿಂಧಸೀಗುರಿಪತಾಕಾವಳಿಯ । ಮೊ
ರೆವೊರೆವವಿವಿಧವಾದ್ಯಧ್ವನಿಯಪಾತಕರಜಯಜಯನಿನಾದದಿಂದ ॥ ಸರ
ಸರದಸಂಗೀತನರ್ತನದಮೇಳವದ ।ನೆರೆನೆರೆದಚತುರಂಗದೊಡ್ಡುಗಳಸಂ
ದಣಿಯ । ದೊರೆದೊರೆಗೆಳೈತಂದರುತ್ಸವದೊಳರಸನಂ ಕಾಣಲಚ್ಯುತನ
ಕೂಡೆ ॥೫೭॥ ಮುಂದೆಕುದುರೆಗಳದರಬಳಿಯೊಳ್ಸಮಸ್ತಯದು । ವೃಂದ
ದೊಡಗೂಡಿತಾನೆಡಬಲದೊಳಮರೇಂದ್ರ। ನಂದನವೃಷಧ್ವಜರ್ಪಿಂತಹಂ
ಸಧ್ವಜಮಯೂರಧ್ವಜಾದಿನೃಪರು ॥ ಸುಂದಣಿಸಿಗೋಧೂಳಿಲಗ್ನದೋ
ಳ್ಬೂಪನಂ । ಸಂಧಿಸುವವೊಳ್ಕೆಯಿಂಕರ್ಪುರದತೈಲಂಗ । ಳಿಂದುರಿವ
ಬೊಂಬಾಳಶತಕೋಟಿಗಳ್ಪಿಡಿಯಲಸುರಹರನೈತಂದನು ॥೫೮॥ ಕರ್ಣ
ದೋಳ್ಕೀಳಬಹುದಲ್ಲದಕ್ಷಿಯೊಳನಿಮಿ ।ಷರ್ನೋಡಲಳವಹುದೆತುರಗಮೇ
ಧಂಗಳನ । ಹರ್ನಿಶಾವಲ್ಲಭರಕುಲದಭೂಪಾಲಕರ್ಮಾಡಿದರ್ಪ್ವಲಬರವರ॥
ನಿರ್ಣಯವೆಹರಿಯೊಡನೆಸಿರಿಸಹಿತಧರೆಗೆಪಯ । ದರ್ಣವಂಬಂದಪುದೊ
ಶಿವಶಿವಾಪ್ಪೊಸತಿದಂ । ವರ್ಣಿಸುವಕವಿಯಾವನೆನೆವಾಜಿಗಳಕೂಡೆನಡೆತಂ
ದರವನೀಶರು ॥ ಯಾಜಮಾನ್ಯದೊಳೆಸೆವಭೂಪಾಲನಂಕಂಡು । ವಾಜಿಗ
ಳನೊಪ್ಪಿಸಿಪದಾಂಬುಜಕೆಪೊಡಮಟ್ಟ । ಡಾಜಿಷ್ನುವಂತೆಗೆದುತಕ್ಕೈಸಿ
ಕರ್ಣಣಪ್ರದ್ಯುಮ್ನಕಾದಿಗಳನು ॥ ತೇಜದಿಂದವನೀಶ್ವರಂಮನ್ನಿಸಿದಬ
ಳಿಕ । ರಾಜೀವಲೋಚನಂ ಕಾಣಿಸಿದನರಸಂಗೆ । ರಾಜಮೌಳಿಗಳಾದಹಂ
ಸಧ್ವಜಪ್ರಮುಖದೇಶಾಧಿವಲ್ಲಭರನು ॥ ೫೯॥ ಈತೆಂಕಣಾರಾಜಹಂಸಹಂ
ಸಧ್ವಜಂ । ಖ್ಯಾತನೀತಂವೀರವೀರವರ್ಮಾವನಿಪ। ನೀತಂನೃಪಾಲರತ್ನಾ
ಭರಣಮಧ್ಯನಾಯಕನೀಲನೀಲಕೇತು ॥ ಈತಂವಿರೋಧಿಬಲದವಶಿಖಿಶಿ
ಖಿಧ್ವಜಂ । ಭೂತಳಸ್ಥಿತಿಚಂದ್ರಚಂದ್ರಹಾಸಕ್ಷ್ಮೇಂದ್ರ। ನೀತನೀತಂದಿ
ವಿಜಪತಿಯಸುತಸುತಬಭ್ರುವಾಹನಂನೋಡೆಂದನು ॥೬೦॥ ಏರಿಸಿನುಡಿವು
ದಿಲ್ಲತನಗೆಸಮವೆನಿಸುವ । ವಿರ್ಹಾರಿದಪರಾಕ್ರಮಿಗಳನುಪಚರಿಸೆಂದು।ಚೇ
ರೆಚೇರಾನೃಪರನವರಸುತಸಹೋದರಮುಖ್ಯಮಂತ್ರಿಗಳನು ॥. ಮಾರೊ
ಡ್ಡಿದಮರಾದ್ರಿಯಂತೆರಾಶಿಗಳಾಗೆ । ಹೇರಿತಂದೊಡವೆಯುಂವಿವಿಧರತ್ನಂಗ
ಳಂ।ತೋರಿಸಿಸುವಸ್ತುಗಳನೊಪ್ಪಿಸಿದನರಸಂಗೆದಾನವಧ್ವಂಸಿನಗುತ॥೬೧॥

ಬಳಿಕಾಸಮಸ್ತಭೂಪಾಲರಸುರಾರಿಯುಂ । ಬಳಸಿನಿಂದಲೆದೇವನಿನ್ನ ದರ್ಶ
ನವಾಯ್ತು । ನಳಿನಭವವಿಂಶತಿಯೊಳಿರ್ದಬಕದಾಲ್ಭ್ಯಮುನಿಯುಂಕಂ
ಡೆವಷ್ಟರಿಯೊಳು ॥ ಇಳೆಯುದ್ದೇಶದವೃಭವಂಗಳಂಸರಿಯೊಡನೆ । ತೊಳ
ಲಿನೋಡಿದೆವಧ್ವರಕೆಬಂದೆವೀಪುಣ್ಯ । ನಿಳಯನಹಧರ್ಮಜನನೀಕ್ಷಿಸಿದೆವಿನಿ
ತರಿಂಕೃತಕೃತ್ಯರಾವೆಂದರು ॥೩೦॥ ಎನಲವರನುಡಿಗಳ್ಗೆನಸುನಗುತಮುರ
ಹರಂ । ವಿನಯದಿಂದರಸಂಗೆನೇಮಿಸಿದೊಡಾಸಕಲ । ಜನಪತಿಗಳಂಧರಾ
ವಲ್ಲಭಂಸತ್ಕರಿಸಿವಿವಿಧೋಪಚಾರದಿಂದ ॥ ಮನವೊಲಿದುಬಕದಾಲ್ಭ್ಯನಂ
ಪೂಜೆಗೈದಖಿಳ । ಮುನಿಗಳಂಕೂಡಿಕೊಂಡಧ್ವರೋಪಕ್ರಮಕೆ । ವಿನು
ತಸಂಕಲ್ಪಮಂಮಾಡಿರಚಿಸಿದರಿಷ್ಟಿಕಾಚಯನಮಂಕ್ರಮದೊಳು ॥೩೧॥
ಕ್ಷೇತ್ರಮಂನೆಲೆಗೈದುವೃಷಭಂಗಳಂಪೂಡಿ । ವೇತ್ರಮಂಪಿಡಿಯೆನೃಪನೋ
ಷಧಿಗಳಿಂಕಮಲ । ನೇತ್ರೆತಾಳ್ದಿರೆಕುಂತಿದೇವಕಿಯಶೋದೆಯುಕೃಷ್ಣಾದಿ
ಪೃಥ್ವೀಶರು ॥ಧಾತ್ರಿಸುರನಾರಿಯುರ್ವರಸಿವರಕನಕಮಯ । ಪಾತ್ರೆಯೋ
ಳ್ಕರ್ಪೂರಚಂದನಜಲವನೊಡನೆ । ಸೂತ್ರವಿಧಿಗಳಮಂತ್ರಪಾಠದಿಂತಳಿ
ಯೆಶೋಧಿಸಿದರುಕ್ತಸ್ಥಳವನು ॥ ಶ್ರುತಿಮಂತ್ರವಿಧಿಗಳಿಂವ್ಯಾಸಬಕದಾ
ಲ್ಭ್ಯರನು । ಮತದಿಂದಬುಧರಿಟ್ಟಿಗೆಗಳನಳವಡಿಸಿತತ್ಕ್ಷಿತಿಯೊಳ್ಸುಪ
ರ್ಣಾಕೃತಿಯುವೇದಿಯುಂಚತುರಶ್ರ್ವಾಕದೋಳ್ಹಿಲಿಸಿನಾಲ್ಕು। ಶತವನುದರಾಸ
ನಂಗಳ್ಗೆತೆಂಕಣಗರಿಯುಚಿತಿಗೆನೂರರರಮೇಲೆನಾಲ್ವತ್ತನಾಲ್ಕನಾ । ಪ್ರತಿ
ಯೊಳುತ್ತರಪಕ್ಷಕನಿತನುಂಪುಚ್ಛಕೆಪ್ಪತ್ತೊಂದನೊಂದಿಸಿದರು ॥೩೨॥
ಮೊದಲೊಂದರಿಟ್ಟಿಗೆಯುನಿಂಮಡಿಸಲೆರಡನೇ । ಯದನಿಮ್ಮಡಿಸಲತಿವಿರಾ
ಜಿಸಿತುಮೂರನೇ । ಯದನಿಂಮಡಿಸಲಾಯ್ತುನಾಲ್ಕನೇಯದನಿಮ್ಮಡಿಸ
ಲೆಸೆದುದೈದನೆಯದು ॥ ಪುದಿದಿಂತುಮೆರೆದುದುಸುವರ್ಣಪಂಚಕದಯಾ।
ಗದವೇದಿಗಳ್ಮಹಾಮಂಟಪವನೈದೆರಚಿ । ಸಿದರೆಂಟುಬಾಗಿಲ್ಗಳಿಂಗೂಡಿ
ತೋರಣಪತಾಕೆಗಳವಿಸ್ತರದೊಳು ॥೩೩॥ ಇಷ್ಟಕಾಚಯನದಿಂರಾಜಿಸಿ
ತುಬಳಸಿಪರಿ। ಶಿಷ್ಟದಿಂದೊಪ್ಪಿದುವುವೇದಿಕೆಗಳಿಂದೆಸೆದ। ವಷ್ಟಕುಂಡದ
ರಚನೆಪಾಶಾಶವೇಳ್ಖಾದಿರಮೂರುಬಿಲ್ವಮೈದು ॥ ಗೃಷ್ಟಮಾದು
ನ್ನತಶ್ಲೇಷ್ಮಾತಕಂಮೂರ। ಧಿಷ್ಣ್ಯತದಯೂಪಮಂತೇಕವಿಂಶತಿಗಳು। ತ್ಕೃ
ಷ್ಟಹುತಸೂತ್ರಭೂಷಿತಚಷಾಲದಿಮೆರೆದವಾಮಂಟಪಾಂತರದೊಳು ॥
ವಿಹಿತಸಂಸಾಧಿತಮುಖಾವಳಿಗಳಿಂದಶತ । ಜುಹುಗಳಿಂವೈಕಂಕತದಪ
ಷ್ಟಿಸ್ರುಕ್ಸ್ರುವನಿ । ವಹದಿಂದಗೋಚರ್ಮಲೋಹಿತದುಲೂಖಲದಸೋಮ
ವಲ್ಲಿಯುಮುಸಲದ ॥ ವಿಹಸುವದಭ್ರಾಸ್ತರಣದಚಮಸಾದಿಗಳ । ಜುಹು

ಸಾಧನಂಗಳಿಂಭೂರಿಸಂಭಾರಸಂ । ಗೃಹದಿಂದಬೇಕಾದವಸ್ತು ಸಂಜಾತ ದಿಂಮುಖಶಾಲೆಕಣ್ಗೆ ಸೆದುದು । ॥೩೪॥ ವರಿಸಿಬಕದಾಲ್ಭ್ಯನಂಬ್ರಹತ್ಯ ಕಿರಿಸಿದ । ರ್ವರಮುನಿಪನಾವ್ಯಾಸನಾಚಾರ್ಯನಾದನ । ರ್ಧ್ವರಯು ಮೊದಲಾದಋುತ್ವಿಜರಾಗೆವಾಮದೇವವಸಿಷ್ಠಗೌತಮಾತ್ರಿ॥ ವರಪರಾಶ ರಭರದ್ವಾಜಕೌಂಡಿನ್ಯಬಾ । ಗುರಿಜಾಮದಗ್ನಿಗಾಲವಜಾತಕರ್ಣಸಾ । ಭರಿಸುಮಂತಕಹೋಳಶೈಬ್ಯರೋಮಶಮುಖ್ಯ ಮುನಿಗಳಾಕ್ರತುವರದೊ ಳು ॥೩೯॥ ರಕ್ಷೋಘ್ನಮಂತ್ರದಿಂದೆಂಟುಬಾಗಿಲ್ಗಳಂ । ರಕ್ಷಿಸುವರಾಗಿವಿ ಶ್ವಾಮಿತ್ರಭೃಗುವಾಯು । ಭಕ್ಷಕಪುಲಸ್ತ್ಯಮಧುಛಂದಧೌಮ್ಯೋಪಮ ನ್ಯುಕಕಪಿಲನೇತ್ರರಿವರು ॥ ಅಕ್ಷಯತಪೋಧನದವರಮುನಿಗಳೆಲ್ಲರುಂ । ಲ ಕ್ಷಿತದಪೂಜೆಗಳನನುಕರಿಸಲನಿಬರಸ । ಮಕ್ಷದೊಳ್ಧರ್ಮಜಂಮೃಗಶೃಂಗ ಧರನಾಗಿಯಾಜವಮಾನ್ಯದೊಳೆಸೆವನು ॥೪೦॥ ವ್ಯಾಸನಮುನಿಬಳಿಕಲ್ಲಿಸುಡಿದ ನವನೀಶಂಗೆ । ಭಾಸುರಸಭಾವಳಿಯದೊಳ್ಮೆರೆವದಿವ್ಯಸಿಂ ।ಹ್ಮಾಸನಾರೂ ಢನಾಗಿಹಮುಕುಂದಾದಿಭೂಪಾಲರ್ಗೆವಿನಯದಿಂದ ॥ ಈಸಮಯದೊ ಳ್ಷಿತುಷಷ್ಟಿದಂಪತಿಗಳ್ವಿ । ಲಾಸದಿಂದಮಲಕಲಶಂಗಳಂತುಂಬಿಗಂ । ಗಾ ಸರಿತ್ತೋಯಮಂಕೊಂಡುಬರವೇಳ್ವುದರಸನನುಖನಿಮಿತ್ತವಾಗಿ ॥೪೧॥ ಜನಪಕೇಳ್ವ್ಯಾಸಮುನಿವಾಕ್ಯಮಂಕೇಳ್ದುಬಳಿ । ಕನಸೂಯೆಸಹಿತತ್ರಿ ಮೋಲರುಂಧತಿಸಹಿತ। ಮುನಿವಸಿಷ್ಟಂಶಾರಿತಾನೆರುಕ್ಮಿಣಿಸಹಿತವಾರ್ಥಂ ಸುಭದ್ರೆ ಸಹಿತ ॥ದನುಜಾರಿಸೂನುನಾಯಿವತಿಸಹಿತಮುಗದೊ ।ಳನಿರು ದ್ಧನುಷೆಸಹಿತಮಾರುತಿಹಿಡಿಂಬಿಸಹಿ । ತಿನಸುತನಕುವರಂಪ್ರಭದ್ರೆಸಹಿ ತಮಲಕಲಶಂಗಳಂಪೊತ್ತೆಸೆದರು ॥೪೨॥ ಲಲನೆಲೀಲಾವತಿಸಹಿತಮಯೂ ರಧ್ವಜಂ । ವಿಲಸಿತಸುನಂದೆಬಳಿವಿಡಿಯೆನೀಲಧ್ವಜಂ । ಲಲಿತಪ್ರಭಾವತಿ ಸಹಿತಯೌವ್ವನಾಶ್ವನನುಸಾಲ್ವಧಮಿಲ್ಲೆಗೂಡಿ ॥ ಉಳಿದಹಂಸಧ್ವಜಕಿ ರೀಟಸುತಶಶಿಹಾಸ । ಕಲಿವೀರವರ್ಮತಾಮ್ರಧ್ವಜಾದ್ಯವನಿಪಾ । ವಳಿತ ಮ್ಮತಮ್ಮ ಕಾಂತೆಯರೊಡನೆ ಸಲಿಲಕಲಶಂಗಳಂತಾಳ್ದಿಸೆದರು ॥೪೩॥ ದೊ ರೆದೊರೆಗಳೆಲ್ಲರುಂತಂಮತಂಮ್ಮರಸಿಯು । ರ್ವರೆಸಿಗಂಗಾತಟಕೆಮುಸುಕಿ ದಸುಪಲ್ಲವೋತ್ಕರದಪೊಂಗಲಶಂಗಳಂಕೊಂಡುನಡೆಯಲವರವರನ್ಯಗಾ ವಿಲ್ಗಳ॥ ಪರಿವಾರದಿಂದಪಾರ್ವರಮಂತ್ರಘೋಷದಿಂ । ನೆರೆದಿಹಮಹಾ ಜನದಸಂದಣಿಗಳಿಂಪಾತ । ಕರನೃತ್ತವಾದ್ಯಗೀತಂಗಳವಿಲಾಸಧದುತ್ಸವದಿಂ ದಚೆಲ್ವಾದುದು ॥೪೪॥ ಆನೆಗಳಮೇಲೆಕುವರಿಯರಿರ್ದುಮುತ್ತಿಗೆಳ । ಸೋನೆಗಳನಡಿಗಡಿಗೆಸೂಸುತಿರೆಮನ್ಮಥನ । ಸೇನೆಗಳತೆರದಿಂದನೃಪಸತಿ

ಯುರುಳಿಗೆವತ್ತರಳೆಯುರ್ಕೆಂಗೊಳಿಸಲು ॥ ನಾನಾವಿಧದೊಳೆಸೆವಶೃಂಗಾರ
ವಿಭವದಿಂಭೂನುತಾಶ್ಚರ್ಯವಾಗಿರೆಜಲಾಗಮುಕೇಸರಿ । ತಾನೆಬರೆವೊಳಗಿ
ದುವುದೇವದುಂದುಭಿಕರದವರಳಮಳೆಗೆಗನದಿಂದ ॥೪೫॥ ದೇವದೇವರದೇವ
ನೆಂಬುದಂವಸಾನುಷ್ಯ । ಭಾವದಿಂಲಕ್ಷ್ಮೀವಿಲಾಸನೆಂತೆಂಬುದಂ। ಗೋ
ವಳಯರೊಡನಾಟದಿಂದಲಾಗಾಡಿದಂತೀಗವದನೆಬದೊಳೊಗೆದು ॥ ಪಾವ
ನ್ನವೆನಿಪಗಂಗಾಜಲವನೆತ್ತುವವು । ಹಾವಿಭುವಿನೆವಲೀಲೆಗೆಕೈವುಗಿದು
ಕುಂತಿ ।ದೇವಕಿಯುರಚ್ಯುತನವಸನವಂಪಿಡಿದುರುಕ್ಮಿಣಿಯುಸೆರಗಂಪಿಗಿದ
ರು ॥೪೬॥ ನೋಡಿದಂನಾರದಮುನೀಂದ್ರನೀಕೌತುಕವ । ನಾಡಿದಂಸತ್ಯ
ಭಾಮೆಯುಮನೆಗೆಬಂದುನೀಂ। ಮಾಡುವೃಜ್ಞಗವಿದೇನೆಲೆದೇವಿಮಂದಿರ
ದೊಳರ್ಧ್ಯಾರಂಭಕೀಗ ॥ ಆಡಂಬರದೊಳಂಬುಕಲಶಂಗಳಂಪಿಡಿಯೆ ।ಕೂ
ಡಿದಚತುಃಷಷ್ಟಿದಂಪತಿಗಳೊಗ್ಗಿನೋ । ಳ್ಗಾಡಿಮಿಗೆರುಕ್ಮಿಣಿವಿರಾಜಿಸು
ವಳೇವೆಳ್ಳಿನವಳಭಾಗ್ಯವನೆಂದನು ।೪೭॥ ಛತ್ರಚಾಮರಧೂಪಗಂಧಕು
ಸುಮಾವಳಿಯು । ಚಿತ್ರವೈಭವದಿಂದದಂಪತಿಗಳಾಗಿಬಹು । ಪುತ್ರಪೌತ್ರ
ವರ್ಗರಸಿಕ್ಕೈವಾರಿಸುವಸಕಲಜನದಸನ್ಮಾನದಿಂದ ॥ ಅತ್ರಿಮೊದಲಾದಮು
ಷಿಗಳಮುಂವೆನೆರೆದಿಹಧ।ರಿತ್ರಿಯುಸಮಸ್ತರಾಜೋತ್ತಮರನಡುವೆಶತಪತ್ರ
ನೇತ್ರನಬಳಿಯರಂಜಿಸುವರುಕ್ಮಿಣಿಯುಭಾಗ್ಯಮದನೆಪೊಗಳ್ವೆನು ॥೪೮॥
ಉರ್ವಮೋಗದರಾಣಿಕೃಷ್ಣಂಗೆನೀನೆಂದು । ಗರ್ವಿಸುವಬರಿದೆರುಕ್ಮಿಣಿ
ಯಂತೆಶೌರಿಸಹ । ತುರ್ವಿಪನಯಜ್ಞದೋಳ್ದಂಪತಿಗಳಾಗಿರ್ದವರ್ಗದು
ರ್ಲಭಮಿದೆಂದು ॥ ಗೀರ್ವಾಣನದಿಯುಸಲಿಲಾಗಮುಕೆಪೊರವುಟ್ಟು ।ಸರ್ವ
ಸಂಭ್ರಮದಿಂದವರ್ತಿಸದೆಮನೆಯೊಳಿಹ । ನಿರ್ವಾಹವೇನೆಂದುನಾರದಂ
ಕೇಳ್ದೊಡಾದೇವಿನಗುತಿಂತೆಂದಳು ॥೪೯॥ ಮುನಿಪನೀನರಿಯದವನಂತೀ
ಗಬಂದೆನ್ನ । ಮನವನಾರೈದುಕೇಳ್ದಪೆದನುಜರಿಪುತನ್ನ । ಮನೆಯೊಳಿ
ರ್ದಪಳೆಂದುಸತ್ಯಭಾಮಾದೇವಿಕೃಷ್ಣನಂತೋರಿಸಲ್ಕೆ ॥ಜನಪತಿಯುಮುಂ
ದೆರುಕ್ಮಿಣಿಸಹಿತತೊಳಗುತಿಹ । ವನಜಾಕ್ಷನಂಕಂಡನಲ್ಲಿಮೇಣಿಲ್ಲಿಮೋ
ಹನರೂಪನಾಗಿಕಂಗೊಳಿಸುತಿರ್ದಪನೆಂದುನಾರದಂಬೆರಗಾದನು ।೫೦॥
ನಾಂಬಂದಬಗೆಯನರಿದಿಲ್ಲಿನೀನಿಹೆಸಾಕೆ । ದೆಂಬಿಯಲವನುಜಲೀಲೆಗಳು
ನಿನಗೆಂದುಪೀ । ತಾಂಬರಂಗಭಿನಮಿಸಿಬೀಳ್ಕೊಂಡುನಾರದಂಪೊರವುಟ್ಟು
ವಹೀಟದಿಂದ ॥ ಜಾಂಬವತಿಯಾಲಯಕೆನಡೆತಂದುತಾಯೆಡೆಕವು । ಲಾಂಬ
ಕಂಸೃಪನಮುಖಕೆರಸಿಯುರ್ವರಸಿಗಂ । ಗಾಂಬುಪಂತಹನಲ್ಲಿಸಂಭ್ರಮದೊ
ಳೀಕೆಪೋಗದೆಮನೆಯೊಳಿಹೆಯೆಂದನು ॥೫೧॥ ಎಂದೊಡೆಮುನೀಂದ್ರನಾವೆ

ಳ್ಳರುಂನಿಮಿಷಪುರಮಿಂಬದಳನೇತ್ರನನಗಲ್ದು ಜೀವಿಸಲರಿಯೆ । ಹಿಂದೆ
ವಿಕ್ರಮನೆ ನೋಳಿರ್ದಪನಾತನಿವರೆಳೆನಗೆಮತ್ಸರವಿದೇಕೆ ॥ ತಂದನಿ
ಸ್ಪಾಟಮಂಬಲ್ಲೆ ನೆನೆಜಾಂಬವತಿ । ಯಂದೇವಕೀಸುಷಿಪರಸಿಬೀಳ್ಕೊಂಡು
ರಾಣಿಪುರ । ಮಂದಿರದೊಳಲ್ಲಿಯುಂಕೃಷ್ಣನಿಹನೆಂದರಿದುಮುಖಶಾಲೆಗೈ
ತಂದನು ॥೫೨॥ ಅಲ್ಲಿಂದನಾರದಂಮತ್ತೆ ಬಂದಲ್ಲಿಭೂ । ವಲ್ಲಭನಮುಂದೆರು
ಕ್ಮಿಣಿಸಹಿತಕಟ್ಟಿರ್ದ । ಪಲ್ಲವದಪೊಂಗಲಶಮಂತಾಳ್ದು ಋತ್ವಿಜರಮುನಿ
ಗಣದನೃಪನಿಕರದ ॥ ಎಲ್ಲಾಜನಂಗಳಪೊಗಳ್ಕೆಯುಂಕೈಕೊಂಬ । ಸಲ್ಲಾ
ಪದಿಂದಸೆವೃತಿರೆಕಂಡುಬೆರಗಾಗಿ । ನಿಲ್ಲದೆನಿಗಮಸೂಕ್ತದಿಂಸ್ತುತಿಸಿದಂದೇ
ವಪುರದಲಕ್ಷ್ಮೀಪತಿಯನು .. ... ॥೫೩॥

ಸಂಧಿ ೩೩ಕ್ಕೆ ಪದ್ಯ ೧೮೭೦ಕ್ಕೆ ಮಂಗಳಮಸ್ತು.

## ಮೂವತ್ತನಾಲ್ಕನೆಯ ಸಂಧಿ.

ಸೂಚನೆ॥ ಮಿಗೆಮೂಜಗಂದಣಿಯೆಹಯಮೇಧಯಜ್ಞಮ
ಮುಗಿಸಿಧರ್ಮಾತ್ಮಜಂಕೃಷ್ಣಾದಿಸಕಲನೃಪ । ತಿಗಳನವರವ
ರನಗರಂಗಳ್ಗೆಕಳುಹಿಸುಖದಿಂದರಾಜ್ಯಂಗೈದನು

ಅರಸಕೇಳರವತ್ತುನಾಲ್ಕುದಂಪತಿಗಳೆ । ಧ್ವರದಋತ್ವಿಕ್ಕುಗಳ್ವೆರಸಿ
ವೇದವ್ಯಾಸ । ಪರಮರ್ಷಿಗಂಗೆಯೊಳಲದೇವತೆಯನರ್ಚಿಸಿದಮಂತ್ರಿ
ತೋದಕವನು ॥ ವರಪುಷ್ಪಪಲ್ಲವದಪೊಂಗಲಶಮಂತುಂಬಿ । ಕರದೊಳ
ನಸೂಯಗೀಯಲ್ಕವಳರುಂಧತಿಯ । ಶಿರಕೆಪೊರಿಸಿದೊಡಾಕೆರುಕ್ಮಿಣಿಯ
ಸಿರಿಮುಡಿಯೆಳಿರಿಸಿನಗುತಿಂತೆಂದಳು ॥೧॥ ದೇವಿಸಿರಿಮುಡಿಗಲರ್ಪೊರೆಯ
ಹುದುನಿನಗೆನೀ । ರ್ತೀವಿರ್ದಪೊಂಗಲಶಮಿದುತಿಣ್ಣಮಾಗದೆಂ । ದಾವಸಿಷ್ಠ
ನರಮಣಿರುಕ್ಮಿಣಿಗೆವಿನಯದಿಂನುಡಿದೊಡೆಸುಭದ್ರೆಕೇಳ್ದು ॥ ಗೋವರ್ಧ
ನವನಾಂತವಿಶ್ವಕುಕ್ಷಿಯನೆದೆಯೊ । ಳಾವಗಂಧರಿಸಿಕೊಂಡಿರ್ದಮಾನಿನಿಗೆ
ಬಿಣ್ಣಾಪುದುಪತಿವ್ರತಾಧರ್ಮಮಿದಕಳುಕಲೇತಕೆತಾಯೆನೀನೆಂದಳು ॥೨॥
ನಸುನಗುತರುಂಧತಿಗೆಬಳಿಕರುಕ್ಮಿಣಿನುಡಿದ । ಳುಸುರಲಂಜುವೆನೀಸು
ಭದ್ರೆಯವಿಶೇಷಗುಣ । ದೆಸಕಮಂನಮ್ಮಂತೆಬಿಡದೆರಮಣನೆದೆಯೊಳಾ
ವಗಂಧರಿಸಳೊಮ್ಮೆ ॥ ಒಸೆದೊಡವಿಚಾರಿಸುವಳಲ್ಲದೊಡೆವಲ್ಲಭನ । ಗಸ
ಣಿಯುಂಮಾಡಳ್ಪತಿವ್ರತಾಧರ್ಮದೊಳ್ । ಳ್ಪೊಸತೆಂದುಸರಸಮಾಡುತ್ತೈದೆ
ಯರೊಡನೆಪೊಂಗಲಶಮಂತಾಳ್ದಳು ॥೩॥ ಅರವತ್ತುನಾಲ್ಕುದಂಪತಿಗಳೊ
ಪ್ಪುವಗಂಗೆ । ದೊರೆಯಿಂಪಬಳಿಕವಾಋಮುಂಟಪಕನೇರ್ದುಗಂಬಿ । ಮೆರೆವ
ಪೊಂಗಲಶಂಗಳಂಕೊಂಡುಬಂದರುತ್ಸವದಿಂದಮುನಿಗಳೊಡನೆ ॥ ಕರದ

ವೆಸಚರಮೇಲೆಮುತ್ತುಗಳಸೇಸೆಗಳ್ನಿರೆವೊಳಗಿದುವುಸಕಲವಾದ್ಯಂಗಳಭ್ರ
ದೊ|ಳ್ತುರುಗಿತನಿಮಿಷವಿತತಿಕೌತುಕಕೆನೆರೆದುದುಮಹಾಜನಂಮೇದಿನಿ
ಯೊಳು ||೪|| ಆಪುಣ್ಯಸಲಿಲದೊಳ್ಸ್ನೇಚಸಂಗ್ರೈದೆಸೆವ | ಯೂಪದೊಳ್ಕ
ಟ್ಟಪೂಜಿಸಿದರಮಲಾಶ್ವಮಂ | ಭೂಪನುಂದ್ರೌಪದಿಯುಮಭಿಷಿಕ್ತರಾದ
ರ್ಸುಮಂತ್ರಿತಜಲಂಗಳಿಂದ || ವ್ಯಾಪಿಸಿದವಿಧಿವಿಧಾನಂಗಳಿಂದಾವುದುಂ
ಲೋಪವಿಲ್ಲದೆನಡೆಯುತೊಡಗಿತುಮಹಾಧ್ವರಂ | ತಾಪಸಪ್ರತತಿಸಂದಿಗ್ಧಂ
ಗಳಂತಿಳಿದುಸಮ್ಮತದೊಳಹುದೆನಲ್ಕೆ ||೫|| ಬಂದುಮುನಿಗಳಪಾದಮಂತೊ
ಳೆದಸತ್ಕಾರ | ದಿಂದಪೂಜಿಸಿನಿವಾಸಸ್ಥಾನಮಂಕೊಟ್ಟು | ವಂದಿಸುವನ
ಚ್ಯುತಂತಾನೆಕುಳ್ಳಿರ್ಪಡಾಸನವನೀವಂಸಾತ್ಯಕಿ || ಚಂದನಸುಕರ್ಪೂರಕು
ಸುಮತಾಂಬೂಲಂಗ | ಳಿಂದಲಂಕರಿಸುವಂಪ್ರದ್ಯುಮ್ನನವರವರ | ಮಂ
ದಿರಕೆಬೇಕಾದವಸ್ತುಗಳನೊದವಿಸುವನಡಿಗಡಿಗೆಸಹದೇವನು ||೬|| ಸಕಲ
ಜನಜಾಲಮಂತಾರತಮ್ಯವನರಿತು | ನಕುಲನಾದರಿಸುವಂಪಗಲಿರುಳ್ಪ
ರಿಮಳೋ|ದಕವನೆಳವಡಿಸುವಂಕರ್ಣಸುತನೆಲ್ಲರಾರೆ ಕೆಯ್ಯೆಡಿಂಬಿಗಾಯ್ತು
ಶಕಟಸಂದೋಹದಿಂಪೂಡಿಸುವಸಂಭಾರ | ನಿಕರಕಧಿಪತಿಯಾದನನಿರುದ್ಧ
ನನ್ನವಾ | ಟಕೆಗಳೊಳ್ಪಾಕಮಂಮಾಡಿಸುವಮಣಿಹಮಂಕೃತವರ್ಮಕಂ
ತಾಳ್ದನು ||೭|| ಯೋಜನತ್ರಯದಚಪ್ಪರದೊಳೆತೆವಿಡದನಾ | ಜನಕೆಬೇ
ಕಾದಷಡ್ರಸದಶಾಲ್ಯಾನ್ನ | ಭೋಜನವನೈದೆಮಾಡಿಸುತಿಹುದುಸಾಂಬಾ
ದಿಯಾದವರ್ಗಾಯ್ತುಬಳಿಕ || ಶ್ರೀಜನಾರ್ದನಸಸಾನ್ನಿಧ್ಯವಾಗಿರೆಧರ್ಮ
ರಾಯನಮಹಾಧ್ವರಂಸಾಂಗವಾಗದೆಮೇಣ್ಸ | ರೋಜನಾಭಂತಾನೆಯ
ಜ್ಞಸ್ವರೂಪನೆಲ್ಲವೆಭೂಪಹೇಳೆಂದನು ||೧೦|| ಸುರೆಯುದೊಂದಲ್ಲದೆಪಯೋ
ದಧಿಯನಾರನಾಕ | ರುಷಣಂಗೈದರನೆಸುರಸಂಗಳೆಸೆಯೆಕುಲ | ಗಿರಿಗ
ಳಂನಗುವಂತೆಮಿಸುಪಶಾಲ್ಯೋದನದರಾಶಿಗಳ್ಕಂಗೊಳಿಸಲು || ಪರಿಪರಿ
ಯಭಕ್ಷ್ಯಪಾಯಸವಿವಿಧಶಾಕಾದಿ | ಪರಿಕರಮದಂತೊದಗಿದುವೊಕೃಷ್ಣ
ಸುರಭಿತಾಂ | ಪೊರೆಯೊಳಿರಲರಿದಾವುದೆಂಬಿನಿಂದಣಿದುಂಡರಾಮುಖದೊಳ
ಖಿಳಜನರು ||೧೧|| ಊಟದಸುಗಂಧಾನುಲೇಪನದಕರ್ಪೂರದ | ವೀಟಿಕಾ
ವಳಿಯಮಾಲ್ಯಾಂಬರವಿಭೂಷಣದ | ಮಾಟಸಿಂಗರದಿಂಪ್ರವಡೆದುಮಿಗೆಬ
ಯಸಿಬೇಡಿದಸುವಸ್ತುಗಳನಿತ್ತು || ಪಾಟಸುವಭೀಮಫಲುಗುಣರಸಮ್ಮಾನ
ದಸ | ಘಾಟಿಕೆಯನೃಪಕುಲದಪುಣ್ಯಮುನಿಗಳಯಜ್ಞ | ವಾಟದತಿಕೌ
ತುಕದವಾಳ್ಕೆಯಂಕಂಡುನಲಿದಾಡಿತುಜನಂಮುದದೊಳು ||೧೦|| ಹೇಮ
ವಸ್ತ್ರಾಭರಣಮುಕ್ತಾಫಲಂಗಳಂ | ಸಾಮಜತುರಂಗರಥರತ್ನಜಾಲಂಗ

ಳಂ । ಗೋಮಹಿಷಿದಾಸದಾಸೀನಿಕರಮಂಮೃಗಾಜನಕಂಬಳಾದಿಗಳನು॥ ಚಾಮರವ್ಯಜನಾತಪತ್ರಯಾನಂಗಳಂ । ಭೂಮಿಗಳನಗರುಚಂದನವು ಖ್ಯವಸ್ತುವಂ । ಭೀಮಫಲುಗುಣರಖಿಳಯಾಚಕಾವಳಿದಣಿಯೆಕೊಡುತಿರ್ದರಾದರದೊಳು ॥೧೧॥ ಯಾಗದೀಕ್ಷೆಯನೃಪಂಮಂತ್ರವಾರಿಸ್ನಾತ । ನಾಗಿಬಳಿಕನುಪಮಸುಪರ್ಣಚಯನದಪೂರೆಗ । ಪೋಗಿಹಯಮಂತರಿಸಲು ಜ್ವಲಿಸುವಗ್ನಿ ಪಶುವಾದುದಂದಭಿವರ್ಧಿಸೆ ॥ ಮೇಗೆಶ್ರುತಿವಾಕ್ಯಂಗಳಂಪಠಿಸುತೆಲೆಘೋಟ । ಪೋಗುನೀನಶ್ವಲೋಕದೊಳಮರಪದವಪ್ಪ । ದೀಗನಿನಗಿಂದಂಬುಮಳಿಸಿಲ್ಲದುತ್ತಮಸ್ವರ್ಗವುಂಪಡೆಯೆಂದನು॥೧೨॥ನೃಪನಮಾತುಕೇಳ್ದುವಾಜಿತಲೆಗೊಡಹಿಮುರ । ರಿಪುವನೀಕ್ಷಿಸುವಭಿಪ್ರಾಯಮಂ ಮೋದದಿಂ । ವಿಪುಲಮದನಕುಲಂಗೆಸೂಚಿಸಿದೊಡಾತನದರಿಂಗಿತವನರದುಬಳಿಕ ॥ ತಪನಸುತನಂದನಂಗೆಂದನವಧರಿಸುಹಯ । ಮುಪರಿಲೋಕದೊಳಶ್ವಸದವಿಯಂತಾನೊಲ್ಲೆ । ನುಪಮಗೈದದಕ್ಕೆಕೃಷ್ಣಸಾಯುಜ್ಯಮಂಪಡೆವೆನೆಂದೆಂಬುದೆನ್ನೊಳಿಂದು ॥೧೩॥ ಫಣಿಶಯನಸಾನ್ನಿಧ್ಯವಿಂತಿಲ್ಲದೀಶ್ವರಾ । ರ್ಪಣಮಲ್ಲದನ್ಯಯಜ್ಞಂಗಳೊಳ್ಮಡಿದಪಶು । ಗಣಕೆಮೇಣಾವಕರ್ತುಗಳ್ಗತಿಶಯಮಸ್ವರ್ಗಭೋಗವಾದಪುದನಿನ್ನ ॥ ಪ್ರಣುತಸತ್ಕ್ರತುಫಲಂಶ್ರೀಕಾಂತನಾದಕಾ । ರಣದಿಂದಕೃಷ್ಣನಶರೀರಮಂಪೊಗುವನೀ । ಕ್ಷಣದೊಳಿದನೆಲ್ಲರುಂನೋಡಲೆನುತಲಿದತುರಗವೆಂದುನಕುಲಂನುಡಿದನು ॥ ತುರಗದಂತಭಾವಮಂತಿಳಿದುನಕುಲನಿಂ । ತರಸಂಗಬಿನ್ನಪಂಗೈದುದಂಕೇಳ್ದಖಿಳ । ಧರಣೀಶ್ವರಮುನಿಗಳಂಗನಾನಿಕುರುಂಬನಾಶ್ಚರ್ಯಮಂನೋಡಲು ॥ ನೆರೆದುದುಸುಮಂತ್ರಿತದಯೂಪದೋಳ್ಕಟ್ಟುತ । ಧ್ವರಹಯವನಭಿಮಂತ್ರಿಸಿದರಚ್ಯುತನಮುಂದೆ । ಪರಮರ್ಷಿಗಳ್ಬಳಿಕಭೀಮನಂಕರೆದುಮುದದಿಂದಧೌಮ್ಯನಿಂತೆಂದನು ॥೧೪॥ ಈಕ್ಷಿಪುದುಸಕಲಜನಮಲೆವ್ರಕೋದನಾಂಪ । ದೀಕ್ಷೆಯಂತೋರಿಸುವನೀತುರಂಗಮದೊಳೊಂದೀಕ್ಷಣಂಖಡ್ಗಮಂಕೊಂಡುನಿಶ್ಚಲನಾಗಿನಿಲ್ವುದೆಂದಾಧೌಮ್ಯನು॥ ಪ್ರೋಕ್ಷಿಸಿಕರಾಗ್ರದಿಂಪಿಡಿದುಹಯದೆಡಗಿವಿಯ । ನಾಕ್ಷೋಭದಿಂಸೀಳಿದೊಡೆನೆತ್ತರಿಲ್ಲದೆಮ । ಹಾಕ್ಷೀರಧಾರೆಪೊರಮಟ್ಟುದುಸಮಸ್ತಲೋಕಂಕಂಡುಬೆರಗಾಗಲು ॥೧೫॥ ಮತ್ತೆಧೌಮ್ಯಂಭೀಮಸೇನನಕರೆದುಪುರು । ಷೋತ್ತಮಂಪ್ರೀತನಪ್ಪವೊಲಿನ್ನುಬಾಳಿಂದ । ಕತ್ತರಿಸುಕುದುರೆಯತಲೆಯನೆಂದುನೇಮಿಸಿದೊಡನಿಲಸುತನಾಕ್ಷಣದೊಳು॥ ಬಿತ್ತಿಡಿದವಾದ್ಯಘೋಷದೊಳಿಮಲಬರ್ಹಿಗಳ । ಬಿತ್ತರದಪರಿಷ್ಕೃತವಾಜಿಶಿರಮಂಛೇದಿ । ಸುತ್ತಿರಲಿಳೆಗೆಬೀ

ಳೆದೆನೆಘಸ್ಥಳಕಡರ್ವಡಗಿತಿನಮಂಡಲದೊಳು ॥೧೭॥ಪರಿಶುದ್ಧಮಾಗಿಪ್ರು
ದೀತುರಗನೆಂದರಿದು । ಹರಿಹೊಯಿದನದರುರಸ್ಥಳದೊಳುರ್ವಿಗೆಬಿದ್ದು
ದಿರದೆಪ್ರೊರಮಟ್ಟುಜೀವಾತ್ಮನತಿತೇಜದಿಂದಚ್ಯುತಾಸ್ಯಗಲು॥ವರಮುನಿಗ
ಳಮಲಧರ್ಮವಿದೆಂದರೆಲೆಯುಧಿ । ಷ್ಠಿರಪೂರ್ವಯುಗದಧ್ವರಂಗಳೋ
ಳ್ಮಾಣವೀ । ಪರಿಪವಿತ್ರದಪಶುವನಿದುನಿನಗೆದೊರಕೊಂಡುಕ್ರತುಸಫಲ
ಮಾದುದೆಂದು ॥೧೮॥ ಏವೇಳ್ವೆನಾಶ್ಚರ್ಯಮಂಬಳಿಕವಾಜಿಯಕ । ಳೇವರಂ
ಕರ್ಪೂರಮಾದುದತಿಶುಭ್ರದಿಂ । ಭಾವಿಸಿಮಹಾಮುನಿಗಳಿದುಕೃಷ್ಣಮಹಿ
ಮೆಯೆಂದಾಗವಿಸ್ಮಿತರಾಗಲು ॥ ಭೂವರಂಹರಿಸಹಿತಪತ್ನಿಯಂಕೂಡಿ
ಕೊಂ । ಡಾವೇಷ್ಟಿಸಿದಸಕಲಬಾಂಧವರಗಡಣದಿಂ । ಪಾವಕನಮುಂದೆಕು
ಳ್ಳಿರ್ದನಾದರದಿಹೋಮಂಗಳಂಮಾಡಿಸಲ್ಕೆ ॥೧೯॥ ಧಾರುಣಿಗೆಕುಪ್ಪಳಿ
ಸದಾತುರಗಗೊಡಲಕ । ರ್ಪೂರಮಂಸ್ರುವದಿಂದಸಂಗ್ರಹಿಸಿಶಾಸ್ತ್ರಪ್ರ ।
ಕಾರದಿಂದಾಗವೇದವ್ಯಾಸಮುನಿಪನಮರೇಂದ್ರನಂಕರೆದುಬರಸಿ ॥ ಈ
ರಾಜಕುಲತಿಲಕನಧ್ವರದೊಳೀವಘನ । ಸಾರಾಹುತಿಯನೀಗಸ್ವೀಕರಿಸು
ಮುಂನಿನ । ಗಾರುಂಕೊಡುವರಿಲ್ಲಕಲಿಯುಗದೊಳೀತೆರದೊಳೆನೆಶಕ್ರನಿಂ
ತೆಂದನು ॥೨೦॥ ಸರ್ವನಕ್ಷತ್ರಸಂಯುತದಗುರುವಾರಮಾ । ಗಿರ್ಪುದಿಂದೆ
ಲೆಮುನೀಶ್ವರಮಹೀಪಾಲಂಸ । ಮರ್ಪಿಸುವಘನಸಾರದಾಹುತಿಯನಗ್ನಿ
ಮುಖದಿಂದನೀನೆನಗಿತ್ತೊಡೆ ॥ ದರ್ಪದಿಂತೃಪ್ತನಾದಪೆನೆಂದುಸುರಪನೆ ।
ಲ್ಲಕರ್ಪೂರಗಳೆಪ್ರತ್ಯಕ್ಷಮಾಗಿಬಂದಿರಲಾಗ । ಕರ್ಪೂರಮಂಸ್ರುವದೊಳನಲ
ನೋಳ್ವೇಳ್ವದಂವ್ಯಾಸಮುನಿಮಂತ್ರದಿಂದ ॥೨೧॥ ಪ್ರತ್ಯಕ್ಷಮಾದಶಕ್ರಾ
ದಿದೇವತೆಗಳ್ಗೆ । ಶ್ರುತ್ಯುಕ್ತಮಂತ್ರವಿಧಿಗಳವಿಧಾನಂಗಳಿಂ । ದತ್ಯಧಿಕಘ
ನಸಾರದಾಹುತಿಗಳಂಯಥಾಕ್ರಮದಿಂದಹುತವಹನೋಳು ॥ ಸತ್ಯಸಂಪ
ನ್ನವೇದವ್ಯಾಸನೀಯಲ್ಕೆ । ಸುತ್ಯಾಹವನಸವನಸಮಯದೋಳ್ವಿರಚಿಸು
ವ ।ಕೃತ್ಯಂಗಳಿಂದನಡೆದುದುಮಖಂತ್ರಿಜಗಸಚರಾಚರಂಮಿಗೆದಣಿಯಲ್
ಸಾಕ್ಷಾತ್ಸಯಜ್ಞಸ್ವರೂಪನಚ್ಯುತತಾನೆ । ಸಾಕ್ಷಿಯಾಗಿರ್ದುಮಾಡಿಸುವ
ವಂಶೌತ್ರವಿ । ದ್ಯಾಕ್ಷಮನೆನಿಪಧೌಮ್ಯನೇಕರ್ಮಕರ್ತೃವಿಂಶತಿಕಮೇಸಂ
ಭವರನು ॥ ಈಕ್ಷಿಸಿದಬಕದಾಲ್ಭ್ಯನೇಬ್ರಂಹನಾಚಾರ್ಯ । ನೇಕ್ಷಿತಿಸುರಾ
ಗ್ರ್ಯವೇದವ್ಯಾಸನಧ್ವರಕೆ । ದೀಕ್ಷಿತನಧರ್ಮಜಮಹಾಮುನಿಗಳೇಋತ್ವಿ
ಜರ್ಪೂಪತಿದೆನಿಸದಿಹುದೆ ॥ ೨೨ ॥ ಆಹುತಿಗಳಂಕೊಂಡುಮಿಗೆತೇಜದಿಂದೊ
ಪ್ಪು । ವಾಹುತವಜ್ವಾಲೆಗಳಪುಣ್ಯದರ್ಶನದೊ । ಳಾಹೋಮಧೂಮ
ಸಂಸ್ಪರ್ಶನದೊಳಾಕರ್ಮಕೃತಸೋಮಪಾನದಿಂದ ॥ ಆಹೋತ್ರದುರು

ಮಂತ್ರಘೋಷಣಶ್ರವಣದಿಂ । ದಾಹವಿರ್ಗಂಧದಾಘ್ರಾಣದಿಂದಾಮುಖದೊ । ಳಾಹಿಮಕರಾನ್ವಯಲಲಾಮನೆಸೆದಂಪೂತನಾಗಿಸಂತೋಷದಿಂದ ॥೨೪॥ ಯಾಗದಿಂದಣಿದುಪಾವನಮಾದುದಿಳೆಹವಿ । ರ್ಭಾಗದಿಂತುಷ್ಟಿವಡೆದುದುದೇವತಾವಳಿಸ । ರಾಗದಿಂದಸುರಾರಿಸಂತುಷ್ಟನಾಗಿತೆಗೆದಪ್ಪಿಭೂಪಾಲಕಂಗೆ ॥ ಈಗನಿನ್ನಧ್ವರಂಸಾಂಗದಿಂಸಂಪೂರ್ಣ । ಮಾಗಿಮುಗಿದುದುಮಾಳ್ಪುದವಭೃತಸ್ನಾನಮಂ । ಭಾಗೀರಥಿಯೊಳೆಂದುನೇಮಿಸಿದನಖಿಳಮುನಿಜನಮೈದೆಕೊಂಡಾಡಲು ॥೨೫॥ ವಿಪ್ರವಧೆಮೊದಲಾದಬಹುಪಾಪಸಂಚಿತಂ । ಕ್ಷಿಪ್ರದಿಂಪೋಗಿಪರಿಶುದ್ಧಮಹುದೆಂಬವೇ । ದಪ್ರಮಾಣದವಾಜಿಮೇಧಾವಭೃತಮಂಮುನೀಶ್ವರರ್ಮಾಡಿಸಲ್ಕೆ ॥ ಸುಪ್ರಸನ್ನತೆಯಿಂದಸಾನ್ನಿಧ್ಯಮಾಗಿಬಿಡದಪ್ರಮೇಯಂತಾನಿರಲ್ಕೆನೃಪಮೌಳಿಪರ । ಮಪ್ರೀತನಾಗಿತೊಳಗಿದನಧ್ವರಂಮುಗಿಯೆರಾಜಮುನಿಗಣದನಡುವೆ ॥೨೬॥ ರಮಣಿಸಹಿತರಸನಭಿಷಿಕ್ತನಾದಂಯಥಾ । ಕ್ರಮದಿಂದಸೋಮಪಾನಂಗೈದರೆಲ್ಲರುಂ । ವಿಮಲಹೋಮಂಗಳಪುರೋಡಾಶಶೇಷಮಂಪೋಷಿಸಿದರುತುಪದೊಳು ॥ ತಮತಮಗೆವಂದಿಗಳ್ಕೊಂಡಾಡಿಗಾಯಕೋತ್ತಮರೊಲಿದುಪಾಡೆನರ್ತನದಮೇಳವದಸಂ । ಭ್ರಮದಿಂದವೀಣಾದಿವಾದಿತ್ರಘೋಷಮಂನೂಡೆನೃಪವರನೆಸೆದನು ॥೨೭॥ ವಿನುತರತ್ನಾದಿಶಿಖರಸ್ಥಮಾಗಿರುತಿರ್ಪ । ಕನಕವೃಷಮಂಕೊಟ್ಟನವನಿಪಂಬಕದಾಲ್ಭ್ಯ । ಮುನಿಗೆಬಳಿಕೊಂದೊಂದುರಥವನೊಂದೊಂದಿಭವನೀರ್ರೈದುವಾಜಿಗಳನು ॥ ಅನುಚರರಚತುಷ್ಟಯವನೊಂದೊಂದುಕೊಳಗಮು । ತ್ತನುಪಮಸುವರ್ಣಶತಭಾರಮನೂರುಕಾಂ । ಚನವಿಭೂಷಿತಸುರಭಿಗಳನಿತ್ತುಮನ್ನಿಸಿದನಖಿಳಋುತ್ವಿಕ್ಕುಗಳನು ॥೨೮॥ ಇಂತಖಿಳಋುತ್ವಿಕ್ಕುಗಳ್ಗಿತ್ತುಮನ್ನಿಸಿದ । ನಂತಾದರಿಸಿದನೆಲ್ಲಾದ್ವಾರಪಾಲಕರ । ನಂತರಿಸದುಳಿದಮುನಿನಿಕರಕಿಚ್ಛಾದಾನಮಂಕೊಟ್ಟನುಚಿತದಿಂದ ॥ ತಿಂತಿಣಿಸಿನೆರೆದಿಹಸಮಸ್ತಭನನಿರ್ಜರರ । ಸಂತತಿಗಳಂದಣಿಸಿದಂಮಹಾಧನದಿಂದ । ನಂತರದೊಳರಸನುಪಚರಿಸಿದಂಚಂದ್ರಹಾಸಾದಿಪೃಥ್ವೀಶ್ವರರನು ॥೨೯॥ ಘೋಟಕಸಹಸ್ರಮಂಶತಶತಗಜಂಗಳಂ । ಕೋಟಿಪರಿಮಿತಸುವರ್ಣಂಗಳಂಮಣಿಮಯಕಿ । ರೀಟಾದಿಭೂಷಣಾವಳಿಗಳಂಕೊಟ್ಟಖಿಳಭೂಪಾಲರಂಮನ್ನಿಸಿ ॥ ಪಾಟಮಿಗೆರುಕ್ಮಿಣೀದೇವಿಮೊದಲಾಗಿಹವ । ಧೂಟಿಯರವರ್ಗಮಂನೃಪತಿಸತ್ಕರಿಸಿದಂ ಮಿಾಟೆನಿಪವಿವಿಧರತ್ನಾಭರಣರಾಜಿಗಳನಿತ್ತಲಂಕಾರದಿಂದ ॥೩೦॥ ಸಮದೊಳರಸಂಬಳಿಕಭೂಪಾಲಮುನಿವರನಿ । ಚಯದಿಂದಸಕಲಜನಜಾಲ

ಸರಸದಿಂಮಂಗಳಸುವಾದ್ಯರವ | ದಿಂಪೌರ್ವರಣಿಗತಿಗೊಡಚರ್ಯವಕ್ಕತ್ರ
ಸ್ವಸ್ತಿವಾಚನದಘೋಷದಿಂದ ||೩೩|| ಸುತನ್ರ್ಯಾಣತನಯಕೇಳುತ್ಸವದೊಳೀ
ಪರಿದಿ | ನತ್ರಮಂನತೆಯುಳ್ಕೆನಾಲ್ಕನೆಯದಿನದೊಳ್ಗೆ | ಚಿತ್ರದಿಂವಿರಚಿ
ಸಿಹೊಳತ್ರೊವಿಗಸಿನಾಗವಲ್ಲಿಯುಸೊಡಗರ್ಗಳನೊದವಿಸಿ || ಕ್ಷತ್ರಿಯವಿವಾಹ
ವೈಭವದೊಳಿದುಪೊಸತೆನೆಥ |ರಿತ್ರಿಯೊಳ್ಗಿಂದ್ರಹಾಸಂಗಾಯ್ತುಮದುವೆ
ಶಿತ|ಸತ್ರನಾಥನಕಿಂಕರರ್ಗೆವೂಡಿದವಿಘ್ನ್ಯಯಿದುಪಥ್ಯಮಪುದಂದನು ||
ವಿಸ್ತರಿಸಿಮೃಷ್ಟಭೋಜನದನವಕುಸುಮಫಲ | ವಸ್ತುಗಳಕರ್ಪೂರವೀಳ
ಯುವಚಂದನದ | ಕಸ್ತುರಿಜವಾಜಿಗಳಪರಿಮಳವಕರ್ದಮದವಸ್ತ್ರಭೂ
ಷಣವಿತ್ತದ|| ಪ್ರಸ್ತುತದಸನ್ಮಾನದಿಂದಮನ್ನಿಸಿದಂಸ | ಮಸ್ತಜನಮಂವ
ದನನಾಪ್ತಬಂಧುಗಳಂಪ್ರ | ಶಸ್ತಪೂಜೆಗಳಿಂದಸತ್ಕರಿಸಿಕೆಟ್ಟನೆಲ್ಲರ್ದ
ಣಿಯೆತಾಂದಣಿಯದೆ ||೩೪|| ಭಂಡಾರದಖಿಳವಸ್ತುಗಳೊಂದುತ್ರಣವಾಗಿ|
ಕಂಡುವೆಚ್ಚಿಸಿಚಂದ್ರಹಾಸನವಿವಾಹಮಂ | ಕೊಂಡೆಗಗೌತರ್ದನೊಲ
ವಿಂಮದನನಿತ್ತುಕುಂತಳಪುರದೊಳವನತ್ತಲು || ಅಂಡಲೆದುಚಂದನಾವತಿ
ಯೋಳ್ತ್ರಳಿಂದನಂ | ದಂಡಿಸಿದನಾದುಷ್ಟಬುದ್ಧಿಜರೆದುರೆಚೈದು | ಹಿಂ
ಡಿಹಳಿದರ್ಥಮಂತೆಗೆದುಸೆರೆಮನೆಗಿಕ್ಕಿನಿಗಳಮಂಕಾಲ್ಗೆಪೂಡಿ ||೩೫|| ಹೆ
ಕ್ಕಳಿಸಿರಾಜ್ಯಮಂಕೊಟ್ಟರೆನ್ನಂಮರೆದು | ಸೊಕ್ಕಿತನಗೋರ್ವಮಗನಂ
ಮಾಡಿಕೊಂಡವನ | ಮಕ್ಕಳಾಟಿಕೆಯಿಂದದೇವತಾಲಯತಟಾಕಾರಾಮ
ಕೋಂಟೆಗಳಿಗೆ || ಇಕ್ಕಿಕೆಡಿಸಿದನೆಂದವನವಳಿತಮಂತೆಗೆದು | ಕಕ್ಕಸದ
ಬಂಧನದೊಳಿರಿಸಿಕುಂತಳನಗರಿ| ಗಕ್ಕರಿಂದೈತಂದನಾದುಷ್ಟಬುದ್ಧಿವಾಹ
ಕರನವಘಾತಿಸಿನಡಿಸಿ||೩೬||ಕೊಂದಪನೊವಿಷವನೊಡಿಸಿಚಂದ್ರಹಾಸನಂ|
ಮಂದಮತಿಯಾಗಿಮರೆದಿರ್ದಪನೊಮಗನೆಂಬ|ಸಂದೇಹದಿಂಚಂದನಾವತಿ
ಯೊಳಿರದೆಕುಂತಳಪುರಕೆದುಷ್ಟಬುದ್ಧಿ||ನಿಂದಲ್ಲಿನಿಲ್ಲದೈತರೆಪಥದೊಳಿದಿರಾ
ಗಿ|ಬಂದುನುಡಿದುದುಸರ್ಪಮೊಂದುನಿಂನಾಲಯದೊ | ಳಿಂದುವರೆಗೊಡ
ವೆಯುಂಕಾದಿರ್ದನದುನಿನ್ನಸುತನಿಂದಪೋದುದೆಂದು || ಮಾನವರತೆರದೊ
ಳಿಂತೆಂದೊರೆದುಫಣಿಬಿಲಕೆ | ತಾನಿಳಿಯೆಕೇಳ್ದುವಿಸ್ಮಿತನಾಗಿಮಂತ್ರಿದು
ವ್ಮಾನದಿಂನಗರದಸವಿಸಾಸಕ್ಕೈತರೆವಾದ್ಯಘೋಷಂಕಿವಿಯೊಳಗಿಡಿಯೆ ||
ಏನಿದುತ್ಸವಮೂರೊಳೆನೆಕಂಡವರ್ನಿನ್ನ | ಸೂನುಮದನಂಚಂದ್ರಹಾಸಂ
ಗೆತಂಗಿಯುವಿ | ಧಾನದಿಂಮದುವೆಯಂಮಾಡಿಸಿದನದರೊಸಗೆಪೊಳಲೊಳಾ
ದಪುದೆಂದರು ||೩೭|| ಕೂರ್ದಸಿಯುನಿಳುಹಿದಂತಾಯ್ತುಕರ್ಣದೊಳಾಗ|
ಕಾರ್ದವಕ್ಷಿಗಳರುಣತೆಯುನುಗ್ರಕೋಪಂ | ಮಿಾರ್ದನೇತನ್ನನೇಮುಷ

ತನತನಗೆಪ್ಪೊತ್ತ ಬಹುಧನದಭಾರಂಗಳಿಂದ ॥೩೮॥ ರೋಮಶವಸಿಷ್ಠ ಬಕ
ದಾಲ್ಭ್ಯವೇದವ್ಯಾಸ । ವಾಮದೇವಾದಿಮುನಿಮುಖ್ಯರವನೀಶನಂ । ಪ್ರೇ
ಮದಿಂಪರಸಿಮಾನಿತರಾಗಿಬೀಳ್ಕೊಂಡುತಳದರ್ಗರಾಶ್ರಮಕೆಬಳಿಕ ॥ ಭೂ
ಮಿಪತಿಗನೆಲ್ಲರಂಸಕಲಯಾದವ । ಸ್ತೋಮಸಹಿತಂಬುಜದಳಾಕ್ಷನಂಸತ್ಕ
ರಿಸಿಭೀಮಪಾರ್ಥರನೊಡನೊಡನೆಕಳುಹಿದಂನೃಪನವರನಗರಿಗೆಳೆ ॥ ಸಂ
ಭಾವಿಸಿದನದ್ವರದೊಳೆಲ್ಲರಂಬಳಿಕ । ಸಂಭೋಗಮರ್ಜುನಂಗಾಪ್ರಮೀ
ಳೆಯಕೂಡೆ । ಸಂಭವಿಸುವಂತೆನೇಮಿಸಿದನಿಭನಗರದೊಳ್ಕುಂತಿಸಹಿತನು
ಜರೊಡನೆ ॥ ತೊಂಭತ್ತುವರುಷಪರಿಯಂತರದೊಳೈದೆಸುಖ । ದಿಂಭೂ
ವಲಯದಸಾಮ್ರಾಜ್ಯಮಂಮಾಡುತಿ । ರ್ದಂಭಾರತಾಗ್ರಣಿಯುಧಿಷ್ಠಿರಂ
ದೇವಪುರಲಕ್ಷ್ಮೀಶನಾಜ್ಞೆಯಿಂದ ॥೩೯॥ ಈಚತುರ್ದಶಭುವನದೋ
ಳ್ಪಾಂಡವಸ್ಥಾಪ । ನಾಚಾರ್ಯನೆನಿಸಿಕೊಂಬುದೆಪೇರ್ಮೆಯೆಂದುಮನು ।
ಜೋಚಿತದಲೀಲೆಯಂತಳೆದಯಾದವಸಾರ್ವಭೌಮಂನಿಜಾನತರ್ಗೆ ॥ಭೂ
ಚಕ್ರದೊಳ್ಪಸರಿಸುವಕೀರ್ತಿಲತೆಮಾಡ । ಲಾಚಂದ್ರಮಾಗಿರ್ಪತೆರದಿಂದ
ಕವಿಮತಿಗೆ । ಗೋಚರಿಸೆಕೃತಿಗೆನಾಯಕನಾದನಮರಪುರದೊಡೆಯಲ
ಕ್ಷ್ಮೀಕಾಂತನು ॥೪೦॥ ಈಪರಿಯೊಳಾಶ್ವಮೇಧಿಕದವೃತ್ತಾಂತಮಂ ।ತಾ
ಪಸೋತ್ತಮನಾದಜೈಮಿನಿಮುನೀಶ್ವರಂ । ಭೂಪಾಲತಿಲಕಜನಮೇಜ
ಯಂಗೊರೆದಸಂಗತಿಗಳಂಸಕಲಜನಕೆ ॥ ವ್ಯಾಪಿಸಿದಸುಪ್ರೌಢಿಮೆರೆಯೆಕ
ನ್ನಡದಭಾ । ಷಾಪದ್ಧತಿಯೊಣಳ್ಗೆಮಾಂಕನಕುಮಾರಲ ।ಕ್ಷ್ಮೀಪತಿಯ
ಮುಖದಿಂದರಚಿಸಿದಂಕೃತಿಯಾಗೆಸುರಪುರಶ್ರೀಕಾಂತನು ॥೪೧॥ ಅಶ್ವಮೇ
ಧಿಕಪರ್ವದನುಲಸತ್ಕಥೆಯುಮವನಾಶ್ವಾದಿನೃಪಚರಿತಂಕೇಳ್ದಮಾನವರ್ಗೈ
ಶ್ವರ್ಯದಾರೋಗ್ಯದಾಯುಷ್ಯದಭಿವೃದ್ಧಿಕಲಿನಾಶನಂಧರೆಯೊಳು ॥ ಆ
ಶ್ವೇತಕೀರ್ತಿಸುತಲಾಭಶತ್ರುಕ್ಷಯಂ । ಶಾಶ್ವತಸ್ವರ್ಗಭೋಗಂಗಳಾದ
ಪುದು । ಸರ್ವೇಶ್ವರನಭಕ್ತಿದೊರಕೊಂಡಪುದುದೇವಪುರಲಕ್ಷ್ಮೀಶನಾ
ಜ್ಞೆಯಿಂದ ॥೪೨॥ ಉಪವನತಟಾಕಪ್ರತಿಷ್ಠೆದೇವಾಲಯ । ಪ್ರಪೆಗಳಸಕ
ಲದಾನಧರ್ಮೋಪಕಾರವೇ । ದಪುರಾಣಶಾಸ್ತ್ರಶ್ರವಣದಪುಣ್ಯಕ್ಷೇತ್ರ
ವಾಸತೀರ್ಥಸ್ನಾನದ ॥ ಜಪಹೋಮಸುವ್ರತಸಮಾಧಿಯೋಗಧ್ಯಾನ ।
ತಪಸುಗಳಹರಿಹರಾರ್ಚನೆಯಸುಕೃತಂಗಳಾ । ದಪುದುಜೈಮಿನಿಭಾರತ
ದೊಳೊಂದುವರ್ಣಮಂಪ್ರೀತಿಯಿಂಕೇಳ್ದವರ್ಗೆ ॥೪೩॥ ತೊಳಗ್ವವಸುವ
ರ್ಣಭೂಷಣದಿಂದಸೇರಿಸಿದ ।ಲಲಿತಮುಕ್ತಾಭರಣದಿಂದಮಿಗೆರಂಜಿಸುವ।
ಪಲವಲಂಕಾರಂಗಳಡಿದಚಲ್ವಿನದೇವಪುರದಲಕ್ಷ್ಮೀಕಾಂತನ ॥ ವಿಲಸಿತ

ದಕೃತಿಲಲನೆಮೃದುಪದವಿಲಾಸದಿಂ । ಸಲೆಸೊಗಸಲಡಿಗಡಿಗೆನಡೆಯಲ್ಕೆ ಚಿತ್ತಂಗಳೊಲಿದೆರಗದಿರ್ದಪವೆಧರೆಯೊಳಗೆರಸಿಕರಾಗಿರ್ದ ಭಾವಕನಿಕರದ ॥ ೪೪॥ ಲೋಕದೊಳಖಿಳಪುಣ್ಯಕರ್ಮದಿಂಧರ್ಮದಿಂ । ದೇಕಾಗ್ರಮಾಗಿರ್ದಯೋಗದಿಂಯಾಗದಿಂ । ಭೂಕನಕಮಣಿಧೇನುದಾನದಿಂಧ್ಯಾನದಿಂಪಡೆವಸದ್ಗತಿಯನೀವ ॥ ಈಕಥೆಯನೊಲವಿಂದಕೇಳ್ದಗೆ । ಶೋಕಭಯದುಃಖಸಂತಾಪಮಂಪಾಪಮಂ ।ನೂಕಿನಿರ್ಮಲತರಸ।ಬುದ್ಧಿಯಂಹರಿಕೊಡುತಿಹಂಕೃಪೆಯೊಳು ॥೪೫॥ ಪುಣ್ಯಮಿದುಕೃಷ್ಣಚರಿತಾಮೃತಂಸುಕವೀಂದ್ರ।ಗಣ್ಯಮಿದುಶೃಂಗಾರಕುಸುಮತರುತುರಗಿದಾರಣ್ಯಮಿದುನವರಸಪ್ರೌಢಿಲಾಲಿತ್ಯನಾನಾವಿಚಿತ್ರಾರ್ಥಂಗಳ ॥ ಪುಣ್ಯಮಿದುಶಾರದೆಯಸನ್ಮೋಹನಾಂಗಲಾ । ವಣ್ಯಮಿದುಭೂತಳದೊಳೆನೆವಿ।ರಾಜಿಪುದುಲಕ್ಷ್ಮೀಪತಿಯಕಾವ್ಯರಚನೆ ॥೪೬॥ ಧರಣಿಯೊಳ್ ಜೈಮಿನಿಮುನೀಂದ್ರನತಿಪೇರ್ಮೆಯೊಳ್ವರಮಹಾಭಾರತಕಥಾಮೃತಾಬ್ಧಿಯೊಳೊಪ್ಪುವ । ರದಾಶ್ವಮೇಧಿಕದಪರ್ವಮಂಸುರಪುರದಲಕ್ಷ್ಮೀಶಕಂನಡದೊಳು ॥ ವಿರಚಿಸಿದಕೃತಿಗೆಪಟ್ಫರಣದಿಂಮಾಧುರ್ಯ।ಸರಸಪದಬಂಧಗಳ್ಗೆಣಿಸಲ್ಕೆ । ಶರಧಿಯುಂಬರನಿಧಿಶಶಾಂಕಸಂಜ್ಞೆಗಳ್ಮೈದಳೆದನೊಲಿದುಭಾವಿಪುದುಸರ್ವಜನರು

ಚತುಸ್ತ್ರಿಂಶತ್ಸಂಧಿ ಸಂಪೂರ್ಣಂ

ಸಂಧಿ ೩೪ಕ್ಕೆ ಪದ್ಯಗಳು ೧೯೦೩ಕ್ಕೆ ಮಂಗಳಮಸ್ತು

ಜೈಮಿನಿ ಭಾರತವು ಮುಗಿದುದು.



